

# ಭಾಷಾ ಭಾರತಿ

## ಚಾತುರ್ಮಾಸಿಕ

ಸಂಪುಟ 1 | ಸಂಚಿಕೆ 1 | ಮೇ–ಆಗಸ್ಟ್ 2020

ಪ್ರಧಾನ ಸಂಪಾದಕರು: ಅಜಕ್ಕಳ ಗಿರೀಶ ಭಟ್

ಸಂಪಾದಕರು: ಎಂ.ಎಸ್. ಚೈತ್ರ, ಸ. ಗಿರಿಜಾಶಂಕರ್, ಅಜ್ಜಂಪುರ ಮಂಜುನಾಥ



ಕುವೆಂಪು ಭಾಷಾ ಭಾರತಿ ಪ್ರಾಧಿಕಾರ

ಕಲಾಗ್ರಾಮ, ಜ್ಞಾನಭಾರತಿ, ಬೆಂಗಳೂರು ವಿಶ್ವವಿದ್ಯಾಲಯ ಆವರಣ ಹಿಂಭಾಗ,

ಮಲ್ಲತ್ತಹಳ್ಳಿ, ಬೆಂಗಳೂರು – 560 056.

# ಭಾಷಾ ಭಾರತಿ

## ಚಾತುರ್ಮಾಸಿಕ

ಪ್ರಾಯೋಗಿಕ ಸಂಚಿಕೆ – ೧

(ಮೇ–ಆಗಸ್ಟ್ ೨೦೨೦)

ಪ್ರಧಾನ ಸಂಪಾದಕರು:

**ಡಾ. ಅಜಕ್ಕಳ ಗಿರೀಶ ಭಟ್**

ಸಂಪಾದಕರು:

**ಶ್ರೀ ಎಂ.ಎಸ್. ಚೈತ್ರ**
**ಶ್ರೀ ಸ. ಗಿರಿಜಾಶಂಕರ್**
**ಶ್ರೀ ಅಜ್ಜಂಪುರ ಮಂಜುನಾಥ**



**ಕುವೆಂಪು ಭಾಷಾ ಭಾರತಿ ಪ್ರಾಧಿಕಾರ**

ಕಲಾಗ್ರಾಮ, ಜ್ಞಾನಭಾರತಿ
ಬೆಂಗಳೂರು ವಿಶ್ವವಿದ್ಯಾಲಯ ಆವರಣದ ಹಿಂಭಾಗ, ಮಲ್ಲತ್ತಹಳ್ಳಿ
ಬೆಂಗಳೂರು – ೫೬೦ ೦೫೬

**Bhasha Bharathi Chathurmasika** - Published by Sri Ishwar K. Mirji, Registrar, Kuvempu Bhasha Bharathi Pradhikara, Kalagrama, Jnana Bharathi, Mallattahalli, Bengaluru-560 056; p.p: viii + 130.

ಮೇ-ಆಗಸ್ಟ್, ೨೦೨೦



ಮುದ್ರಣ : ೨೦೨೦
ಪುಟಗಳು : viii + ೧೩೦
ಪ್ರಾಯೋಗಿಕ ಸಂಚಿಕೆ - ೧
ಪ್ರತಿಗಳು : ೬೦೦

ಪ್ರಕಾಶಕರು
**ಶ್ರೀ ಈಶ್ವರ್ ಕು. ಮಿರ್ಜಿ**
ರಿಜಿಸ್ಟ್ರಾರ್
ಕುವೆಂಪು ಭಾಷಾ ಭಾರತಿ ಪ್ರಾಧಿಕಾರ
ಕಲಾಗ್ರಾಮ, ಜ್ಞಾನಭಾರತಿ
ಬೆಂಗಳೂರು ವಿಶ್ವವಿದ್ಯಾಲಯ ಆವರಣದ ಹಿಂಭಾಗ
ಮಲ್ಲತ್ತಹಳ್ಳಿ, ಬೆಂಗಳೂರು-೫೬೦ ೦೫೬

ಮುಖಪುಟ ವಿನ್ಯಾಸ : **ಹೆಚ್. ವೀರೇಶ್**



ಮುದ್ರಕರು
**ರಾಜಾ ಪ್ರಿಂಟರ್ಸ್**
ನಂ. ೨೦/೧, ೧ನೇ ಅಡ್ಡರಸ್ತೆ, ३ನೇ ಮುಖ್ಯ ರಸ್ತೆ
ಮಿಶ್ರಾಜ್ ಲೇಔಟ್, ಬನ್ನೇರುಘಟ್ಟ ರಸ್ತೆ
ಬೆಂಗಳೂರು-೫೬೦ ೦೩೦. ದೂ: ೦೮೦-೨೨೨೩೪೦೬೬

# ಅಧ್ಯಕ್ಷರ ಮಾತು

ಜ್ಞಾನ ಮತ್ತು ಸಾಹಿತ್ಯದ ನಿರಂತರ ಕೊಡುಕೊಳ್ಳುವಿಕೆಯ ಮೂಲಕ ಕನ್ನಡ ಸಂಸ್ಕೃತಿಯ ಸಂವರ್ಧನೆಯಾಗಬೇಕು ಎಂಬುದು ಕುವೆಂಪು ಭಾಷಾಭಾರತಿ ಪ್ರಾಧಿಕಾರದ ಧ್ಯೇಯವಾಗಿದೆ. ಯಾವುದೇ ಒಂದು ಭಾಷಾ ಸಂಸ್ಕೃತಿ ಬೆಳೆಯಬೇಕಾದರೆ ಇತರ ಭಾಷೆಗಳೊಡನೆ ನಿರಂತರ ಕೊಡುಕೊಳ್ಳುವಿಕೆ ಅನಿವಾರ್ಯ. ಅನುವಾದದ ಮೂಲಕ ಈ ಕೊಡುಕೊಳ್ಳುವಿಕೆ ನಡೆಯುತ್ತಿರಬೇಕಾಗುತ್ತದೆ.

ಪ್ರಾಚೀನ ಕಾಲದಿಂದಲೂ ಒಂದಲ್ಲ ಒಂದು ಬಗೆಯಲ್ಲಿ ಭಾಷಾಂತರ ಕಾರ್ಯ ನಡೆಯುತ್ತ ಬಂದಿರುವುದನ್ನು ಕಾಣುತ್ತೇವೆ. ಭಾಷಾಂತರ ಎಂದರೇನು; ಭಾಷಾಂತರ ಹೇಗಿರಬೇಕು; ಭಾಷಾಂತರದ ವಿವಿಧ ನಮೂನೆಗಳಾವುವು; ಭಾಷಾಂತರಕಾರರಿಗೆ ಇರಬೇಕಾದ ಅರ್ಹತೆಗಳೇನು ಮುಂತಾದ ಪ್ರಶ್ನೆಗಳನ್ನು ಇಟ್ಟುಕೊಂಡು ಭಾಷಾಂತರ ಮೀಮಾಂಸೆಯೂ ಬೆಳೆಯುತ್ತಿದೆ. ಅದರಲ್ಲೂ ಈಚಿನ ವರ್ಷಗಳಲ್ಲಿ ವಿಶ್ವವಿದ್ಯಾನಿಲಯಗಳಲ್ಲಿ ಭಾಷಾಂತರ ಅಧ್ಯಯನ ವಿಭಾಗಗಳು ಆರಂಭವಾಗಿರುವುದರಿಂದ ಈ ಬಗೆಯ ತಾತ್ವಿಕ ಜಿಜ್ಞಾಸೆಗಳಿಗೆ ಹೆಚ್ಚಿನ ಅವಕಾಶ ಒದಗಿದೆ.

ಭಾಷಾಂತರದ ಬಗೆಗಿನ ತಾತ್ವಿಕ ಚರ್ಚೆಗಳನ್ನು ನಡೆಸುವವರಿಗೆ ಅಂಥ ಚರ್ಚೆಗಳನ್ನು ಅಥವಾ ಚಿಂತನೆಗಳನ್ನು ಹಂಚಿಕೊಳ್ಳಲು ಸೂಕ್ತವಾದ ವೇದಿಕೆಯ ಅಗತ್ಯವಿದೆ. ಅದೇ ರೀತಿ ಕಥೆ, ಕವಿತೆ, ಲೇಖನ ಇತ್ಯಾದಿ ವಿವಿಧ ಬಗೆಯ ಬರಹಗಳನ್ನು ಅನುವಾದಿಸಿದವರಿಗೆ ಅವುಗಳನ್ನು ಪ್ರಕಟಿಸುವ ಪತ್ರಿಕೆಗಳ ಅಗತ್ಯ ಕೂಡ ಇದೆ. ಈ ಹಿನ್ನೆಲೆಯಲ್ಲಿ ಕುವೆಂಪು ಭಾಷಾ ಭಾರತಿ ಪ್ರಾದೀಕಾರವು ಭಾಷಾ ಭಾರತಿ ಎಂಬ ಹೆಸರಿನಲ್ಲಿ ಚಾತುರ್ಮಾಸಿಕ ಪತ್ರಿಕೆಯೊಂದನ್ನು ಆರಂಭಿಸಿದ್ದು ಇದೀಗ ಮೊದಲ ಪ್ರಾಯೋಗಿಕ ಸಂಚಿಕೆ ಪ್ರಕಟವಾಗುತ್ತಿದೆ.

ಇದಕ್ಕಾಗಿ ಶ್ರಮಿಸಿದ ಸಂಪಾದಕರಾದ ಶ್ರೀ ಎಂ ಎಸ್ ಚೈತ್ರ, ಶ್ರೀ ಸ. ಗಿರಿಜಾ ಶಂಕರ್ ಹಾಗೂ ಶ್ರೀ ಅಜ್ಜಂಪುರ ಮಂಜುನಾಥ ಅವರಿಗೆ ಕೃತಜ್ಞತೆಗಳು ಸಲ್ಲುತ್ತವೆ. ಹಾಗೆಯೇ ಆಡಳಿತಾತ್ಮಕವಾಗಿ ಇದನ್ನು ಆಗು ಮಾಡಿದ ರಿಜಿಸ್ಟ್ರಾರ್ ಈಶ್ವರ್ ಕು ಮಿರ್ಜಿಯವರಿಗೆ, ಪ್ರಾಧಿಕಾರದ ಹೊಸ ಹೊಸ ಉಪಕ್ರಮಗಳಗೆ ಬೆಂಬಲವಾಗಿ

ಚರ್ಚೆಗಳನ್ನು ಅರಿತುಕೊಳ್ಳಲು, ನಮ್ಮ ಪ್ರಾಧಿಕಾರದ ವತಿಯಿಂದ ಆರಂಭಿಸಿರುವ "ಭಾಷಾ ಭಾರತಿ" ಎನ್ನುವ ಈ ಚಾತುರ್ಮಾಸಿಕದ ಮೊದಲ ಸಂಚಿಕೆಯನ್ನು ನಿಮ್ಮ ಮುಂದಿರಿಸುತ್ತಿದ್ದೇವೆ. ಈ ಪ್ರಾಯೋಗಿಕ ಸಂಚಿಕೆಯನ್ನು ತಯಾರಿಸಲು ಪ್ರಾಧಿಕಾರದ ಸರ್ವ ಸದಸ್ಯರು ಹಾಗೂ ಸಂಪಾದಕ ಮಂಡಳಿ ಸದಸ್ಯರು ಶ್ರಮವಹಿಸಿದ್ದಾರೆ. ಲೇಖಕರು ಪ್ರೀತಿಯಿಟ್ಟು ಬರಹಗಳನ್ನು ಕಳುಹಿಸಿಕೊಟ್ಟಿದ್ದಾರೆ. ನಮ್ಮ ಮೊದಲನೇ ಪ್ರಾಯೋಗಿಕ ಸಂಚಿಕೆಯ ಕುರಿತು ನಿಮ್ಮ ಪ್ರತಿಕ್ರಿಯೆಯನ್ನು ನಿರೀಕ್ಷಿಸುತ್ತೇವೆ.

– ಎಂ.ಎಸ್. ಚೈತ್ರ

## ಪುಟನೋಟ

---

# ದೇಶಭಾಷೆಗಳ ಅನುವಾದ: ಹಳೆಗನ್ನಡ ಪಠ್ಯಗಳ ಅನುಸಂಧಾನ

*– ಡಾ. ಮಹಾಂತೇಶ ಪಾಟೀಲ*

ಭಾರತ ಹಲವು ದೇಶಭಾಷೆಗಳಿಂದ ಕೂಡಿದ ಜಗತ್ತು. ಈ ಜಗತ್ತುಗಳ ನಡುವೆ ಜ್ಞಾನದ ಸೇತುವೆಯಾಗಿ ಅನುವಾದವು ಕಾರ್ಯನಿರ್ವಹಿಸುತ್ತ ಬಂದಿದೆ. ದೇಶಭಾಷೆಗಳ ಚರಿತ್ರೆಯೊಡನೆಯೆ ಅನುವಾದ ಪ್ರಕ್ರಿಯೆಯು ನಡೆದಿರುವುದಕ್ಕೆ ನಿದರ್ಶನಗಳು ದೊರಕುತ್ತವೆ. ಒಂದು ಭಾಷೆಯ ಪಠ್ಯವನ್ನು ಮತ್ತೊಂದು ಭಾಷೆಯ ಪಠ್ಯವಾಗಿಸುವ ಸೃಜನಶೀಲ ಕುಶಲತೆಯು ಅನುವಾದ ಎನಿಸುತ್ತದೆ. ಅನುವಾದಕ್ಕೆ ಭಾಷಿಕ ಪರಿಸರ ಮಾತ್ರ ಸೀಮಿತವಾಗದೆ, ಅದು ಸಾಂಸ್ಕೃತಿಕ, ರಾಜಕೀಯ, ಧಾರ್ಮಿಕ, ಸಾಮಾಜಿಕ ಸಂಗತಿಗಳೊಡನೆ ನಡೆಯುವ ಪ್ರಕ್ರಿಯೆಯಾಗಿದೆ. ಅವುಗಳು ಅನುವಾದದ ಬಹುಮುಖ ಗುಣವನ್ನು ಪ್ರತಿನಿಧಿಸುತ್ತವೆ. ಚರಿತ್ರೆಯ ಕಾಲಾವಧಿಯಲ್ಲಿ ನಾನ್‌ಅಕಡೆಮಿಕ್ ಸಾಹಿತ್ಯ ಚಟುವಟಿಕೆಯಾಗಿ ಬೆಳೆದು ಬಂದಿರುವ ಅನುವಾದವು, ವಸಾಹತ್ತೋತ್ತರ ಕಾಲದ ನಂತರದಲ್ಲಿ ಅದೊಂದು ಅಕಡೆಮಿಕ್ ಶಿಸ್ತಾಗಿ ಬೆಳೆಯಿತು. ಈ ಕಾಲದ ಜ್ಞಾನದ ಅಗತ್ಯಗಳಿಂದಾಗಿ, ಅನುವಾದಕ್ಕೆ ಸಾಕಷ್ಟು ಮನ್ನಣೆಯು ದೊರಕಿತು. ಆಧುನಿಕ ಜ್ಞಾನಶಿಸ್ತುಗಳು ಅಭಿವೃದ್ಧಿಯಲ್ಲಿ ಅನುವಾದಗಳ ಪ್ರಾಮುಖ್ಯತೆಯಿಂದ 'ಟ್ರಾನ್ಸ್ಲೇಷನ್‌ಮಿಷನ್'ಗಳು ಹುಟ್ಟಿಕೊಂಡವು. ಜೊತೆಗೆ ಸಾಹಿತ್ಯ ಅಧ್ಯಯನದಲ್ಲಿ 'ಅನುವಾದ'ವು ಮುಖ್ಯಸ್ಥಾನವನ್ನು ಪಡೆದುಕೊಂಡಿತು.

ಭಾರತದ ದೇಶಭಾಷೆಗಳಲ್ಲಿ ಸಾಂಸ್ಕೃತಿಕವಾಗಿ ಶ್ರೀಮಂತವಾಗಿರುವ ಕನ್ನಡ ಭಾಷೆಯು ಬಹುಹಿಂದಿನ ಕಾಲದಿಂದಲೂ ಅನುವಾದಕ್ಕೆ ಒಳಗಾಗಿಯೇ ಬೆಳೆದುಬಂದಿದೆ. ಚಾರಿತ್ರಿಕವಾದ ಅನುವಾದ ಪರಂಪರೆಗೆ ಅಕಡೆಮಿಕ್ ಶಿಸ್ತನ್ನು ಹುಡುಕುವುದು ಸೂಕ್ತವಲ್ಲವಾದರೂ, ಸಾಂಪ್ರದಾಯಿಕ ಮಾದರಿಯ ಅನುವಾದಗಳ

ಸ್ವರೂಪವನ್ನು ಕುರಿತು ವಿವೇಚಿಸಲು ಅವಕಾಶಗಳಿವೆ. ದೇಶಭಾಷೆಯಾಗಿ ಕನ್ನಡವು ಹಳೆಗನ್ನಡ, ನಡುಗನ್ನಡ, ಹೊಸಗನ್ನಡ ಕಾಲಗಳಲ್ಲಿ, ಆಯಾ ಕಾಲದ ಅಗತ್ಯಗಳಿಗೆ ಅನುಸಾರವಾಗಿ ಅನುವಾದಗಳ ಮೂಲಕ ವಿಸ್ತಾರಗೊಳ್ಳುತ್ತ ಬಂದಿದೆ. ಹೊಸ ಸಾಹಿತ್ಯ ಪ್ರಕಾರಗಳು, ಸಾಹಿತ್ಯ ಪರಿಭಾಷೆಗಳು ಹುಟ್ಟಲು ಅನುವಾದಗಳೇ ಮೂಲಭೂತ ಕಾರಣವೆಂದರೆ ತಪ್ಪಾಗದು.

ಪ್ರಸ್ತುತ ಲೇಖನದಲ್ಲಿ ಹಳೆಗನ್ನಡ ಪಠ್ಯಗಳು ರಚನೆಯಾದ ಕಾಲದಲ್ಲಿ ಅನುಸರಿಸಿದ ಭಾಷಾಂತರದ ಸ್ವರೂಪವನ್ನು ವಿಶ್ಲೇಷಿಸುವುದು ಮತ್ತು ನಾವಿಂದು ಅವುಗಳನ್ನು 'ಕ್ಲಾಸಿಕಲ್ ಕನ್ನಡ ಟೆಕ್ಸ್ಟ್' ಹೆಸರಿನಲ್ಲಿ ಬೇರೆಬೇರೆ ದೇಶಭಾಷೆಗಳಿಗೆ ಅನುವಾದಿಸುವಲ್ಲಿ ಅನುಸರಿಸುತ್ತಿರುವ ವಿಧಾನಗಳನ್ನು ಚರ್ಚಿಸಲಾಗಿದೆ. ಕ್ರಿ.ಶ ಎಂಟನೆಯ ಶತಮಾನದಿಂದಲೂ ಕನ್ನಡದಲ್ಲಿ ಸಂಸ್ಕೃತ, ಪ್ರಾಕೃತ ಭಾಷೆಗಳಿಂದ ಮಹಾಕಾವ್ಯ, ಪುರಾಣ, ಕಥೆಗಳು ಪುನರ್‌ಲೇಖನಗೊಂಡಿವೆ. ಆದರೆ ಆ ಕಾಲದ ಕವಿಗಳಾಗಲಿ, ಲಾಕ್ಷಣಿಕರಾಗಲಿ 'ಅನುವಾದ', 'ಭಾಷಾಂತರ'ಗಳ ಹೆಸರನ್ನು ಪ್ರಸ್ತಾಪಿಸಿಲ್ಲ. ಹೆಸರನ್ನು ಪ್ರಸ್ತಾಪಿಸದಿದ್ದರೂ, ಪಂಪ ಹೇಳುವ 'ಬಗೆ **ಪೊಸತಪ್ಪುದಾಗಿ...**' ಪದ್ಯದ ಸಾಲುಗಳು, ದುರ್ಗಸಿಂಹನ '**ಪೊಸತಾಗಿರೆ ವಿರಚಿಸುವೆಂ**/ ವಸುಮತಿಯೊಳ್ ಪಂಚತಂತ್ರಮನ್ ಕನ್ನಡದಿಂ' ಎಂಬ ಉಲ್ಲೇಖ, ಒಂದನೇ ನಾಗವರ್ಮನು 'ಆ ಕೃತಿ ಮುನ್ನಂ ಚೆಲ್ವಿಂಗಾಕರಮೆನಿಸಿರ್ದು ಮತ್ತೆ **ಕನ್ನಡಿಸಿತ್ತಿನೀ ಕವಿತೆಯಿಂ**' ಸಾಲುಗಳಲ್ಲಿ ಮೂಲಪಠ್ಯವನ್ನು ಕನ್ನಡದಲ್ಲಿ 'ಮರುಸೃಷ್ಟಿ, ಪುನಃಸೃಷ್ಟಿ, ಹೊಸದಾಗಿ, ಕನ್ನಡಿಕರಿಸುತ್ತಿರುವುದಾಗಿ' ಎನ್ನುವ ಮಾತಿನಲ್ಲಿಯೇ, ಅವರಿಗಿದ್ದ ಅನುವಾದ ಪ್ರಜ್ಞೆಯನ್ನು ನಿರೂಪಿಸುತ್ತದೆ.

**ಅನುವಾದ ಸಂಕಥನ:**

'ಸ್ವತಂತ್ರ ಕಾವ್ಯದ ಪೈರು ಹುಟ್ಟುವುದಕ್ಕೆ ಮೊದಲು ನಡೆದಿರಬೇಕಾದ ಉಳುಮೆಯ ಕೆಲಸವೇ ತರ್ಜುಮೆ' ಎನ್ನುತ್ತಾರೆ ಡಿ.ವಿ.ಜಿಯವರು. ಈ ಮಾತು ಹಳೆಗನ್ನಡ, ಹೊಸಗನ್ನಡದ ಹೊಸ ಸಾಹಿತ್ಯ ಪೈರಿನ ಬೆಳವಣಿಗೆಯಲ್ಲಿ, ಅನುವಾದದ ಮಹತ್ವವನ್ನು ಎತ್ತಿಹಿಡಿಯುತ್ತದೆ. ಪಂಪನಿಗಿಂತ ಪೂರ್ವದಲ್ಲಿಯೇ ಚಂಪೂಕಾವ್ಯ ಪ್ರಕಾರವೊಂದರ ಹಿಂದೆ ಸ್ಫೂರ್ತಿಯಾಗಿ ಅನುವಾದವು ಕೆಲಸ ನಿರ್ವಹಿಸಿದಂತೆ, ಹೊಸಗನ್ನಡ ಪೂರ್ವದ ಬಿ.ಎಂ. ಶ್ರೀಕಂಠಯ್ಯನವರ ಕಾಲದಿಂದಲೂ ಅನುವಾದ ಸಂಕರಗೊಂಡು, ಸಾಹಿತ್ಯದ ಹೊಸ ಪುನರುಜ್ಜೀವನ ನಿರ್ಮಾಣಗೊಳ್ಳಲು ಕಾರಣವಾಯಿತು. ಹೀಗೆ ಅನುವಾದದ ಮೂಲಕವಾಗಿ ಉದ್ದಿಷ್ಟಭಾಷೆಯು ಪದಸಂಪತ್ತು, ಭಾಷಾಕುಶಲತೆಗಳನ್ನು ಪಡೆದುಕೊಂಡು, ಭಾಷೆಗೆ ಹೊಸ ಶಕ್ತಿ ಒದಗುತ್ತದೆ. ಆ ಶಕ್ತಿಯಿಂದಾಗಿಯೇ ಕನ್ನಡ ಭಾಷಾ ಸಾಮರ್ಥ್ಯ ವೃದ್ಧಿಯಾಗಿ, ಸಾಹಿತ್ಯವು ಸತ್ವಯುತವಾಗುತ್ತ ಸಾಗಿಬಂದಿದೆ.

ಹಳೆಗನ್ನಡದ ಅನುವಾದದ ಸ್ವರೂಪದ ಬಗೆಗೆ ಆಲೋಚಿಸುವುದಾದರೆ, ಸಂಸ್ಕೃತ, ಪ್ರಾಕೃತ, ಪಾಳಿ, ಪೈಸಾಚಕ ಭಾಷೆಗಳಿಂದ ದೇಶಭಾಷೆಗಳಿಗೆ ಅನುವಾದದ ಪ್ರಕ್ರಿಯೆಯು ನಡದಿದ್ದರೂ, 'ತಾತ್ವಿಕ ಚರ್ಚೆ'ಯು ನಡೆದಿಲ್ಲ. 'ಭಾಷಾಂತರದ ಯಶಸ್ಸು ಮೂಲದ ಭಾವಗಳನ್ನು ಅದು ಎಷ್ಟರಮಟ್ಟಿಗೆ ಬಿಂಬಿಸುತ್ತದೆ' ಎಂಬುವುದರಲ್ಲಿ ಅನುವಾದದ ಸಾಫಲ್ಯವಿರುತ್ತದೆ. ಆದರೆ ಈ ಮಾತನ್ನು ಮೀರುವಂತೆ ಶ್ರೀವಿಜಯ, ಪಂಪ, ರನ್ನ, ಬ್ರಾಜಿಷ್ಣು, ಜನ್ನ, ಕುಮಾರವ್ಯಾಸರ ಭಾಷಾಂತರಗಳಿವೆ. "ಸಂಸ್ಕೃತ ಮತ್ತು ಪ್ರಾಕೃತ ಕಾವ್ಯ ಮತ್ತು ಪುರಾಣ ಕಾವ್ಯಗಳನ್ನು ಕನ್ನಡದಲ್ಲಿ ಮರುಬರೆಯುವ ಅಭೀಪ್ಸೆಯೊಂದು ಕಾಣಿಸಿಕೊಂಡಿತು. ಈ ಅಭೀಪ್ಸೆ ಕನ್ನಡ ಸಾಹಿತ್ಯ ಪರಂಪರೆಯ ಮೂಲದ್ರವ್ಯವಾಗಿ ಕೆಲಸ ಮಾಡಿತು. ಜೈನಪುರಾಣಗಳು, ರಾಮಾಯಣ, ಮಹಾಭಾರತ, ಆದಿಕಾವ್ಯಗಳು, ಬೃಹತ್ಕಥಾಕೋಶ ಇತ್ಯಾದಿಗಳು ಕನ್ನಡಕ್ಕೆ ಅವತರಿಸಿದವು."(1)

ಹಳೆಗನ್ನಡ ಕವಿಗಳನ್ನು ಅಧ್ಯಯನ ಮಾಡಿದಾಗ 'ಭಾಷಾಂತರದ ಸೈದ್ಧಾಂತಿಕ ತತ್ವಗಳಾದ 'ವಿಧೇಯತೆ, ಸಮಗ್ರತೆ ತತ್ವಗಳನ್ನು ಉಲ್ಲಂಘಿಸಿದ್ದಾರೆಂಬುದು ಅನುಭವಕ್ಕೆ ಬರುತ್ತದೆ. ಪಂಪ, ಪೊನ್ನ, ರನ್ನ, ಜನ್ನಾದಿಗಳೆಲ್ಲ ಧಾರ್ಮಿಕ (ಅಲೌಕಿಕ, ಮಾರ್ಗ, ವಸ್ತುಕ) ಕಾವ್ಯಗಳನ್ನು ಪುನರ್‌ಸೃಷ್ಟಿಸುವಾಗ ಒಂದು ಚೌಕಟ್ಟಿನೊಳಗೆ ಇಟ್ಟು ಮೂಲಪಠ್ಯವನ್ನು ಕನ್ನಡಿಕರಣಗೊಳಿಸಿದ್ದಾರೆ. ಆದರೆ ಸಾಮಾಜಿಕ (ಲೌಕಿಕ, ದೇಸಿ, ವರ್ಣಕ) ಕಾವ್ಯಗಳ ವಿಚಾರಕ್ಕೆ ಬಂದಾಗ ಮೂಲಪಠ್ಯಕ್ಕೆ ಸಲ್ಲಿಸಬೇಕಾದ ಬದ್ಧತೆಯನ್ನು ತೋರಿಸುವುದಿಲ್ಲ. ಅಂತಹ ಸಂದರ್ಭಗಳಲ್ಲಿ ಅವರು ಹೆಚ್ಚು ಸ್ವತಂತ್ರವನ್ನು ಬರಹದಲ್ಲಿ ಪ್ರದರ್ಶಿಸುತ್ತಾರೆ. ಪುರಾಣ ಪಾತ್ರಗಳನ್ನು ಚಾರಿತ್ರಿಕಗೊಳಿಸುತ್ತಾರೆ, ಚಾರಿತ್ರಿಕ ಸಂಗತಿಗಳನ್ನು ವರ್ತಮಾನ ಸಮಾಜದೊಡನೆ ಮುಖಾಮುಖಿ ಗೊಳಿಸುತ್ತಾರೆ. ಆ ಮೂಲಕ ಅನುವಾದದ ಪ್ರಧಾನ ಆಶಯವಾದ 'ಆನಂದ ತತ್ವ'ವನ್ನು ಸಾಧಿಸುತ್ತಾರೆ.

**ಹಳೆಗನ್ನಡ ಅನುವಾದದ ಸ್ವರೂಪ:**

ಹಳೆನ್ನಡದ ಮೊದಮೊದಲ ಅನುವಾದಗಳು ನೇರ ಭಾಷಾಂತರವಾಗಿರಲಿಲ್ಲ. ಸಂಸ್ಕೃತ, ಪ್ರಾಕೃತ ಭಾಷೆಯ ಕೃತಿಗಳ ರೂಪಾಂತರಗಳಾಗಿದ್ದವು. ಸಂಸ್ಕೃತದ ದಂಡಿಯ ಕಾವ್ಯಾದರ್ಶ, ಭಾಮಹನ ಕಾವ್ಯಾಲಂಕಾರವನ್ನು ಶ್ರೀವಿಜಯನು 'ಕವಿರಾಜಮಾರ್ಗ', ಪ್ರಾಕೃತದ ವಡ್ಡಾರಾಧನೆಯನ್ನು ಭ್ರಾಜಿಷ್ಣು 'ಆರಾಧನಾ ಕರ್ನಾಟಕಾಟೀಕಾ', ವ್ಯಾಸಭಾರತವನ್ನು ಪಂಪ 'ವಿಕ್ರಮಾರ್ಜುನವಿಜಯ', ಬಾಣನ ಕಾದಂಬರಿಯನ್ನು ಒಂದನೇ ನಾಗವರ್ಮ 'ಕರ್ನಾಟಕ ಕಾದಂಬರಿ', ಕುಮಾರವ್ಯಾಸ 'ಕರ್ನಾಟಕ ಭಾರತ ಕಥಾಮಂಜರಿ'ಯಾಗಿಸುತ್ತಾನೆ. ಹೀಗೆ ಹಳೆಗನ್ನಡ

ಕವಿಗಳು ಸಂಸ್ಕೃತ ಪಠ್ಯಗಳನ್ನು ಕನ್ನಡೀಕರಣಗೊಳಿಸುತ್ತಾರೆ. ಈ ಭಾಷಾಂತರ ವಿಧಾನವನ್ನು ಕೀರ್ತಿನಾಥ ಕುರ್ತಕೋಟಿರವರು 'ಪುನರ್ಲೇಖ' ಎನ್ನುತ್ತಾರೆ. ಕನ್ನಡ ಕವಿಗಳು ಸಂಸ್ಕೃತದಿಂದ ಕನ್ನಡಕ್ಕೆ ಭಾಷಾಂತರಿಸುವಾಗ, ಭಟ್ಟಾಕಳಂಕನು ಮಾತ್ರ 'ಕರ್ನಾಟಕ ಶಬ್ದಾನುಶಾಸನ'ವನ್ನು ಸಂಸ್ಕೃತದಲ್ಲಿ ಕನ್ನಡ ವ್ಯಾಕರಣ ಬರೆಯುತ್ತಾನೆ. ವಸಾಹತುಶಾಹಿ ಕಾಲದಲ್ಲೂ ದೇಶಭಾಷೆಗಳಲ್ಲಿ ಇಂಗ್ಲಿಷ್‌ನಿಂದ ಕೃತಿಗಳನ್ನು ಭಾಷಾಂತರಿಸುವುದರಲ್ಲಿ ನಿರತವಾಗಿದ್ದ ಕಾಲದಲ್ಲಿಯೇ, ಹಲವು ಮಿಶನರಿ ಅಧಿಕಾರಿಗಳು ದೇಶಭಾಷೆಗಳಲ್ಲಿನ ಪಠ್ಯಗಳನ್ನು ಇಂಗ್ಲಿಷ್, ಜರ್ಮನ್, ಪ್ರೇಂಚ್, ಲ್ಯಾಟಿನ್ ಭಾಷೆಗಳಿಗೆ ಅನುವಾದಿಸುವಲ್ಲಿ ತೋರಿದ ಆಸಕ್ತಿಯನ್ನು ನಾವಿಲ್ಲಿ ನೆನಪಿಸಿಕೊಳ್ಳಬಹುದು.

ಹಳೆಗನ್ನಡ ಕಾಲದ ಸಂದರ್ಭದಲ್ಲಿ ಅನ್ಯಭಾಷೆಯ ಪಠ್ಯಗಳನ್ನು, ದೇಶಭಾಷೆ ಯಲ್ಲಿ ಸೃಜಿಸುವಲ್ಲಿ ಎದುರಾದ ಸವಾಲು, ಅವುಗಳನ್ನು ಪರಿಹರಿಸಿಕೊಂಡು 'ಮಾರ್ಗ-ದೇಶಿ'ಗಳನ್ನು ಸಮನ್ವಯಗೊಳಿಸಿಕೊಂಡು ಚಂಪೂಪಠ್ಯ ರಚನೆಯಲ್ಲಿ ಮಹಾಕವಿ ಪಂಪನು ತೋರಿದ ಚಾತುರ್ಯವು 'ಭಾಷಾಂತರ'ದ ವಿವೇಚನೆಯಲ್ಲಿ ಮುಖ್ಯವಾಗುತ್ತದೆ. "ಪಂಪನು ಮಾರ್ಗಸಾಹಿತ್ಯದ ಛಂದೋ ರೂಪಗಳನ್ನು ಬಳಸಿಕೊಂಡರು, ತನ್ನ ಕೃತಿಯು ದೇಸಿ ಕೃತಿಯಾಗುವಂತೆ ಮಾಡುವುದು ಹೇಗೆ ಎಂಬ ಸಮಸ್ಯೆಯನ್ನು ಎದುರಿಸುವನು. ಲೌಕಿಕ ಮತ್ತು ಆಗಮಿಕ ಒಡಂಬಡಿಕೆಯನ್ನು ಸಾಧಿಸಲು ಬಯಸುವನು... ಅದು ವಿ-ಕ್ರಮ ಅಥವಾ ಕಥನ ಕ್ರಮದ ಭಂಗ. ವಿಕ್ರಮಾರ್ಜುನ ವಿಜಯವು 'ಮೂಲ'ಕಥೆಯ ಕ್ರಮವನ್ನು'ವಿ-ಕ್ರಮಗೊಳಿಸಿದ ಕ್ರಮ. ಭಂಗಗೊಳಿಸಿದ ಸ್ವಾತಂತ್ರದ ಕಥೆಯೂ ಹೌದು. ಪರಿಚಿತ ಮಹಾಭಾರತದ ಕಥನಕ್ರಮದ ಭಂಗವೇ ವಿಕ್ರಮಾರ್ಜುನ ವಿಜಯ. ಎರಡನೆಯದಾಗಿ, ಕಲ್ಪಿತ ಮೂಲ ಮಹಾಭಾರತದ ಕಥೆಗೆ ಇಲ್ಲದಿರುವ ಒಂದು ಬಗೆಯ ಸಾತತ್ಯವನ್ನು ತನ್ನ ಕನ್ನಡ ಕೃತಿಗೆ ತಂದುಕೊಡಲು ಪಂಪ ಪ್ರಯತ್ನಿಸಿದ್ದಾನೆ."(2) ಎಂದು ಓ.ಎಲ್ ನಾಗಭೂಷಣಸ್ವಾಮಿ ಹೇಳುತ್ತಾರೆ. ಈ ದೃಷ್ಟಿಯಿಂದ ಪಂಪನು ಕನ್ನಡದ ಮೊದಲ ಆದಿಕವಿಯಾಗಿ ಮಾತ್ರ ನಿಲ್ಲದೇ, ಹಳೆಗನ್ನಡ ಆದರ್ಶ ಅನುವಾದ ಪರಂಪರೆಯ ವಕ್ತಾರನಾಗಿ ಕಾಣುತ್ತಾನೆ.

"ಒಂದು ಪಠ್ಯವು ಒಂದು ಭಾಷೆಯೊಳಗೆ ಒಂದಕ್ಕಿಂತ ಹೆಚ್ಚು ಬಾರಿ ಭಾಷಾಂತರಗೊಂಡರೆ, ಅವುಗಳನ್ನು ಬಹು- ಭಾಷಾಂತರಗಳು (ಮಲ್ಟಿ ಟ್ರಾನ್ಸ್‌ಲೇಷನ್) ಎನ್ನಲಾಗುತ್ತದೆ".(3) ಅದನ್ನೇ 'ಪ್ರಭೇದ ಅನುವಾದ'ವೆಂದು ಸಿ.ಎನ್.ರಾಮಚಂದ್ರನ್ ಗುರುತಿಸುತ್ತಾರೆ. ಕನ್ನಡದಲ್ಲಿ ಬಹುಭಾಷಾಂತರ ಅಥವಾ ಪ್ರಭೇದ ಅನುವಾದಕ್ಕೆ 'ಮಹಾಭಾರತ' ಪಠ್ಯವನ್ನು ನಿದರ್ಶನಾತ್ಮಕವಾಗಿ ನೋಡಬಹುದು. ಚಂಪೂವಿನಲ್ಲಿ

ಪಂಪನ 'ವಿಕ್ರಮಾರ್ಜುನ ವಿಜಯ'ವು ರನ್ನನಿಂದ 'ಗದಾಯುದ್ಧಂ', ಡಿ.ಎಲ್.ನರಸಿಂಹಚಾರ್‌ರವರಿಂದ 'ಪಂಪಭಾರತ ದೀಪಿಕೆ', ಎಲ್.ಬಸವರಾಜ ರವರಿಂದ 'ಪಂಪಭಾರತ ಕಥಾಮೃತ', ಕೆ. ವೈ. ನಾರಾಯಣಸ್ವಾಮಿ ರವರಿಂದ 'ಪಂಪಭಾರತ' ನಾಟಕವಾಗಿ ರೂಪಾಂತರಗೊಳ್ಳುತ್ತದೆ. ಪಠ್ಯವೊಂದು ಕಾಲದ ಅಗತ್ಯಗಳಿಗಾಗಿ ಬೇರೆಬೇರೆ ರೂಪಗಳಲ್ಲಿ 'ಪುನರನುವಾದ'ಗೊಳ್ಳುವಿಕೆಯು ಅನುವಾದದ ನಿರಂತರತೆಯನ್ನು ಸೂಚಿಸುತ್ತದೆ. ಭಾರತದ ಪ್ರಾಚೀನ ಪಠ್ಯಗಳಲ್ಲಿ ಒಂದಾದ ಗುಣಾಢ್ಯನ 'ಬೃಹತ್ಕಥಾಕೋಶ'ವು 'ಪಂಚತಂತ್ರ' ಹೆಸರಿನಲ್ಲಿ ಜಗತ್ತಿನ ಭಾಷೆಗಳಲ್ಲಿ ಒಡಮೂಡಲು ಕಾರಣವೇ, ಆ ಪಠ್ಯವು ನಿರಂತರವಾಗಿ ಅನುವಾದ ಪ್ರಕ್ರಿಯೆಗೆ ಒಳಗಾಗಿರುವುದಕ್ಕೆ ನಿದರ್ಶನವಾಗಿದೆ. ಈ ಕಾರಣದಿಂದಲೇ 'ಭಾಷಾಂತರವು ಸಾಂಸ್ಕೃತಿಕ ಪ್ರಕ್ರಿಯೆಯಾಗಿದೆ' ಎನ್ನುವ ಮಾತನ್ನು ಕೀರ್ತಿನಾಥ ಕುರ್ತಕೋಟಿ ಹೇಳುತ್ತಾರೆ.

"ಸಂಸ್ಕೃತ ಕಾವ್ಯಮೀಮಾಂಸೆಯನ್ನು ಭಾಷಾಂತರಿಸುವುದಕ್ಕಿಂತ, ಅದನ್ನು ಕನ್ನಡಕ್ಕೆ ಅನುಸಂಧಾನಗೊಳಿಸುವ ದಾರಿಯನ್ನು ಆವಿಷ್ಕರಿಸಿಕೊಂಡರು. ಈ ಹಾದಿ ತನ್ನದನ್ನು ಕಳೆದುಕೊಳ್ಳದೆ ಹೊಸದನ್ನು ಆವಿಷ್ಕರಿಸಿಕೊಳ್ಳುವ ಒಂದು ಸುವರ್ಣದ ಚೌಕಟ್ಟನ್ನು ಕನ್ನಡಕ್ಕೆ ಹಾಕಿಕೊಟ್ಟಿತು".[(4)] ಕಾವ್ಯಮೀಮಾಂಸೆ, ಛಂದಸ್ಸು, ವ್ಯಾಕರಣ, ಅಶ್ವಶಾಸ್ತ್ರ, ಗಜಶಾಸ್ತ್ರ, ಕಾಮಶಾಸ್ತ್ರ, ಆರೋಗ್ಯಶಾಸ್ತ್ರ, ಜೋತಿಷ್ಯಶಾಸ್ತ್ರ, ಗಣಿತಶಾಸ್ತ್ರ, ನಿಘಂಟು- ಮೊದಲಾದ ಶಾಸ್ತ್ರೀಯ ವಿಷಯಗಳನ್ನು ಮೂಲಪಠ್ಯಕ್ಕೆ ಹೆಚ್ಚು ವಿಧೇಯವಾಗಿ ಕನ್ನಡಿಕರಿಸಿದ್ದಾರೆ. ಶಾಸ್ತ್ರೀಯ ಕೃತಿಗಳ ಅನುವಾದಲ್ಲಿ ಸಂಸ್ಕೃತ ಪಠ್ಯಗಳು ಮೂಲಧಾತುಗಳಂತೆ ಕಂಡಿವೆ.

ವಸಾಹತುಶಾಹಿ ಭಾಷೆಯಾಗಿ ಇಂಗ್ಲಿಷ್ ದೇಶಭಾಷೆಗಳನ್ನು ಆವರಿಸಿದ ಮೇಲೆ, ಆ ಭಾಷೆಯಿಂದ ನಮ್ಮ ಭಾಷೆಗೆ ಪಠ್ಯಗಳನ್ನು ಅನುವಾದಿಸಿಕೊಳ್ಳುವುದು ಸಾಹಿತ್ಯದ ಮೂಲ ಚಟುವಟಿಕೆಯಾಯಿತು. ಅದರಿಂದಾಗಿ ಇಂಗ್ಲಿಷ್‌ನ ಬಾಗಿಲಿನಿಂದ ಬೆಳಕಿನಂತೆ ಕೃತಿಗಳು ಹರಿದು ಬಂದವು. ನಮ್ಮದಕ್ಕಿಂತ ಅವರದ್ದು ಶ್ರೇಷ್ಠ ಎಂಬುವ ಭಾವನೆಗಳು ಬೆಳೆದು, ಅವರ ಕಾವ್ಯ, ಕೃತಿಗಳ ಅನುವಾದಗಳ ಅನುಕರಣೆಯು ಆಧುನಿಕ ಕನ್ನಡ ಸಾಹಿತ್ಯವನ್ನು ಆವರಿಸಿತು. ನಮ್ಮ ಪಂಪನಿಗಿಂತ, ಶೇಕ್ಸಪಿಯರ್ ಶ್ರೇಷ್ಟ, ಪಂಚತಂತ್ರಕಾರನಿಗಿಂತ ಟಾಯಸ್ಟಾಲ್ ಶ್ರೇಷ್ಟ, ಅಲ್ಲಮನಿಗಿಂತ ಅರಿಸ್ಟಾಟಲ್ ಮೇಲೆಂಬ ವಸಾಹತುಶಾಹಿಯ ರಾಜಕೀಯ ಒತ್ತಡದಿಂದಾಗಿ ಸಾಹಿತ್ಯ ಪೂರ್ವಾಗ್ರಹಗಳು ಹುಟ್ಟಿಕೊಂಡವು. ಅನ್ಯದ ಎದುರು ನಮ್ಮದನ್ನು ಮುಖಾಮುಖಿಯಾಗಿ ಅನುವಾದಿಸುವಲ್ಲಿ ಮೊದಲು ಗಮನ ಸೆಳೆದಿದ್ದು ಶರಣರ ವಚನಗಳು. ಅವುಗಳ ಆಶಯದ ಕಾರಣದಿಂದ ಇಂಗ್ಲಿಷ್‌ಗೆ ಅನುವಾದಗೊಂಡು

ಗಮನ ಸೆಳೆದವು. ಪ್ರಜಾಪ್ರಭುತ್ವದ ಆಶಯುವನ್ನು ಬಹುಹಿಂದೆಯೇ ಪ್ರತಿಪಾದಿಸಿದ್ದರಿಂದ, ಅವುಗಳು ಪೌರಾತ್ಯಭಾಷೆಗಳಂತೆ, ದೇಶಭಾಷೆಗಳಿಗೂ ಅನುವಾದಗೊಂಡು ಕನ್ನಡ ಸತ್ವವನ್ನು ಸಾಬೀತುಗೊಳಿಸಿವೆ.

"ರಷ್ಯನ್, ಫ್ರೇಂಚ್, ಜಪಾನ್, ಜರ್ಮನ್, ಸ್ಪ್ಯಾನಿಷ್ ಭಾಷೆಯ ಕೃತಿಗಳೆಲ್ಲ ಇಂಗ್ಲಿಷ್ ಭಾಷೆಯ ಮೂಲಕವೇ ಜಗತ್ತಿನ ಇತರ ಭಾಷೆಗಳಿಗೆ ಭಾಷಾಂತರವಾಗಿವೆ. ಕನ್ನಡದಲ್ಲಿರುವ ಪಾಶ್ಚಾತ್ಯ ಭಾಷಾ ಕೃತಿಗಳ ಅನುವಾದಗಳೂ ಸಹ ಇಂಗ್ಲಿಷ್‌ಯೆಂಬ ಮಧ್ಯವರ್ತಿಯ ಭಾಷೆಯ ಮೂಲಕವೇ ಬಂದಿವೆ. ಭಾರತೀಯ ಭಾಷೆಯ ಹಲವು ಕೃತಿಗಳು ನೆರೆಯ ಭಾಷೆಯ ಕೃತಿಗಳಾದರೂ ಸಹ, ಇಂಗ್ಲಿಷ್‌ಗೆ ಹೋಗಿ ಅಲ್ಲಿಂದ ಇತರ ಭಾರತೀಯ ಭಾಷೆಗಳಿಗೆ ಭಾಷಾಂತರವಾಗುತ್ತವೆ."[5] ಒಂದುವರೆ ಶತಮಾನಗಳಿಂದ ಇಂಗ್ಲಿಷ್‌ನಿಂದ ಕನ್ನಡಕ್ಕೆ ಅನುವಾದಗಳು ಬಂದಿದ್ದರೂ, ಈಗ ಕಳೆದೆರಡು ದಶಕಗಳಿಂದ ಇಂಗ್ಲಿಷ್ ಲೋಕಕ್ಕೆ ಕನ್ನಡ ಕೃತಿಗಳು ಅನುವಾದಗೊಳ್ಳುತ್ತಲ್ಲಿವೆ. ಕನ್ನಡ ಸಾಹಿತ್ಯ ಪರಂಪರೆಯು ಜಗತ್ತಿನ ಓದುಗ ಲೋಕಕ್ಕೆ ಅನುವಾದ ಮೂಲಕ ಕೊಟ್ಟ ಪ್ರಮುಖ ಕೃತಿಗಳು ಇಂತಿವೆ:

1). ಶೂನ್ಯಸಂಪಾದನೆ: ಅನು-ಎಸ್.ಎಸ್ ಭೂಸನೂರಮಠ, ಎಂ.ಎಸ್. ಸುಂಕಾಪುರ, ಅರ್ಮಂಡೊ ಮೆನಜೆಸ್, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ.(1970).

2). ಸ್ಪಿಕಿಂಗ್ ಆಫ್ ಶಿವ: ಎ ಕಲೆಕ್ಷನ್ ಆಫ್ ವಚನಾಜ್: ಅನು: ಎ.ಕೆ ರಾಮಾನುಜನ್, ಪೆಂಗ್ವಿನ್ ಕ್ಲಾಸಿಕ್ಸ್, ನವದೆಹಲಿ (1973).

3). ಎ ಸ್ಟ್ರಿಂಗ್ ಆಫ್ ಫರ್ಲ್ಸ್: ಸಲೆಕ್ಷನ್ ಫ್ರಮ್ ಕನ್ನಡ ಪೊಯಟ್ರಿ ಫ್ರಮ್ ಪಂಪ ಟು ಪ್ರಜೆಂಟ್: ಅನು: ಹೆಚ್.ಎಸ್ ಶಿವಪ್ರಕಾಶ, ಕೆ.ಎಸ್. ರಾಧಾಕೃಷ್ಣ. ಕನ್ನಡ ಸಾಹಿತ್ಯ ಅಕಾಡೆಮಿ ಬೆಂಗಳೂರು (1990).

4). ಯಶೋಧರ ಚರಿತೆ- ದಿ ಗ್ಲೋರಿ ಬೇರರ್ ಆಫ್ ದಿ ಟೇಲ್ಸ್. ಅನು: ಟಿ.ಆರ್.ಎಸ್ ಶರ್ಮ, ಪೆಂಗ್ವಿನ್ ಕ್ಲಾಸಿಕ್ಸ್, ನವದೆಹಲಿ (2000).

5). ವಚನ-ಎ ಕಲೆಕ್ಷನ್ ಆಫ್ ವಚನಾಜ್ ಬೈ ಶಿವಶರಣಾಜ್. ಅನು: ಓ.ಎಲ್. ನಾಗಭೂಷಣಸ್ವಾಮಿ, ಬಸವ ಸಮಿತಿ, ಬೆಂಗಳೂರು (2012).

6). ಶ್ರೀವಿಜಯಾಜ್ ಕವಿರಾಜಮಾರ್ಗಂ- ದ ವೇ ಆಫ್ ದಿ ಕಿಂಗ್ ಆಫ್ ಪೊಯಟ್: ಅನು: ಆರ್.ವಿ.ಎಸ್ ಸುಂದರಮ್, ದೇವೆನ್ ಎಂ.ಪಟೇಲ್, ಉಷಾ ಪ್ರಕಾಶನ ಮೈಸೂರು (2014).

7). ಉದಿಯಾದಿತ್ಯಲಂಕಾರಮ್: ಎ ಕಂಪೇಂಡಿಯುಮನ್ ಪೊಯಟ್ರಿ. ಅನು: ಆರ್.ವಿ.ಎಸ್ ಸುಂದರಮ್, ಗಿಲ್‌ಬೆನ್ ಹೆರುತ್. ಸೆಂಟರ್ ಆಫ್

ಎಕ್ಸ್‌ಲನ್ಸ್ ಫಾರ್ ಸ್ಟಡಿ ಇನ್ ಕ್ಲಾಸಿಕಲ್ ಕನ್ನಡ. ಸಿ.ಐ.ಐ.ಎಲ್. ಮೈಸೂರು (2015).

8). ಕ್ಲಾಸಿಕಲ್ ಕನ್ನಡ ಪೊಯಟ್ರಿ ಆ್ಯಂಡ್ ಪ್ರೊಜ್–ಎ ರೀಡರ್ ಸೆಲೆಕ್ಷನ್: ಅನು: ಸಿ.ಎನ್ ರಾಮಚಂದ್ರನ್, ಬಿ.ಎ ವಿವೇಕ ರೈ. ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ (2015).

9). ಹರಿಶ್ಚಂದ್ರ ಕಾವ್ಯ: ರಾಘವಾಂಕ – ದ ಲೈಫ್ ಆಫ್ ಹರಿಶ್ಚಂದ್ರ: ಅನು: ವನಮಾಲಾ ವಿಶ್ವನಾಥ, ಮೂರ್ತಿ ಕ್ಲಾಸಿಕಲ್ ಲಿಟೇರೆಚರ್ ಆಫ್ ಇಂಡಿಯಾ. ನವದೆಹಲಿ, ಹಾರ್ವರ್ಡ್ ಯುನಿರ್ವಸಿಟಿ ಪ್ರೇಸ್ (2018).

10). ರನ್ನ–ಗದಾಯುದ್ಧಂ: ದ ಡೆಯಲ್ ಆಫ್ ದಿ ಮ್ಯಾಸಿಸ್: ಅನು: ಆರ್.ವಿ.ಎಸ್ ಸುಂದರಮ್, ಅಮೈಲ್ ಶರೋನ್ ಕನ್ನಡ ಅಧ್ಯಯನ ಪೀಠ, ಜವಾಹರಲಾಲ್ ನೆಹರು ವಿಶ್ವವಿದ್ಯಾಲಯ, ನವದೆಹಲಿ. (2019)

11). ಕುಮಾರವ್ಯಾಸ ಭಾರತ: ಅನು: ಡಾ.ಶೇಷಗಿರಿ ರಾವ, ಮೂರ್ತಿ ಕ್ಲಾಸಿಕಲ್ ಇಂಡಿಯನ್ ಸಿರೀಜ್, ನವದೆಹಲಿ, ಹಾರ್ವರ್ಡ್‌ಯುನಿವಸಿಟಿ ಪ್ರೇಸ್. (2019)

ಕನ್ನಡದ ಮೂಲಪಠ್ಯಗಳು ಇಂಗ್ಲಿಷಿಗೆ ಅನುವಾದಗೊಂಡಾಗ, ಆ ಅನುವಾದದ ಮಿತಿಗಳ ಬಗ್ಗೆ ದೇಶಭಾಷಿಕರಲ್ಲಿ ನಡೆಯುವ ಚರ್ಚೆಯು, ಇಂಗ್ಲಿಷ್ ಅಥವಾ ಇತರೆ ಭಾಷೆಗಳಿಂದ ಕನ್ನಡಕ್ಕೆ ಬಂದಾಗ, ಆ ಕುರಿತು ಅಷ್ಟೊಂದು ಸಂವಾದಗಳು ನಡೆಯುವುದಿಲ್ಲ. ಹೊರಗಿನದ್ದು ಸ್ವೀಕರಿಸುವಾಗ ಎದುರಾಗದ ಆತಂಕವು, ದೇಶಭಾಷೆಗಳಿಂದ ಮೂಲಪಠ್ಯ ಕೊಡುವಾಗ ಮಾತ್ರ ಅನುವಾದದಲ್ಲಿ ಹಿಂಜರಿಗಳು ಎದ್ದು ಕಾಣುತ್ತವೆ. ಅದಕ್ಕೆ ಕಾರಣವೆಂದರೆ ಕನ್ನಡದ ಪಠ್ಯವೊಂದನ್ನು ಇಂಗ್ಲಿಷ್‌ಗೆ ಅನುವಾದಿಸುವುದಾರೆ, ಯುರೋಪಿಯನ್ ಇಂಗ್ಲಿಷ್, ಅಮೇರಿಕನ್ ಇಂಗ್ಲಿಷ್, ಭಾರತೀಯ ಇಂಗ್ಲಿಷ್– ಅವುಗಳಲ್ಲಿ ಯಾವ ಓದುಗ ವಲಯುವನ್ನು ಗಮನದಲ್ಲಿರಿಸಿಕೊಂಡು ಅನುವಾದಿಸಬೇಕು ಎನ್ನುವುದು ಸವಾಲಿನ ಕೆಲಸ. ಅದೇ ತರಹ ಯಾರಿಗಾಗಿ ಅನುವಾದಿಸಬೇಕು? ಎಂಬ ಪ್ರಶ್ನೆಗೆ ಸಾಮಾನ್ಯ ಓದುಗ, ಸಂಶೋಧಕ, ಸಾಹಿತ್ಯ ವಿಮರ್ಶಕ, ಸಾಂಸ್ಕೃತಿಕ ಅಧ್ಯಯನಕಾರ, ಭಾಷಾವಿಜ್ಞಾನಿ– ಅವರುಗಳಲ್ಲಿ ಯಾರಿಗಾಗಿ ಅನುವಾದಿಸಬೇಕು ಎನ್ನುವುದು ಸಹ ಅನುವಾದಕನಿಗೆ ಸಮಸ್ಯೆ ತೋರುತ್ತದೆ. ಪರಭಾಷೆಗಳಿಂದ ಬರುವ ಅನುವಾದಗಳನ್ನು ಉತ್ಸಾಹದಿಂದ ಸ್ವೀಕರಿಸಿದಂತೆ, ದೇಶಭಾಷೆಗಳ ಮೂಲಪಠ್ಯಗಳು ಅನುವಾದಗೊಳಿಸುವಲ್ಲಿ ಹುಮ್ಮಸ್ಸು ಕಾಣದಿರುವುದು ಸೋಜಿಗ.

**ಹಳೆಗನ್ನಡ ಅನುವಾದದಲ್ಲಿ ಅನುಸರಿಸುವ ಕ್ರಮಗಳು:**

ಹಳೆಗನ್ನಡ ಕಾವ್ಯಗಳ ಇಂಗ್ಲಿಷ್ ಅನುವಾದದಲ್ಲಿ ಅನುಸರಿಸುವ ವಿಧಾನಗಳನ್ನು ತಿಳಿಯುವುದು ಅಗತ್ಯವಿದೆ. ಕನ್ನಡದಿಂದ ಇಂಗ್ಲಿಷ್‌ಗೆ ವಚನಗಳನ್ನು ಭಾಷಾಂತರಸಿದ ಎ.ಕೆ.ರಾಮಾನುಜಮ್ ಅವರ ಅನುವಾದದಲ್ಲಿ ಅನುಸರಿಸುತ್ತಿದ್ದ ವಿಧಾನಗಳ ಬಗ್ಗೆ 'ವಿನಯ ಧಾರವಾಡಕರ' ಹೀಗೆ ಹೇಳುತ್ತಾರೆ : "ಅನುವಾದಕ್ಕೆ ತೊಡಗುವ ಮೊದಲು ರಾಮಾನುಜನ್, ಆ ಪದ್ಯದ ಆಂತರಿಕ ವಿನ್ಯಾಸವನ್ನು ಗ್ರಹಿಸಿ, ಅದನ್ನು ಲಕ್ಷ್ಯಭಾಷೆಯಲ್ಲಿ ಹೇಗೆ ತರುವುದು ಎಂದು ಯೋಚಿಸುತ್ತಾರೆ. ಅನಂತರ ಆ ಪದ್ಯದ ಬಾಹ್ಯ ವಿನ್ಯಾಸವನ್ನು ಲಕ್ಷ್ಯಭಾಷೆಯಲ್ಲಿ ತರಲು ಪ್ರಯತ್ನಿಸುತ್ತಾರೆ."(6) ಕಾವ್ಯದ ಅನುವಾದವು ಕಷ್ಟವೆಂದು, ಹಾಗೆ ಅನುವಾದಿಸಿದರೆ ಕಾವ್ಯವು ನಿರ್ಜೀವಗೊಳ್ಳುತ್ತದೆ ಎನ್ನುವ ಆರೋಪಗಳ ನಡುವೆ ಹೆಚ್ಚು ಕಾವ್ಯದ ಅನುವಾದಗಳೇ ನಡೆಯುತ್ತಿರುವುದು ಸ್ವಾಗತಾರ್ಹ ವಿಚಾರವಾಗಿದೆ. ಕಾವ್ಯದ ಅನುವಾದಕ ಕವಿಯಲ್ಲದಿದ್ದರೂ, ಕವಿ ಮನೋಭಾವನಾದರೂ ಆಗಿರಬೇಕಾಗುತ್ತದೆ. ಹಳೆಗನ್ನಡ ಕಾವ್ಯಗಳನ್ನು ಇಂಗ್ಲಿಷಿಗೆ ಅನುವಾದಿಸುವಾಗ ಅನುಸರಿಸಬಹುದಾದ ವಿಧಾನಗಳು:

1). ಹಳೆಗನ್ನಡ ಪದ್ಯಗಳನ್ನು ಇಂಗ್ಲಿಷ್‌ಗೆ ಅನುವಾದಿಸುವಲ್ಲಿ 'ಮೂಲಪದ್ಯದನಿಷ್ಠತೆ'ಯಲ್ಲಿ ಬದಲಾವಣೆ ಮಾಡಿಕೊಳ್ಳಬೇಕಾದ ಅಗತ್ಯವಿದೆ. ಏಕೆಂದರೆ ಹಳೆಗನ್ನಡ ಮತ್ತು ಇಂಗ್ಲಿಷ್ ಲಯಗಳು ವಿಭಿನ್ನವಾಗಿರುವುದರಿಂದ, ಅವುಗಳು ಉದ್ದಿಷ್ಟ ಭಾಷೆಯಲ್ಲಿ ಹೊಂದುವಂತೆ ಅನುವಾದಿಸಬೇಕಾದರೆ, ಅದಕ್ಕಾಗಿ ಇಂಗ್ಲಿಷ್ ಕಾವ್ಯದ ಲಯಗಳನ್ನು ಅರಿತಿರಬೇಕಾಗುತ್ತದೆ.

2). ಹಳೆಗನ್ನಡ ಪದ್ಯಗಳನ್ನು ಅನುವಾದಿಸುವಾಗ 'ಚಾರಿತ್ರಿಕ ಕಾಲಮಾನದ ಸಮಾಜದ ಸ್ವರೂಪವನ್ನು' ಅನುವಾದಕ್ಕೆ ಪೂರಕವಾಗಿ ಒದಗಿಸುವುದು. ಹಳೆಗನ್ನಡದಲ್ಲಿ ವೀರಗುಣ, ತ್ಯಾಗಗುಣ, ಆಶ್ರಯ ರಾಜರ ಸಾಮಾಜಿಕ ಸ್ಥಿತಿಗಳನ್ನು ಅನುವಾದಕರು ಕೃತಿಗೆ ಪೂರಕವಾಗಿ ಅನುವಾದದಲ್ಲಿ ನೀಡಬೇಕಾಗುತ್ತದೆ.

3). ಯುಗಧರ್ಮ ಮತ್ತು ಕಾವ್ಯಧರ್ಮಗಳನ್ನು ಉದ್ದಿಷ್ಟಭಾಷೆಯ ಓದುಗನಿಗೆ ಅನುಕೂಲವಾಗುವಂತೆ ನೀಡುವುದು ಮತ್ತು ಅನುವಾದದ ಕೃತಿಗೆ ಪೂರಕವಾಗಿರುವಂತೆ ನೋಡಿಕೊಳ್ಳುವುದು. ಜೈನ ಕವಿಗಳು, ವೈದಿಕ ಪದ್ಯಗಳನ್ನು ಕನ್ನಡಕ್ಕೆ ರೂಪಾಂತರಿಸುವಲ್ಲಿ ಮಾಡಿಕೊಳ್ಳುವ ಬದಲಾವಣೆಗಳ ಅರಿವನ್ನು, ಇಂಗ್ಲಿಷ್ ಭಾಷೆಗೆ ಅನುವಾದಿಸುವಲ್ಲಿ ಕಾಪಾಡಿಕೊಳ್ಳಬೇಕು.

4). ಛಂದಸ್ಸು, ಅಲಂಕಾರ, ಮೀಮಾಂಸೆ, ಶೈಲಿಗೆ ಸಂಬಂಧಿಸಿದ ಸಂಗತಿಗಳನ್ನು ಉದ್ದಿಷ್ಟ ಭಾಷೆಗೆ ತಕ್ಕುದಾಗಿ ಮಾರ್ಪಡಿಸಿಕೊಳ್ಳುವುದು. ಈ ವಿಷಯದಲ್ಲಿ

'ವಿಧೇಕತ ತತ್ವ'ದ ಉಲ್ಲಂಘನೆಯಾಗುವ ಸಾಧ್ಯತೆಯುಂಟು. ಮೂಲಾಭಾಸತತ್ವ ಅನುಸರಿಸಿ ಕೃತಿಯನ್ನು ಅನುವಾದಗೊಳಿಸುವುದು.

5). ಹಳೆಗನ್ನಡ ಪಠ್ಯವನ್ನು ಇಂಗ್ಲಿಷ್‌ಗೆ ಅನುವಾದಿಸುವಾಗ, ಅವುಗಳ ರಚನೆಯ ಹಿಂದಿನ ಕಾರಣ, ಸಾಂಸ್ಕೃತಿಕ ಒತ್ತಡ, ಆ ಕಾಲದ ರಾಜಕೀಯ, ಸಾಮಾಜಿಕ ವಿದ್ಯಮಾನಗಳನ್ನು ಅನುವಾದಕ್ಕೆ ಪೂರಕವಾಗಿ ಅಧ್ಯಯನ ಮಾಡಿ, ಉದ್ದಿಷ್ಟ ಭಾಷೆಯ ಪಠ್ಯವನ್ನು ಅಳವಡಿಸುವುದು.

6). ಹಳೆಗನ್ನಡ ಪಠ್ಯಗಳನ್ನು ಧಾರ್ಮಿಕ ಪಠ್ಯಗಳಾಗಿ ಭಾಷಾಂತರಿಸದೆ, ಅವುಗಳನ್ನು 'ಸಾಹಿತ್ಯಭಾಷಾಂತರ' (ಲೀಟರರಿ ಟ್ರಾನ್ಸ್‌ಲೇಷನ್)ದ ಪಠ್ಯಗಳೆಂದು ಅನುವಾದಿಸಿಕೊಳ್ಳುವುದು ಸೂಕ್ತವಾದುದು. ಅದರಿಂದ ಕೃತಿ ರಸಸ್ವಾದ ಸಾಧೀತವಾಗುತ್ತದೆ.

7). ಅನುವಾದಕ್ಕಾಗಿ ಆಯ್ಕೆ ಮಾಡಿಕೊಂಡಿರುವ ಹಳೆಗನ್ನಡ ಪಠ್ಯವನ್ನು ಮೂರುನಾಲ್ಕು ಸಲ ಸಾಮಾನ್ಯ ಓದುಗನಂತೆ ಅಲ್ಲದೇ, ಅನುವಾದಕನ ರೀತಿಯಲ್ಲಿ ಪೂರ್ಣಪಠ್ಯವನ್ನು ಓದಿಕೊಂಡು ಇಂಗ್ಲೀಷ್ ಅನುವಾದದಲ್ಲಿ ತೊಡಗಬೇಕು. ಅದರಿಂದ ಅನುವಾದದ ಸಮಸ್ಯೆಗಳು ಸರಳವಾಗುತ್ತವೆ. ಆ ಮೊದಲು ಇಂಗ್ಲಿಷ್‌ಗೆ ಅನುವಾದಗೊಂಡ ಕೃತಿಯನ್ನು ಗಮನಿಸಬೇಕು.

8). ಹಳೆಗನ್ನಡ ಅನುವಾದ ಪಠ್ಯಕ್ಕೆ ಪೂರಕವಾಗಿ ಅಥವಾ ಅದೇ ಕವಿಯ ಉಳಿದ ಪಠ್ಯ ಅಥವಾ ಆ ಮೂಲಕೃತಿಯ ಸಮಕಾಲೀನ ಕೃತಿಯನ್ನು ಅಧ್ಯಯನ ಮಾಡುವುದರಿಂದ ಅನುವಾದವು ಸುಲಭವಾಗಿ ಸಾಧಿತ ವಾಗುತ್ತದೆ.

"ಕಾವ್ಯವನ್ನು ಭಾಷಾಂತರಿಸಲು ಸಾಧ್ಯವಿಲ್ಲ. ಹಾಗೇನಾದರೂ ಭಾಷಾಂತರಿಸಿದರೆ ಅಥವಾ ಭಾಷಾಂತರಸಲು ಸಾಧ್ಯವಾದರೆ, ಅದು ತನ್ನ ಮೂಲದ ಸತ್ವ ಸೌಂದರ್ಯಗಳನ್ನು ಕಳೆದುಕೊಂಡು ಬಿಟ್ಟಿರುತ್ತದೆ."[7] ಅನುವಾದಕನು ಕವಿ, ಕಾದಂಬರಿಕಾರ, ಕಥೆಗಾರ, ವ್ಯಾಕರಣಕಾರ, ಮೀಮಾಂಸಕ, ವಿಮರ್ಶಕ, ಸಂಶೋಧಕ– ಎಲ್ಲವೂ ಆಗಿರಬೇಕಾದ ಅವಶ್ಯಕತೆಯಿದೆ. ಹಾಗಾಗಿ ಉಳಿದ ಲೇಖಕರಿಗಿಂತ ಅನುವಾದಕನ ಕಲೆ ಬಹುಮುಖಿಯಾದುದು. ಆದರೂ ಸಹ ಜನ ಅನುವಾದಕರನ್ನು ಎರಡನೆಯ ದರ್ಜೆಯ ಬರಹಗಾರಂತೆ ಕಾಣುವುದು ವಿಪರ್ಯಾಸವೇ ಸರಿ. ದೇಶಭಾಷೆಗಳ ಸ್ಥಳೀಯತೆ ಪಠ್ಯಗಳನ್ನು ವಿಶ್ವಾತ್ಮಕಗೊಳಿಸುವ, ಲೋಕಾಂತದ ಬೇರೆ ಬೇರೆಯಡೆಯಲ್ಲಿ ಇರುವ ಪಠ್ಯಗಳನ್ನು ಏಕಾಂತಕ್ಕೆ ಮುಖಾಮುಖಿಯಾಗಿಸುವ ಕ್ರಮವು ಭಾಷಾಂತರದ್ದಾಗಿದೆ. ಪ್ರತಿ ಕಾಲದಲ್ಲೂ ಪಠ್ಯವೊಂದರ ಅನುವಾದಕ್ಕೆ ಬೇರೆ ಬೇರೆ ಕಾರಣಗಳಿರುತ್ತವೆ. ಪಂಪಭಾರತ ಅನುವಾದದ ಉದ್ದೇಶವೇ ಬೇರೆ,

ಕೆ.ವೈ. ನಾರಾಯಣಸ್ವಾಮಿಯರ 'ಪಂಪಭಾರತ' ನಾಟಕ ಅನುವಾದದ ಉದ್ದೇಶವೇ ಬೇರೆ, ಅದನ್ನೇ ಇಂಗ್ಲೀಷ್ ಅನುವಾದಿಸುವಾಗ ಇರುವ ಉದ್ದೇಶವೇ ಬೇರೆಯಾಗಿರುತ್ತದೆ. ಹೀಗೆ ಅನುವಾದದ ಆಯಾಮಗಳು ಬದಲಾದಂತೆ, ಅದರ ಅನುವಾದದ ಅಭಿವ್ಯಕ್ತಿಯ ಸ್ವರೂಪದಲ್ಲೂ ಬದಲಾಣೆಗಳು ಘಟಿಸುತ್ತವೆ.

ಈವರೆಗೆ ದೇಶಭಾಷೆಗಳಲ್ಲಿ ಅನುವಾದದ ಕಿಡಕಿಗಳಾಗಿ ಸಂಸ್ಕೃತ ಮತ್ತು ಇಂಗ್ಲಿಷ್ ಭಾಷೆಗಳು ಪ್ರಧಾನವಾಗಿವೆ. ಅವುಗಳ ಹಿಂದೆ ಧಾರ್ಮಿಕ, ವಸಾಹತುಶಾಹಿ ಪ್ರಭುತ್ವಗಳ ಒತ್ತಡವಿರುವುದನ್ನು 'ಭಾಷಾಂತರದ ರಾಜಕಾರಣದ ಅಧ್ಯಯನಗಳು' ಗುರುತಿಸಿವೆ. ಧರ್ಮಪ್ರಚಾರ, ಪ್ರತಿಕ್ರಿಯೆ, ಜ್ಞಾನ, ಆನಂದ, ಸಾಂಸ್ಕೃತಿಕ ಸಂವರ್ಧನೆಗಾಗಿ, ಅಧಿಕಾರ ನಡೆಸುವುದಕ್ಕಾಗಿ, ಪ್ರತಿಭಟಿಸುವುದಕ್ಕಾಗಿ-ಅನುವಾದಕ್ಕೆ ಕಾಲದ ಸಾಂಸ್ಕೃತಿಕ ಒತ್ತಡಗಳಿಂದ ಅನುವಾದಗಳು ರೂಪಗೊಂಡಂತೆ ತೋರುತ್ತವೆ. ನಾವು ಜಾಗತೀಕರಣದ ಸವಾಲುಗಳ ಮೀರಿ ಬೆಳೆಯಬೇಕಾದರೆ, ನಮ್ಮ ಭಾಷಿಕ ಚೈತನ್ಯವನ್ನು ಉಳಿಸಿಕೊಂಡು, ಹೊಸ ಕಾಲದ ಸವಾಲುಗಳಿಗೆ ಭಾಷೆಯನ್ನು ಸಜ್ಜುಗೊಳಿಸಿಕೊಳ್ಳಬೇಕಾಗಿದೆ. ಕನ್ನಡ ಭಾಷೆಯು ಸಾವಿರಾರು ವರುಷಗಳಿಂದ ಅನ್ಯಭಾಷೆಯ ಒತ್ತಡಗಳನ್ನು ಸಹಿಸಿಕೊಂಡು, ಅವುಗಳಿಗೆ ಪ್ರತಿಕ್ರಿಯಿಸುತ್ತ ಹೊಸ ಹೊಸ ಮನ್ವಂತರಗಳನ್ನು ಅವತರಿಸುತ್ತ ಮುನ್ನಡೆಯುತ್ತಿದೆ. ಪಂಪಭಾರತ, ವಡ್ಡಾರಾಧನೆ, ಕರ್ನಾಟಕ ಕಾದಂಬರಿ, ರಾಮಚಂದ್ರಚರಿತ ಪುರಾಣ, ಗಿರಿಜಾ ಕಲ್ಯಾಣ, ರಾಮಧಾನ್ಯ ಚರಿತೆ, ಭರತೇಶ ವೈಭವ, ಕುಮಾರರಾಮ ಸಾಂಗತ್ಯ- ಇತ್ಯಾದಿ ಹಳೆಗನ್ನಡ ಪಠ್ಯಗಳು ಇಂಗ್ಲಿಷಿಗೆ ಅನುವಾದಗೊಳ್ಳಬೇಕಿದೆ. ಆ ಮೂಲಕ ಕನ್ನಡ ಸಂವೇದನೆಯನ್ನು ಜಾಗತೀಕ ಸಾಹಿತ್ಯಕ್ಕೆ ಪರಿಚಯಿಸಬೇಕಿದೆ.

'ಭಾಷಾಂತರಕಾರರು ಕೊಲೆಗಾರರು', 'ಭಾಷಾಂತರಕಾರರು ದ್ರೋಹಿಗಳು, ಹಂತಕರು', 'ಭಾಷಾಂತರವು ದ್ವಿತಿಯ ದರ್ಜೆಯ ಕಾರ್ಯ'-ಮೊದಲಾದ ಅರ್ಥವಿಲ್ಲದ ಟೀಕೆಗಳ ನಡುವೆಯು ಭಾಷಾಂತರವು ಬದುಕಿನ ಅವಿಭಾಜ್ಯ ಅಂಗವಾಗಿದೆ. "ಅನುವಾದವೆಂದರೆ ಎಂದೂ ಗುರಿಮುಟ್ಟದ, ಇನ್ನೂ ಉತ್ತಮಗೊಳಿಸಬಹುದಿತ್ತು ಎಂಬ ಅತೃಪ್ತಿ ಉಳಿದೇ ಉಳಿಯುವ, ಉಳಿದು ಮತ್ತೊಂದು ಸಾಹಸಕ್ಕೆ ಹುರಿದುಂಬಿಸುವ ಶಕ್ತಿಯಾಗುವ ಪ್ರಕ್ರಿಯೆ."[8] ಭಾಷೆಯು ಸಾಮಾಜಿಕ ಸಂಗತಿಯಾದ್ದರಿಂದ, ಅದನ್ನು ಒಳಗೊಂಡಿರುವ ಭಾಷಾಂತರ ಕೂಡ ಸಾಮಾಜಿಕ ಸಂಗತಿ ಎನ್ನುವುದನ್ನು ಸಾಹಿತ್ಯದ ಮನಸ್ಸುಗಳು ತಿಳಿಯಬೇಕಿದೆ. ಎಲ್ಲ ಕಾಲದಲ್ಲೂ ಲೋಕದೊಡನೆ ಒಡನಾಟವನ್ನು ಬೆಳಸಿಕೊಳ್ಳುವ, ಅದನ್ನು ವಿಸ್ತರಿಸಿಕೊಳ್ಳುವ ಕಾರಣಕ್ಕಾಗಿಯೇ ಅನುವಾದ ಹೆಚ್ಚು ಮಹತ್ವಪೂರ್ಣ ಎನಿಸಿದೆ. ವರ್ತಮಾನದಲ್ಲಿ ಅದರ ಅಗತ್ಯ ಅನಿವಾರ್ಯ ಎನ್ನುವಷ್ಟು ಮುಖ್ಯವೆನಿಸಿದೆ. ಭಾಷೆಯೊಂದರ

ವಿಕಾಸದಲ್ಲಿ, ನಾವೀನ್ಯತೆಯಲ್ಲಿ, ಪ್ರಾವೀಣ್ಯತೆಯಲ್ಲಿ ಅನುವಾದ ಪ್ರಕ್ರಿಯೆಯ ಪಾಲು ವಿಶಾಲವಾದುದು. ಅನುವಾದ ಕ್ರಿಯೆಗೆ ವಿಮುಖವಾದ ಭಾಷೆಯು, ಬಾವಿಯೊಳಗಿನ ಕಪ್ಪೆಯಂತಾಗಿಬಿಡುವ ಅಪಾಯದಲ್ಲಿರುತ್ತದೆ. ಭಾಷಿಕ ಮಡಿವಂತಿಕೆಯನ್ನು ಮೀರುವ, ಹೊಸ ಮುಡಿಪನ್ನು ತೊಡುವ ಕುಶಲತೆಗಳು ಭಾಷೆಯೊಂದಕ್ಕೆ ದಕ್ಕುವುದು ಕೂಡ ಅನುವಾದದ ಮೂಲಕ ಎನ್ನುವುದು, ಅದರ ಮಹತ್ವವನ್ನು ತಿಳಿಸುತ್ತದೆ. ಯಾವ ಭಾಷೆಯ ಅನುವಾದ ಪ್ರಕ್ರಿಯೆಯಲ್ಲಿ ಹೆಚ್ಚು ಹೆಚ್ಚು ಭಾಗಿಯಾಗುತ್ತದೆ ಆ ಭಾಷೆಯು ಅಷ್ಟು ಪುನರುಜ್ಜೀವನಗೊಳ್ಳುತ್ತ ಮುನ್ನಡೆಯುತ್ತದೆ.

**ಟಿಪ್ಪಣಿಗಳು:**

1). ಭಾಷಾಂತರ ಪ್ರವೇಶಿಕೆ: ಎಂ.ಉಷಾ, ಕನ್ನಡ ವಿ.ವಿ. ಹಂಪಿ (2014). ಪು–64.

2). ಭಾಷಾಂತರದ ಸಾಂಸ್ಕೃತಿಕ ನೆಲೆಗಳು: ಸಂ: ಕರೀಗೌಡ ಬೀಚನಹಳ್ಳಿ, ಕನ್ನಡ ವಿ.ವಿ. ಹಂಪಿ (1999). ಪು–45–46.

3). ಭಾಷಾಂತರ ಪ್ರವೇಶಿಕೆ: ಎಂ.ಉಷಾ, ಕನ್ನಡ ವಿ.ವಿ. ಹಂಪಿ (2014). ಪು–230.

4). ಅದೇ, ಪು–64.

5). ಭಾಷಾಂತರ ಪ್ರಕ್ರಿಯೆ: ಮೋಹನ್ ಕುಂಟಾರ್, ಯಾಜಿ ಪ್ರಕಾಶನ, ಹೊಸಪೇಟೆ (2015). ಪು–20.

6). ಭಾಷಾಂತರ: ಸೈದ್ಧಾಂತಿಕ ಹಾಗೂ ಅನ್ವಯಿಕ ನೆಲೆಗಳು: ಸಿ.ಎನ್. ರಾಮಚಂದ್ರನ್, ಮನೋಹರ ಗ್ರಂಥಮಾಲೆ (2015).ಪು–63.

7). ಭಾಷಾಂತರ ಕಲೆ: ಪ್ರಧಾನ ಗುರುದತ್ತ, ಸಪ್ನಾಬುಕ್ ಹೌಸ್ ಬೆಂಗಳೂರು (2015). ಪು–105.

8). ಆಧುನಿಕಪೂರ್ವ ಕನ್ನಡ ಕೃತಿಗಳ ಇಂಗ್ಲಿಷ್ ಭಾಷಾಂತರ: ಓ.ಎಲ್. ನಾಗಭೂಷಣಸ್ವಾಮಿ, ಶಾಸ್ತ್ರೀಯ ಕನ್ನಡ ಕೇಂದ್ರ. ಕರ್ನಾಟಕ ಕೇಂದ್ರೀಯ ವಿಶ್ವವಿದ್ಯಾಲಯ. ಗುಲಬರ್ಗಾ (2014). ಪು–27.

**ಪರಾಮರ್ಶನ ಗ್ರಂಥಗಳು:**

1). ಭಾಷಾಂತರ ಮತ್ತು ಲಿಂಗರಾಜಕಾರಣ: ಎಂ.ಉಷಾ. ಕನ್ನಡ ವಿ.ವಿ. ಹಂಪಿ (2012).

2). ಕನ್ನಡದಲ್ಲಿ ಭಾಷಾಂತರ ಕುರಿತ ಚಿಂತನೆಗಳು: ಹೆಚ್. ಸತ್ಯಮೂರ್ತಿ. ಕನ್ನಡ ಸಾಹಿತ್ಯ ಪರಿಷತ್ ಬೆಂಗಳೂರು (2011)

3). ವಿಶ್ವಾತ್ಮಕ ದೇಶಭಾಷೆ–ಷೆಲ್ಡನ್ ಪೋಲಾಕ್: ಕನ್ನಡಕ್ಕೆ–ಅಕ್ಷರ.ಕೆ.ವಿ, ಅಕ್ಷರ ಪ್ರಕಾಶನ ಹೆಗ್ಗೋಡು. (2003).
4). ಬಯಲು ಆಲಯ: ಕೀರ್ತಿನಾಥ ಕುರ್ತಕೋಟಿ, ಕನ್ನಡ ವಿ.ವಿ. ಹಂಪಿ (1992).
5). ಅನುವಾದ ಸಂಕಥನ ಸಂ:01, 02: ಮೇಟಿ ಮಲ್ಲಿಕಾರ್ಜುನ್ (ಸಂ). ಕುವೆಂಪು ಭಾಷಾ ಭಾರತಿ ಬೆಂಗಳೂರು (2018).
6). ಅನುವಾದ ಸಾಹಿತ್ಯ: ಮೋಹನ್ ಕುಂಟಾರ್ (ಸಂ). ಕನ್ನಡ ಸಾಹಿತ್ಯ ಪರಿಷತ್ ಬೆಂಗಳೂರು (2015).
7). ಭಾಷಾಂತರ ಭಾರತಿ: ಸಿ.ಪಿ ಕೃಷ್ಣಕುಮಾರ್, ಲಲಿತಾ ಬುಕ್ ಬ್ಯುರೋ ಮೈಸೂರು (2009).
8). ಭಾಷಾಂತರ ಪ್ರವೇಶಿಕೆ: ಎಂ.ಮಹೇಶ್ವರಪ್ಪ, ಧಾತ್ರಿ ಪುಸ್ತಕ ಬೆಂಗಳೂರು (2007).
9). Translation Studies: Susan Bassnett, London and New York, Routledge (1980).
10). Translation Theory: An Indian Perspective: G.N Devy. Macmillian Indian Ltd. (2000).
11). Siting Translation: Tejaswini Niranjana, Oriental Longman Paper back. (1992).
12). Translating Culture VS Cultural Translation: Harish Trivedi, Univ. Of Iowa. (2005).



– ಡಾ. ಮಹಾಂತೇಶ ಪಾಟೀಲ
ಸಹಾಯಕ ಪ್ರಾಧ್ಯಾಪಕರು
ಕನ್ನಡ ಅಧ್ಯಯನ ವಿಭಾಗ
ದಾವಣಗೆರೆ ವಿಶ್ವವಿದ್ಯಾನಿಲಯ, ಶಿವಗಂಗೋತ್ರಿ–577007.
Email-manteshpatil186@gmail.com

# ಕನ್ನಡ ಅನುವಾದ: ಸಮಕಾಲೀನ ಪ್ರವೃತ್ತಿಗಳು

*– ಡಾ. ಮೋಹನ ಕುಂಟಾರ್*

## ಅನುಸೃಷ್ಟಿ ಪರಂಪರೆ

ಕನ್ನಡದಲ್ಲಿ ಅನುವಾದ ಕೃತಿಗಳ ಸಂಖ್ಯೆ ಅಪಾರವಾಗಿದೆ ಎಂದು ಹೆಮ್ಮೆಪಟ್ಟು ಕೊಳ್ಳುವಷ್ಟೇನೂ ಇಲ್ಲ. ಮಲಯಾಳಂ, ತೆಲುಗು ಭಾಷೆಗಳಿಗೆ ಹೋಲಿಸಿದರೆ ಕನ್ನಡದಲ್ಲಿ ಅನುವಾದ ಕೃತಿಗಳ ಸಂಖ್ಯೆ ಪರಿಮಿತವಾಗಿದೆಯೆಂದೇ ಹೇಳಬೇಕು. ಮಲಯಾಳಂ, ತೆಲುಗು ಭಾಷೆಗಳಲ್ಲಿ ಅನುವಾದ ಪರಂಪರೆಯೊಂದು ಆಧುನಿಕ ಪೂರ್ವದಿನಗಳಲ್ಲಿಯೇ ರೂಪುಗೊಂಡಿತ್ತು. ನನ್ನಯನ ತೆಲುಗು ಭಾರತ, ಎಳುತ್ತಚ್ಚನ್‌ನ ಮಲಯಾಳಂ ಮಹಾಭಾರತಗಳು ಮೂಲ ವ್ಯಾಸನ ಕೃತಿಯ ಸಂಕ್ಷಿಪ್ತಾನುವಾದಗಳೆಂದೇ ಪ್ರಸಿದ್ಧವಾಗಿವೆ. ಸುದೀರ್ಘವಾದ ಸಂಸ್ಕೃತ ಮಹಾಭಾರತವನ್ನು ಪ್ರಾದೇಶಿಕ ಭಾಷೆಗಳಲ್ಲಿಯೂ ನೀಡುವುದು ಇವರ ಅನುವಾದದ ಬಹಳ ಪ್ರಮುಖವಾದ ಉದ್ದೇಶವಾಗಿತ್ತು. ಮೂಲ ಸಂಸ್ಕೃತವನ್ನು ಓದಲಾರದವರು ಪ್ರಾದೇಶಿಕ ಭಾಷೆಯಲ್ಲಿಯೇ ರಾಮಾಯಣ, ಮಹಾಭಾರತಗಳನ್ನು ಓದಿ ತಮ್ಮದನ್ನಾಗಿ ಮಾಡಿಕೊಳ್ಳಬೇಕೆಂಬ ಅಪೇಕ್ಷೆ ಅವರದಾಗಿತ್ತು. ಹಾಗಾಗಿ ಸಂಸ್ಕೃತ ರಾಮಾಯಣ ಮಹಾಭಾರತಗಳ ಅನೇಕ ಅನುವಾದಗಳು ಪ್ರಾದೇಶಿಕ ಭಾಷೆಗಳಲ್ಲಿ ಪ್ರಕಟವಾದುವು. ಪ್ರಾದೇಶಿಕ ಭಾಷೆಯ ಕವಿಗಳು ತಮ್ಮ ಸೃಜನಶೀಲ ರಚನೆಗಳ ಸಂದರ್ಭಗಳಲ್ಲಿ ಅವುಗಳ ಆಶಯಗಳನ್ನು ತಮಗೆ ಬೇಕಾದಂತೆ ಅರ್ಥೈಸಿಕೊಂಡು ಸಮಕಾಲೀನವಾಗಿ ಸ್ಪಂದಿಸಿದ ಉದಾಹರಣೆಗಳೂ ಸಾಕಷ್ಟಿವೆ.

ಆದರೆ ಕನ್ನಡದಲ್ಲಿ ಮೂಲ ಸಂಸ್ಕೃತ ರಾಮಾಯಣ, ಮಹಾಭಾರತಗಳು ಅನುವಾದ ರೂಪದಲ್ಲಿ ಕನ್ನಡದಲ್ಲಿ ಬರಲಿಲ್ಲವಾಗಿತ್ತು. ಕನ್ನಡ ಕವಿಗಳು ಮೂಲ ಸಂಸ್ಕೃತ ಕೃತಿಗಳನ್ನು ಆಧರಿಸಿ ಸ್ವೋಪಜ್ಞತೆಯನ್ನು ಮೆರೆದು ಅಜರಾಮರರೆನಿಸಿದರು.

ಮೂಲ ಸಂಸ್ಕೃತ ಮಹಾಭಾರತವನ್ನು ಆಧರಿಸಿಯೂ ಪಂಪ, ವಿಕ್ರಮಾರ್ಜುನ ವಿಜಯವನ್ನು ಬರೆದ. ಅದು ವ್ಯಾಸಕೃತ ಮಹಾಭಾರತವಲ್ಲ. ಆದರೂ ವ್ಯಾಸನನ್ನು ಬಿಟ್ಟು ರಚಿಸಿದ ಕೃತಿಯೂ ಅಲ್ಲ. ತನ್ನ ಆಶ್ರಯದಾತ ಅರಿಕೇಸರಿಯನ್ನು ಅರ್ಜುನನೊಡನೆ ಅಭೇದ್ಯವಾಗಿ ಕಲ್ಪಿಸಿ ರೂಪಿಸಿದ ಕೃತಿಯಾಗಿ ಪಂಪನ ಕೃತಿ ವಿಶಿಷ್ಟವೆನಿಸಿತು. ಇದೇ ಪರಂಪರೆಯನ್ನು ಕನ್ನಡದಲ್ಲಿ ಮುಂದೆ ರನ್ನನೇ ಮೊದಲಾದವರು ಅನುಸರಿಸಿದರು. ಈ ಸ್ವೋಪಜ್ಞ ಅನುಸೃಷ್ಟಿಯು ಜನಮೆಚ್ಚಿದ ಪರಂಪರೆಯಾಯಿತು. ಮೂಲ ಕೃತಿಯೊಂದನ್ನು ಆಧರಿಸಿ ಅದನ್ನು ಭಟ್ಟಿ ಇಳಿಸುವ ಅನುವಾದಕ್ಕಿಂತಲೂ ಸ್ವತಂತ್ರವಾದ ಅನುಸೃಷ್ಟಿಯೇ ಶ್ರೇಷ್ಠ ಎಂಬ ನಿಲುವು ಕನ್ನಡದಲ್ಲಿ ಬೆಳೆದುಬಂತು. ಅನುವಾದ ಎಂದರೆ ಸ್ವತಂತ್ರವಾಗಿ ಕೃತಿ ರಚನೆ ಮಾಡಲು ಅಸಾಧ್ಯವಾದವರು ಮಾಡುವ ಅಸಮರ್ಥವಾದ ಎರಡನೆಯ ದರ್ಜೆಯ ರಚನೆಗಳು ಎಂಬ ತಿಳುವಳಿಕೆ ಕನ್ನಡದಲ್ಲಿ ಆಧುನಿಕ ಪೂರ್ವಕಾಲದಿಂದಲೂ ನಡೆದು ಬಂದಂತೆ ತೋರುತ್ತದೆ. ಇಲ್ಲವಾದರೆ ಪೆರಿಯ ಪುರಾಣದ ವಿಷಯಗಳನ್ನು ಆಧರಿಸಿದ ಹರಿಹರನ ರಗಳೆ ಎಂಬ ಸ್ವತಂತ್ರ ರಚನೆಗಳು, ವ್ಯಾಸಭಾರತವನ್ನಾಧರಿಸಿದ ಕುಮಾರವ್ಯಾಸನ ಷಟ್ಪದಿ ಕಾವ್ಯ 'ಕರ್ಣಾಟ ಭಾರತ ಕಥಾಮಂಜರಿ', ಬಾಣಭಟ್ಟನ ಕಾದಂಬರಿಯೆಂಬ ಗದ್ಯಕೃತಿಯನ್ನಾಧರಿಸಿದ ನಾಗವರ್ಮನ 'ಕರ್ಣಾಟಕ ಕಾದಂಬರಿ' ಎಂಬ ಚಂಪೂಕಾವ್ಯ ಇತ್ಯಾದಿಗಳು ಕಾಣಿಸಿಕೊಳ್ಳುತ್ತಿರಲಿಲ್ಲ. ಹೀಗೆ ಮೂಲ ಕೃತಿಯನ್ನಾಧರಿಸಿದ ಅನುಸೃಷ್ಟಿಗೊಂದು ಪರಂಪರೆಯನ್ನು ಕನ್ನಡ ಕವಿಗಳು ಪ್ರಾಚೀನ ಕಾಲದಿಂದಲೂ ನಿರ್ಮಿಸಿ ಕೊಟ್ಟಿದ್ದಾರೆ. ಆಧುನಿಕ ದಿನಗಳವರೆಗೂ ಅನುಸೃಷ್ಟಿಯಾಗಿ ರೂಪಿಸಿದ ರಚನೆಗಳ ಸಂದರ್ಭದಲ್ಲಿ ಮೂಲ ಕೃತಿಗಳನ್ನು ಜೊತೆಗಿರಿಸಿ ನೋಡುವ ಅದನ್ನು ವಿಮರ್ಶಿಸುವ ಜಾಯಮಾನ ಕನ್ನಡದಲ್ಲಿ ಇಂದಿಗೂ ಇಲ್ಲ. ಸ್ವತಂತ್ರವಾದ ಅನುಸೃಷ್ಟಿಗಳಿಗೆ ಮೂಲ ಕಾವ್ಯದ ಹಂಗಿಲ್ಲ. ಹಾಗಾಗಿ ಅನುವಾದಗಳ ಮೂಲಕ ಅನ್ಯಭಾಷಾ ಕೃತಿಗಳನ್ನು ಅವರ ಚಿಂತನೆಗಳನ್ನು ಅರಿತುಕೊಳ್ಳುವ ಮನಸ್ಸು ಮಾಡಲಿಲ್ಲ. ವಾಲ್ಮೀಕಿ ರಾಮಾಯಣ ವ್ಯಾಸ ಮಹಾಭಾರತ, ಭಾಸ, ಕಾಳಿದಾಸ, ಹರ್ಷನೇ ಮೊದಲಾದ ಮಹಾಕವಿಗಳ ಸಂಸ್ಕೃತ ಕೃತಿಗಳ ಅನುವಾದಗಳು ಕನ್ನಡದಲ್ಲಿ ಪ್ರಕಟವಾಗಿದ್ದರೂ ಅವುಗಳಿಗೆ ಓದುಗರು ವಿರಳ. ಸಂಸ್ಕೃತ ವಿದ್ವಾಂಸರಲ್ಲಿ ಮೂಲ ಸಂಸ್ಕೃತ ಕಾವ್ಯಗಳನ್ನು ಓದುವವರೂ ಇದ್ದಾರೆ. ಆದರೆ ಕನ್ನಡ ಅನುವಾದಗಳಿಂದ ಮೂಲ ಕೃತಿಯ ಆಶಯಗಳನ್ನು ಅರ್ಥೈಸಿಕೊಳ್ಳುವ ಕನ್ನಡ ಓದುಗರು ವಿರಳ. ಆದರೆ ಕೃತಿ ರಚನೆ ಮಾಡಿದ ಕವಿಗಳ ಸ್ವೋಪಜ್ಞತೆಯನ್ನು ಮಾತ್ರ ಹೊಗಳುವ ಜಾಯಮಾನ ಕನ್ನಡದಲ್ಲಿ ಹಿಂದಿನಿಂದಲೂ ಬೆಳೆದುಬಂದಿದೆ. ಗಿರಿಜಾ ಕಲ್ಯಾಣ, ಹರಿಶ್ಚಂದ್ರ ಕಾವ್ಯ, ಜೈಮಿನಿ ಭಾರತ, ರಾಮಚಂದ್ರ ಚರಿತ ಪುರಾಣ ಮೊದಲಾದ

ರಚನೆಗಳ ಆಕರ ಕೃತಿಗಳ ಬಗೆಗೆ ಕುತೂಹಲದ ಚರ್ಚೆಗಳು ಕನ್ನಡದಲ್ಲಿ ಇಲ್ಲವೇ ಇಲ್ಲ ಎನ್ನುವಷ್ಟು ವಿರಳ. ಕನ್ನಡ ಕೃತಿಗಳ ಓದಿಗೆ ಅವುಗಳ ಅಗತ್ಯ ಇಲ್ಲ ಎಂದೇ ಭಾವಿಸಿದಂತಿದೆ.

ಅನುವಾದಗಳ ಮೂಲಕ ಜಗತ್ತಿನ ಪ್ರತಿಯೊಂದು ಭಾಷೆಯ ಸಾಹಿತ್ಯ ಪೋಷಣೆಯಾಗಿದೆ ಎಂಬ ಇತಿಹಾಸದ ವಾಸ್ತವ ವಿಚಾರಗಳನ್ನು ಸಾಹಿತ್ಯ ಚರಿತ್ರೆಕಾರರು ಹೇಳುವುದಿದೆ. ಅನುವಾದಗಳ ಮೂಲಕ ಇತರ ಭಾಷೆಗಳ ಕೃತಿಗಳು ಲಕ್ಷ್ಯಭಾಷೆಯ ಸಂದರ್ಭದಲ್ಲಿ ಪ್ರಕಟವಾದಾಗ ಅನ್ಯಭಾಷಾ ಜ್ಞಾನವಲಯದ ವಿವಿಧ ಪಾತಳಿಗಳ ಹಾಗೂ ದೃಷ್ಟಿಕೋನಗಳ ಅರಿವಾಗುತ್ತದೆ ಎಂಬ ತಿಳುವಳಿಕೆಯಿಂದ ಈ ಬಗೆಯ ಮಾತುಗಳು ಪ್ರಕಟವಾಗಿವೆ. ಆದರೆ ಕನ್ನಡದ ಅನುಸೃಷ್ಟಿ ಪರಂಪರೆ ಲಕ್ಷ್ಯಭಾಷೆಯಲ್ಲಿ ಅನ್ಯಭಾಷಾ ಕೃತಿಯ ಅರ್ಥಪೂರ್ಣ ಅಳವಡಿಕೆಯನ್ನು ಅನುಮೋದಿಸುತ್ತದೆ. ಅನ್ಯಭಾಷಾ ಕೃತಿಯ, ಕೃತಿಕಾರರ ಆಲೋಚನೆಗಳು, ಚಿಂತನೆಯ ವಿಧಾನಗಳನ್ನು ತಿಳಿಯಬೇಕೆಂಬ ಯಾವ ಅಪೇಕ್ಷೆಯೂ ಇರುವುದಿಲ್ಲ. ಅನ್ಯಭಾಷಿಕ ಕೃತಿಗಳಿಂದ, ಕೃತಿಕಾರರಿಂದ ಕವಿಗಳು ತಾವು ಪಡೆದುಕೊಳ್ಳಬಹುದಾದುದನ್ನು ಪಡೆದು ಲಕ್ಷ್ಯಭಾಷೆಯ ಓದುಗರಿಗೆ ಕೊಡುತ್ತಾರೆ. ಆದರೆ ಅನ್ಯಭಾಷಾ ಕೃತಿಗಳ ಕೃತಿಕಾರರ ಆಲೋಚನೆಗಳು ಓದುಗರತ್ತ ಸುಳಿಯದಂತೆ ತಡೆಯುತ್ತದೆ ಎಂಬುದೇ ವಾಸ್ತವ. ಅನ್ಯಭಾಷಾ ಕೃತಿಗಳ ಅನುಸೃಷ್ಟಿಯು ಸಾಹಿತ್ಯವನ್ನು ಲಕ್ಷ್ಯಭಾಷೆಯಲ್ಲಿ ಪೋಷಿಸುವ ವಿಧಾನ ಒಂದು ರೀತಿಯಲ್ಲಿ ಸೀಮಿತ ಪರಿಧಿಯಲ್ಲಿ ಇರಬಹುದು. ಈ ಪರಿಧಿಯಲ್ಲಿಯೂ ಅದು ಹೆಚ್ಚು ಪ್ರಭಾವಶಾಲಿಯಾಗಿಯೂ ಇರಬಹುದು. ಆದರೆ ಅನ್ಯಭಾಷಾ ಕೃತಿಗಳು, ಕೃತಿಕಾರರು ಇನ್ನಷ್ಟು ವಿಶಾಲ ದೃಷ್ಟಿಕೋನದಿಂದ ಪರಿಗ್ರಹಿಸುವ ಅವಕಾಶವನ್ನು ನೀಡುವ ಅನುವಾದವನ್ನು ನಿರಾಕರಿಸುವುದು ಅಪೇಕ್ಷಣೀಯವಲ್ಲ. ಕನ್ನಡದಲ್ಲಿ ಅನುಸೃಷ್ಟಿ ಪರಂಪರೆಗೆ ಸಿಕ್ಕ ಮಹತ್ವ ಅನುವಾದ ಪರಂಪರೆಗೆ ಪ್ರಾಚೀನ ಕಾಲದಿಂದಲೂ ದೊರೆಯಲಿಲ್ಲ. ಹಾಗಾಗಿ ಅನುವಾದ ಎಂದರೆ ಎರಡನೆಯ ದರ್ಜೆಯ ಬರವಣಿಗೆ ಎಂಬ ನಿರಾಸಕ್ತಿ ಕನ್ನಡ ಓದುಗವಲಯದಲ್ಲಿದೆ. ಸಾಹಿತ್ಯವಲಯದಲ್ಲಿ ಆಧುನಿಕ ದಿನಗಳಲ್ಲಿಯೂ ಇದು ಮುಂದುವರಿದಿದೆ.

ಆಧುನಿಕ ದಿನಗಳ ರೂಪಾಂತರ ಪರಂಪರೆಯೂ ಇದರ ಮುಂದುವರಿದ ಭಾಗವೇ ಆಗಿದೆ. ಅನುವಾದಗಳು ಕನ್ನಡ ಸ್ವತಂತ್ರ ಕೃತಿಗಳಂತೆ ಓದಿಸಿಕೊಳ್ಳಬೇಕೆಂಬ ಅಪೇಕ್ಷೆ, ಓದಿಸಿಕೊಳ್ಳುತ್ತವೆ ಎಂಬ ವಿಮರ್ಶೆ ಅನುವಾದಕ್ಕೆ ಪ್ರೋತ್ಸಾಹ ನೀಡುವ ನೆಲೆಯಿಂದ ಹುಟ್ಟಿಕೊಂಡವುಗಳಲ್ಲ. ಅನ್ಯಭಾಷಾ ಪದ ಸಂಪತ್ತು, ಸಾಂಸ್ಕೃತಿಕ ವಿವರಗಳನ್ನು ಕನ್ನಡದ ನೆಲೆಯಿಂದಲೇ ಅರ್ಥ ಮಾಡಿಕೊಳ್ಳಬೇಕೆಂಬ ಅಪೇಕ್ಷೆ ಅನುವಾದವನ್ನು ಬೆಳೆಸುವುದಿಲ್ಲ. ಸಂವಹನವಾಗುವಂತೆ ಲಕ್ಷ್ಯಭಾಷೆಯಲ್ಲಿ ರೂಪಿಸಿದ

ಅನುವಾದ ಬರವಣಿಗೆ, ಶ್ರಮಪಟ್ಟಾದರೂ ಅರ್ಥೈಸಿಕೊಳ್ಳಬೇಕೆಂಬ ಕುತೂಹಲದ ನಿಲುವು ಅನುವಾದಗಳನ್ನು ಉತ್ತೇಜಿಸಬಹುದು.

ಅನೇಕ ಕೃತಿಗಳ ಅನುವಾದಗಳು ಓದುಗರನ್ನು ಅವುಗಳ ಭಾಷೆ, ಬರವಣಿಗೆಯ ಶೈಲಿ ಇವುಗಳ ಕಾರಣಕ್ಕೆ ಸೆಳೆಯುತ್ತಿಲ್ಲವೆಂಬ ಆರೋಪವೂ ಕೇಳಿಸುತ್ತಿದೆ. ಗಾಬ್ರಿಯಲ್ ಗಾರ್ಸಿಯಾ ಮಾರ್ಕ್ವೆಜ್‌ನ ನೋಬೆಲ್ ಪುರಸ್ಕೃತ ಕಾದಂಬರಿ 'ವನ್‌ಹಂಡ್ರಡ್ ಈಯರ್ಸ್ ಆಫ್ ಸೋಲಿಟ್ಯೂಡ್'ನ ಎರಡು ಅನುವಾದಗಳು ಕನ್ನಡದಲ್ಲಿ ಪ್ರಕಟವಾಗಿವೆ. ಒಂದಕ್ಕಿಂತಲೂ ಹೆಚ್ಚು ಆವೃತ್ತಿಗಳು ಬಂದರೂ ಸುಲಭವಾಗಿ ಗ್ರಾಹ್ಯವಾಗುತ್ತಿಲ್ಲ ಎಂಬ ಗೊಣಗಾಟ ಸಾಹಿತ್ಯವಲಯದಲ್ಲಿ ಕೇಳಿಬರುತ್ತಿದೆ. ಹೀಗೆಯೇ ಒಂದು ಕೃತಿಯ ಹಲವು ಅನುವಾದಗಳು ಪ್ರಕಟವಾದರೂ ಅನುವಾದಗಳಾಗಿ ಹೆಸರು ಮಾಡಿದ ಗದ್ಯ ಕೃತಿಗಳು ಬೆರಳೆಣಿಕೆಯಷ್ಟೇ ಇರಬಹುದು. ಅನುವಾದಗಳೆಂದಲ್ಲ ಅನುಸೃಷ್ಟಿಗಳಾಗಿ ರೂಪಿಸಿದ ಕಾವ್ಯಗಳು ಕನ್ನಡದಲ್ಲಿ ಹೆಸರಾಗಿವೆ. ಬೇಂದ್ರೆಯವರ ಮೇಘದೂತ, ಬಿ.ಎಂ. ಶ್ರೀಗಳು ರೂಪಾಂತರಿಸಿದ ಇಂಗ್ಲಿಷ್ ಗೀತೆಗಳಲ್ಲಿನ ಅನೇಕ ರಚನೆಗಳು ಕನ್ನಡದ ಜಾಯಮಾನವನ್ನು ಅನುಸರಿಸಿದ ಕಾರಣಕ್ಕೆ ಓದುಗರ ಮೆಚ್ಚುಗೆ ಪಡೆದಿವೆ. ಅನುಸೃಷ್ಟಿಯ ಮೂಲಕ ರೂಪಿಸಿದ ಕಾರಣಕ್ಕೆ ಕಾವ್ಯಗಳಿಗೆ ಮಹತ್ವವಿದೆ. ಡಿ.ವಿ.ಜಿ.ಯವರ ಉಮರನ ಒಸಗೆ ಒಳ್ಳೆಯ ಅನುವಾದವಾದರೂ ಗಮನಾರ್ಹವೆಂದು ಪರಿಗಣಿಸಲಿಲ್ಲ. ಆದರೆ ಅಪಾರ ಸಂಖ್ಯೆಯ ಗದ್ಯ ಅನುವಾದಗಳನ್ನು ಓದುವವರೂ ವಿರಳ. ಓದಿದರೂ ಓದಿ ಮರೆತು ಬಿಡುವವರೇ ಬಹಳ.

ಕನ್ನಡದಲ್ಲಿ ಇನ್ನೊಂದು ವಿದ್ಯಮಾನವನ್ನು ಗಮನಿಸಬಹುದು. ಅನುವಾದಗಳನ್ನು ಓದಿ ಅದನ್ನು ಉಲ್ಲೇಖಿಸುವಾಗ ಮುಖ್ಯವಾಗಿ ಇಂಗ್ಲಿಷ್ ಮೂಲಕ ಬಂದಿದ್ದರೆ - ಮೂಲ ಕೃತಿಯನ್ನು ಅಥವಾ ಇಂಗ್ಲಿಷ್ ಮೂಲವಷ್ಟೆ ಓದಿದಂತೆ ಬಿಂಬಿಸುವುದಿದೆ. ಕೆಲವೊಂದು ಅನುವಾದಗಳನ್ನು ಯಾವುದೋ ಭಾರತೀಯ ಭಾಷೆಯ ಮೂಲಕ ಕನ್ನಡದಲ್ಲಿ ರೂಪಿಸಿರುತ್ತಾರೆ. ಆದರೆ ಅನುವಾದಕರು ತಾವು ಅನುವಾದಕ್ಕೆ ಆಯ್ದುಕೊಂಡ ಕೃತಿಯ ಮೂಲವನ್ನು ಹೇಳುವುದಿಲ್ಲ. ಬಂಗಾಳಿಯೇ ಮೊದಲಾದ ಭಾಷೆಗಳಿಂದ ತೆಲುಗು ಮೂಲಕ ಬಂದ ಅನುವಾದಗಳು ಕನ್ನಡದಲ್ಲಿ ಇವೆ. ಆದರೆ ಅನುವಾದಕರು ಈ ಬಗೆಗೆ ಏನನ್ನು ಹೇಳದಿರುವುದೂ ಇದೆ.

ಕೆಲವೊಬ್ಬರು ಅನುವಾದಕರು ಬೇರೆ ಭಾಷೆಯ ಮೂಲಕ ಅನುವಾದವನ್ನು ಮಾಡಿದರೂ ತಾವು ಮೂಲ ಭಾಷೆಯನ್ನು ಅನುವಾದ ಮಾಡಿದವರಂತೆ ಬಿಂಬಿಸುವ ಪ್ರಯತ್ನ ಮಾಡುತ್ತಾರೆ. ಮೂಲಭಾಷೆಯನ್ನು ಕಲಿತಿಲ್ಲವಾದರೂ ಇನ್ನೊಂದು ಭಾರತೀಯ ಭಾಷೆಯನ್ನೋ ಇಂಗ್ಲಿಷನ್ನೋ ಆಧರಿಸಿ ಅನುವಾದವನ್ನು ರೂಪಿಸಿದವರು ಅನುವಾದದ ಆಕರ ಕೃತಿಯನ್ನು ಉಲ್ಲೇಖಿಸುವುದೇ ಇಲ್ಲ. ಇಂಗ್ಲಿಷ್ ಬಾರದೇ

ಇದ್ದರೂ ಬಲ್ಲವರಿಂದ ಹೇಳಿಸಿಕೊಂಡು ಅನುವಾದಿಸಿದ ಬಸವಪ್ಪಶಾಸ್ತ್ರಿಗಳಂತಹವರ ಆದರ್ಶ ಕನ್ನಡದಲ್ಲಿದೆ.

ಅನೇಕ ಓದುಗರು ಅನ್ಯಭಾಷಾ ಕೃತಿಗಳನ್ನು ಉಲ್ಲೇಖಿಸುವಾಗ ಸಭೆ, ಸಮಾರಂಭಗಳ ಭಾಷಣಗಳಲ್ಲಿಯೂ ಸಹ ಮೂಲ ಭಾಷೆಯಲ್ಲಿಯೇ ಕೃತಿಗಳನ್ನು ಓದಿದವರಂತೆ ಮಾತನಾಡುತ್ತಿರುತ್ತಾರೆ. ಇಂಗ್ಲಿಷಿನ ಮೂಲಕ ಬಂದ ಅನೇಕ ಕೃತಿಗಳನ್ನು ಇಂಗ್ಲಿಷಿನ ಆಕರವನ್ನೆ ಓದಿದವರಂತೆ ಬಿಂಬಿಸುವುದರಿಂದ ಅನುವಾದಕರು ಗೌಣರಾಗಿಯೇ ಉಳಿಯುತ್ತಾರೆ. ಅನುವಾದ ಕೃತಿಗಳನ್ನೆ ಆಧರಿಸಿದ ಸಂದರ್ಭದಲ್ಲಿಯೂ ಅನುವಾದಕರನ್ನಾಗಲಿ, ಕೃತಿಯನ್ನಾಗಲಿ ಉಲ್ಲೇಖಿಸದ ಅಪ್ರಮಾಣಿಕತೆ ಕನ್ನಡದಲ್ಲಿ ಇದೆ. ಇದರಿಂದ ಅನುವಾದಕರ ಶ್ರಮವನ್ನು ಗುರುತಿಸುವುದಾಗಲಿ, ಅನುವಾದ ಕೃತಿಗಳ ಬಗೆಗೆ ಒಲವನ್ನು ಬೆಳೆಸಲು ಮುಂದಾಗದೆ ಇರುವುದರಿಂದ ಕನ್ನಡದಲ್ಲಿ ಸಾಹಿತ್ಯ ಕ್ಷೇತ್ರದಲ್ಲಿ ಎಂದೂ ಅನುವಾದ ನಗಣ್ಯವೇ ಆಗಿದೆ. ವಿಜ್ಞಾನ, ಸಮಾಜ ವಿಜ್ಞಾನಗಳ ಸಂದರ್ಭದಲ್ಲಿ ಮಾತ್ರ ಅನುವಾದಗಳ ಅವಲಂಬನೆ ಒಂದು ಮಿತಿಯವರೆಗಾದರೂ ವಿಷಯ ಪರಿಚಯದ ಕೊರತೆಯ ಕಾರಣಕ್ಕೆ ಸ್ವಲ್ಪ ಮಟ್ಟಿಗೆ ಉಳಿದುಕೊಂಡಿದೆ.

**ಅನುವಾದಗಳಲ್ಲಿ ತೊಡಕು**

ಸಾಮಾನ್ಯವಾಗಿ ಅನುವಾದಗಳು ತೊಡಕೆನಿಸುತ್ತವೆ ಎಂಬೊಂದು ಆರೋಪವೂ ಇದೆ. ಇದಕ್ಕೆ ಕಾರಣಗಳೂ ಇವೆ. ಅನುವಾದಗಳನ್ನು ಮೂಲ ಕೃತಿಯ ಓದಿನಿಂದ ರೂಪಿಸುವಾಗ ಅನುವಾದಕರು ಕೆಲವೊಮ್ಮೆ ಮೂಲ ಭಾಷೆಯವರಿರುತ್ತಾರೆ. ಮತ್ತೆ ಕೆಲವೊಮ್ಮೆ ಲಕ್ಷ್ಯ ಭಾಷೆಯವರಿರುತ್ತಾರೆ. ಈ ಎರಡೂ ಸಂದರ್ಭಗಳಲ್ಲಿ ಅನುವಾದಗಳು ವಿಭಿನ್ನವಾಗಿಯೇ ರೂಪುಗೊಳ್ಳುತ್ತವೆ. ಮೂಲ ಭಾಷೆಯ ಅನುವಾದಕರು ಆ ಭಾಷೆಯ ಜಾಯಮಾನಕ್ಕೆ ನಿಷ್ಠರಾಗಿ ಅಲ್ಲಿನ ಬರವಣಿಗೆಯ ಶೈಲಿಯನ್ನು ಅವಲಂಬಿಸಿಯೇ ಕನ್ನಡದಲ್ಲಿ ಅನುವಾದಿಸಿರುತ್ತಾರೆ. ಮಲಯಾಳಂನಿಂದ ಅನುವಾದಿಸುವ ಕೆ.ಕೆ. ನಾಯರ್, ಅಶೋಕ ಕುಮಾರ್ ಮೊದಲಾದವರ ಅನುವಾದಗಳಲ್ಲಿ ಇದನ್ನು ಗುರುತಿಸಬಹುದು. ಹಾಗೆಯೇ ಕನ್ನಡ ಮನೆಮಾತಿನವರು ಮಲಯಾಳಂ ಅನುವಾದ ರೂಪಿಸುವಾಗಲೂ ಬರವಣಿಗೆಯ ಶೈಲಿ ಕನ್ನಡ ಜಾಯಮಾನವನ್ನು ಅನುಸರಿಸುತ್ತದೆ. ಉದಾಹರಣೆಗೆ ಬಿ.ಕೆ.ತಿಮ್ಮಪ್ಪ ಅವರ ಮಲಯಾಳಂ ಅನುವಾದ ಕೃತಿಗಳು. ಇವೆರಡೂ ಬಗೆಯ ಅನುವಾದಗಳನ್ನು ಹೊರತುಪಡಿಸಿ ಮೂಲ ಭಾಷೆಯೇ ತಿಳಿಯದೆ ಮಧ್ಯವರ್ತಿ ಭಾಷೆಯ –ಪ್ರಮುಖವಾಗಿ ಇಂಗ್ಲಿಷ್– ಮೂಲಕ ಮಾಡಿದ ಅನುವಾದಗಳು.

ಉದಾಹರಣೆಗೆ ಮಲಯಾಳಂ ಮೂಲದ ವೈಕಂ ಮುಹಮ್ಮದ್ ಬಷೀರ್ ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿದ ಎಸ್. ಗಂಗಾಧರಯ್ಯ ಅವರ 'ವೈಕಂ ಕತೆಗಳು'. ಇವು ಮೂರು ಬಗೆಯ ಅನುವಾದಗಳು. ಮೂಲ ಮಲಯಾಳಂ ಭಾಷೆಯ ಕೃತಿಗಳನ್ನು ಕಟ್ಟಿ ಕೊಡುವ ರೀತಿಯೂ ವಿಭಿನ್ನವೇ ಆಗಿವೆ.

ಮೂಲ ಮಾತೃ ಭಾಷೆಯ ಅನುವಾದಕರಿಗೆ ಮೂಲದ ಅರ್ಥದ ಬಗೆಗೆ ಸ್ಪಷ್ಟತೆ ಇರುವುದರಿಂದ ಅನುವಾದದಲ್ಲಿ ಮೂಲದ ಸಾಂಸ್ಕೃತಿಕ ಸೊಗಡನ್ನು ತರಬೇಕೆಂಬ ಹಟವಿರುತ್ತದೆ. ಲಕ್ಷ್ಯಭಾಷೆಯು ಮಾತೃ ಭಾಷೆಯಾಗುಳ್ಳ ಅನುವಾದಕರಿಗೆ ಕನ್ನಡದಲ್ಲಿ ಮೂಲ ಭಾಷೆಯ ಸಾಂಸ್ಕೃತಿಕ ವಿವರಗಳನ್ನು ಒಗ್ಗಿಸುವ ಕಾಳಜಿಯಿರುತ್ತದೆ. ಮೂಲ ಭಾಷೆಯ ಸೊಗಡರಿಯದ ಮೂಲಕ ಭಾಷೆಯ ಅನುವಾದಕರು ಲಕ್ಷ್ಯ ಭಾಷೆಯನ್ನು ಮಾತ್ರ ಕೇಂದ್ರೀಕರಿಸುವುದರಿಂದ ಯಾವುದೇ ಸಾಂಸ್ಕೃತಿಕ ತೊಡಕುಗಳು ಎದುರಾಗುವುದಿಲ್ಲ. ಭಾಷೆ ಹಾಗೂ ಬರವಣಿಗೆಯ ಬಗೆಗಿನ ನಿಷ್ಠೆ ಮಾತ್ರ ಇರುತ್ತದೆ.

ಹಾಗೆಯೇ ಕನ್ನಡನಾಡಿನ ಪ್ರಾದೇಶಿಕ ಭಾಷೆಗಳು ಆಯಾ ಪ್ರದೇಶದ ಗಡಿರಾಜ್ಯಗಳ ಭಾಷೆಗಳ ಪ್ರಭಾವಕ್ಕೊಳಗಾಗಿರುತ್ತವೆ. ಮರಾಠಿ ಪ್ರಭಾವದ ಮುಂಬಯಿ ಕರ್ನಾಟಕದ ಕನ್ನಡ, ಉರ್ದು ಪ್ರಭಾವದ ಹೈದರಾಬಾದ್ ಕರ್ನಾಟಕದ ಕನ್ನಡ, ತಮಿಳು ಪ್ರಭಾವದ ಮೈಸೂರು ಕರ್ನಾಟಕ ಪ್ರಭಾವದ ಕನ್ನಡಗಳು ಆಯಾ ಪ್ರದೇಶಗಳವರಿಗೆ ಸುಲಭವಾಗಿ ತಿಳಿಯುತ್ತವೆ. ಆಯಾ ಪ್ರದೇಶಗಳಲ್ಲಿ ರೂಪಿಸಿದ ಅನುವಾದಗಳೂ ಆಯಾ ಪ್ರದೇಶದ ಭಾಷೆಗಳನ್ನೇ ಪ್ರತಿನಿಧಿಸುತ್ತವೆ. ಆ ಕಾರಣಕ್ಕಾಗಿಯೇ ಮರಾಠಿ ಅನುವಾದಗಳು ಮುಂಬಯಿ ಕರ್ನಾಟಕದ ಜನರಿಗೆ ಪ್ರಿಯವಾಗುತ್ತವೆ. ಉರ್ದು ಅನುವಾದಗಳು ಹೈದರಾಬಾದ್ ಕರ್ನಾಟಕದ ಓದುಗರಿಗೆ ಪ್ರಿಯವಾಗುತ್ತವೆ. ತಮಿಳು, ಮಲಯಾಳಂ ಅನುವಾದಗಳು ದಕ್ಷಿಣ ಕರ್ನಾಟಕದ ಓದುಗರನ್ನು ಸೆಳೆಯುವಂತೆ, ಗುಲ್ಬರ್ಗಾ ಪ್ರದೇಶದ ಓದುಗರನ್ನು ಸೆಳೆಯುವುದಿಲ್ಲ. ಅನುವಾದಕರು ತಾವು ಬದುಕುವ ಪ್ರಾದೇಶಿಕ ಕನ್ನಡದ ಸ್ವರೂಪಕ್ಕೆ ಒಗ್ಗಿಸುವ ಪ್ರಯತ್ನವನ್ನು ಮಾಡುತ್ತಿರುತ್ತಾರೆ. ಗುಲ್ಬರ್ಗಾ ಪ್ರದೇಶದ ಪ್ರಾದೇಶಿಕ ಆಡುನುಡಿಯನ್ನು ಚಾಮರಾಜನಗರದ ಆಡುನುಡಿಯನ್ನು, ಕಾಸರಗೋಡು ಪ್ರದೇಶದ ಆಡುನುಡಿಯನ್ನು ಬಳಸಿ ಅನುವಾದಿಸಿದ ಅನೇಕ ಕೃತಿಗಳು ಕನ್ನಡದಲ್ಲಿವೆ. ಕನ್ನಡದಲ್ಲಿ ಬರುವ ಅನುವಾದ ಕೃತಿಗಳು ಕರ್ನಾಟಕದ ಎಲ್ಲಾ ಪ್ರದೇಶದ ಓದುಗರನ್ನು ಸಮಾನವಾಗಿ ತಲುಪುತ್ತಿಲ್ಲ ಎಂಬುದು ವಾಸ್ತವ. ಇದಕ್ಕೆ ಅನುವಾದಕರ ಇತಿಮಿತಿಗಳೇ ಕಾರಣವಿರಬಹುದು.

ಬಿ.ಎಂ.ಶ್ರೀಯವರ ಹಾಗು ಬೇಂದ್ರೆಯವರ ಅನುವಾದಗಳ ಭಾಷೆ ಒಂದೇ ಆಗಿಲ್ಲ. ಮಾತಿನ ಭಾಷೆಯ ಸೊಗಡನ್ನು ಉಳಿಸಿಕೊಂಡ ಭಾಷೆ ಅಲ್ಲವಾದರೂ ಇವೆಲ್ಲ ಬರಹದ ಭಾಷೆಯಾಗಿ ಏಕರೂಪದಲ್ಲಿ ರೂಪಿಸಲು ಸಾಧ್ಯವಾಗದುದರ ಕಾರಣವೇನಿರಬಹುದು? ತಮ್ಮ ನೆಲದ ಭಾಷೆ ಮತ್ತು ಅದು ಪ್ರಚಲಿತದಲ್ಲಿರುವ ಸಾಂಸ್ಕೃತಿಕ ವಿವರಗಳ ಮೂಲಕವೇ ಮನ್ನಣೆ ದೊರೆಯಬೇಕೆಂಬ ಲೇಖಕರ ಅಪೇಕ್ಷೆಯೆ ಕಾರಣವಿರಬಹುದು. ಪ್ರಾದೇಶಿಕ ಅನನ್ಯತೆಗೆ ಮಾನ್ಯತೆ ನೀಡುವ ಕನ್ನಡ ಓದುಗರ ಹಾಗೂ ವಿಮರ್ಶಕರ ನಿಲುವುಗಳೂ ಕಾರಣವಿರಬಹುದು. ಕನ್ನಡದಲ್ಲಿ ಬರೆಯುವ ಬರಹಗಾರರೆಲ್ಲ ಪ್ರಾದೇಶಿಕ ಪ್ರಜ್ಞೆಯನ್ನೂ ಬರಹದ ಸಂದರ್ಭದಲ್ಲಿ ಉಳಿಸಿಕೊಂಡಿರುವುದರ ಪರಿಣಾಮವೂ ಇರಬಹುದು. ಪ್ರಾದೇಶಿಕತೆಯನ್ನು ಉಳಿಸಿಕೊಂಡು ಎಲ್ಲಾ ಕಾಲಕ್ಕೂ, ಪ್ರದೇಶಗಳಿಗೂ ಸಮಾನ ರೀತಿಯಲ್ಲಿ ಸಂವಹನವಾಗುವ ಕನ್ನಡ ಬರವಣಿಗೆಯನ್ನು ರೂಪಿಸಿದ ವಚನಕಾರರ ಭಾಷೆಯಿದೆ. ಹನ್ನೆರಡನೆಯ ಶತಮಾನದ ವಚನಕಾರರು ಇಪ್ಪತ್ತೊಂದನೆಯ ಶತಮಾನದಲ್ಲಿಯೂ ಭಾಷೆಯ ದೃಷ್ಟಿಯಿಂದ ಸಮಕಾಲೀನರೇ ಆಗಿದ್ದಾರೆ. ಆದರೆ ಕನ್ನಡದ ಬಹು ಮುಖ್ಯ ಲೇಖಕರು, ಅನುವಾದಕರು ಪ್ರಾದೇಶಿಕತೆಯ ಚೌಕಟ್ಟಿನಲ್ಲಿ ಬರಹಗಳನ್ನು ರೂಪಿಸಿ ಕಾಲದ ಮರೆಗೆ ಸಲ್ಲುತ್ತಿದ್ದಾರೆ. ಇದಕ್ಕೆ ಕೇವಲ ಭಾಷೆ ಬರಹದ ಶೈಲಿ ಅಷ್ಟೇ ಕಾರಣ ಆಗಿರಲಾರದು. ಆದರೆ ಇವು ಬಹುಮುಖ್ಯ ಕಾರಣಗಳಲ್ಲಿ ಸೇರಿವೆ ಎಂಬುದನ್ನು ಅಲ್ಲಗಳೆಯುವಂತಿಲ್ಲ.

ಅನ್ಯಭಾಷೆಯ ಕೃತಿಗಳನ್ನು ಕನ್ನಡದಲ್ಲಿ ಅನುವಾದಿಸುವಾಗ ಉಪಭಾಷೆಗಳನ್ನು ಆಶ್ರಯಿಸಿದುದೂ ಇದೆ. 1958ರಲ್ಲಿ ಪ್ರಕಟವಾದ ಚಿನುವ ಅಚಿಬೆಯ 'Things Fall Apart' 'ಕಳಚಿದ ಕೊಂಡಿ'(1997) ಎಂದು ಪ್ರಮೋದ ಮುತಾಲಿಕ ಅವರು ಉತ್ತರ ಕರ್ನಾಟಕದ ಆಡು ಭಾಷೆಯಲ್ಲಿ ಅನುವಾದಿಸಿದ್ದಾರೆ. ಇದೇ ಕಾದಂಬರಿಯ ಇನ್ನೊಂದು ಅನುವಾದವನ್ನು ಸಿ. ನಾಗಣ್ಣ ಅವರು 'ಭಂಗ'(2001) ಎಂದು ಅನುವಾದಿಸಿದ್ದು, ಇದರಲ್ಲಿ ನಂಜನಗೂಡಿನ ಪ್ರಾದೇಶಿಕ ಭಾಷೆಯನ್ನು ಬಳಸಿದ್ದಾರೆ.

ಟಿ.ಪಿ.ಕೈಲಾಸಂ ಅವರ ಟೊಳ್ಳುಗಟ್ಟಿ ನಾಟಕವನ್ನು ರಂ.ಶ್ರೀ.ಮುಗಳಿ ಯವರು ಉತ್ತರ ಕರ್ನಾಟಕದ ಭಾಷೆಗೆ ಅನುವಾದಿಸಿದ್ದಾರೆ. ಹೀಗೆ ಪ್ರಾದೇಶಿಕ ಭಾಷೆ ಮತ್ತು ಅವುಗಳ ಅನುವಾದಗಳ ಅಗತ್ಯವನ್ನು ಹೇಳುವಾಗಲೇ ಪ್ರಾದೇಶಿಕ ಉಪಭಾಷೆಗಳ ಅನುವಾದಗಳು ಓದುಗರನ್ನು ತಲುಪುವುದಿಲ್ಲ ಎಂಬುದನ್ನು ಒಪ್ಪಿಕೊಂಡಂತಾಗಿದೆ. 'ಕುಸುಮ ಬಾಲೆ'ಯ ಭಾಷೆ ಅರ್ಥವಾಗುವುದಿಲ್ಲವೆಂದು ಕನ್ನಡಕ್ಕೆ ಅನುವಾದಿಸಬೇಕೆಂದು ಪ್ರಸಿದ್ಧ ಲೇಖಕರೇ ಹೇಳಿದ್ದನ್ನು ಇಲ್ಲಿ

ನೆನಪಿಸಿಕೊಳ್ಳಬೇಕು. ಹಾಗೆ ನೋಡಿದರೆ ಕುವೆಂಪು ಅವರ 'ಶೂದ್ರ ತಪಸ್ವಿ'ಯ ಭಾಷೆ ಯಾವುದೇ ಪ್ರಾದೇಶಿಕ ಉಪಭಾಷೆಯಲ್ಲವಾದರೂ ಹೃದ್ಯವೆನಿಸುತ್ತದೆ.

ಪ್ರಾದೇಶಿಕ ಭಾಷೆಯನ್ನು ಮೀರಿ ಪ್ರಮಾಣ ಕನ್ನಡದಲ್ಲಿ ಅನುವಾದಗಳು ರೂಪುಗೊಳ್ಳಬೇಕು ಎಂಬ ಅಪೇಕ್ಷೆಯಿಂದ ಅನೇಕ ಕೃತಿಗಳು ಬಂದಿವೆ. ಹಾಗೆಯೇ ಸಮಾಜದ ಮೇಲುವರ್ಗದವರದೇ ಸರಿಯಾದ ಕನ್ನಡ ಎಂಬಿತ್ಯಾದಿ ತಿಳುವಳಿಕೆಗಳು ಭಾಷೆಯ ಬ್ರಾಹ್ಮಣೀಕರಣವನ್ನು ಉತ್ತೇಜಿಸಬಹುದೆ ಹೊರತು ಕನ್ನಡದ ದೇಸಿ ಸೊಗಡನ್ನು ಭಾಷೆಯ ಮೂಲಕ ಕಟ್ಟಿಕೊಡಲಾರದು. ಮೂಲಭಾಷೆಗೆ ಯಾವುದೇ ಲಕ್ಷ್ಯಭಾಷೆ ಸಂವಾದಿ ಭಾಷೆ ಆಗಲಾರದು. ಅನುವಾದದಲ್ಲಿ ಮೂಲಕೃತಿಗೆ ಪರ್ಯಾಯ ಪ್ರಾದೇಶಿಕ, ಸಾಮುದಾಯಿಕ ಭಾಷೆಗಳನ್ನು ಆಯ್ದುಕೊಳ್ಳುವುದು ಅಪೇಕ್ಷಣೀಯವೇ ಆಗಿದೆ.

ಉರ್ದು, ಮರಾಠಿ ಅನುವಾದಗಳಿಗೆ ದಕ್ಷಿಣ ಕರ್ನಾಟಕದಲ್ಲಿ ಓದುಗರು ಕಡಿಮೆ. ತಮಿಳು, ಮಲಯಾಳಂ ಅನುವಾದಗಳಿಗೆ ಬೀದರ್, ಗುಲ್ಬರ್ಗಾ ಕಡೆಯಲ್ಲಿ ಓದುಗರು ಇಲ್ಲವೆನ್ನುವಷ್ಟು ವಿರಳ. ಯಥಾವತ್ತಾದ ಅನುವಾದಗಳಿಗೆ, ಓದುಗರ ಸಂಖ್ಯೆ ಕಡಿಮೆಯೆ. ಕುವೆಂಪು ಅವರ 'ರಕ್ತಾಕ್ಷಿ' ಹ್ಯಾಮ್ಲೆಟ್ ನಾಟಕವನ್ನು ಆಧರಿಸಿದ ರೂಪಾಂತರ. ಇದು ಬಿದನೂರು ಸಂಸ್ಥಾನದ 'ಕತೆಯಾಗಿ ಸ್ಥಳೀಕರಣಗೊಳಿಸಿದ ಕಾರಣಕ್ಕಾಗಿ ಆ ಕೃತಿಗೆ ಇರುವ ವ್ಯಾಪಕ ಓದುಗ ವರ್ಗ ಹ್ಯಾಮ್ಲೆಟ್ ಅನುವಾದದ ಇತರ ಕೃತಿಗಳಿಗೆ ಇಲ್ಲ. ಹಾಗೆಯೇ ಶೂರಸೇನ ಚರಿತೆ, ಪ್ರತಾಪರುದ್ರದೇವ ಮೊದಲಾದ ಸ್ಥಳೀಕರಣಗೊಳಿಸಿದ ರೂಪಾಂತರಗಳನ್ನು ಕನ್ನಡಿಗರು ಒಪ್ಪಿಕೊಳ್ಳುವಂತೆ ಯಥಾವತ್ತಾದ ಅನುವಾದಗಳನ್ನು ಸ್ವೀಕರಿಸುವುದಿಲ್ಲ. ಅನ್ಯ ಸಂಸ್ಕೃತಿಯ ಅಪರಿಚಿತತೆಯ ಕಾರಣಕ್ಕೆ ಅನುವಾದಗಳನ್ನು ಅನ್ಯವಾಗಿಯೇ ಉಳಿಸಿ ಅಂತರ ಕಾಯ್ದುಕೊಳ್ಳುವುದು ಕನ್ನಡ ಓದುಗರ ಸ್ವಭಾವವೇ ಆಗಿದೆ. ಬೇರೆ ಭಾಷೆಯ ಕೃತಿಗಳ ಅನುವಾದಗಳನ್ನು ತಮ್ಮ ಸಾಹಿತ್ಯ ಕೃತಿಗಳೊಡನೆ ತೌಲನಿಕವಾಗಿ ಪರಿಶೀಲಿಸುವ ಕುತೂಹಲವುಳ್ಳವರ ಕೊರತೆ ಕನ್ನಡದಲ್ಲಿ ಕಾಣಿಸುತ್ತಿದೆ.ಹಿಂದೆ ಇತರೆ ಭಾರತೀಯ ಭಾಷೆಗಳನ್ನೊ ಅಥವಾ ವಿದೇಶಿ ಭಾಷೆಗಳನ್ನು ಕಲಿಯುವ ಕನ್ನಡ ಬರಹಗಾರರಿದ್ದರು. ಇಂದು ಅನ್ಯಭಾಷೆ ಗಳನ್ನು ಕಲಿಯಲು ಅನುಕೂಲಗಳಿವೆ. ಆದರೆ ಕಲಿಯಬೇಕೆಂಬ ಆಸಕ್ತರಿಲ್ಲ. ಹಾಗಾಗಿ ಮೂಲದಿಂದ ನೇರವಾಗಿ ಅನುವಾದ ಮಾಡುವವರೂ ರೂಪುಗೊಳ್ಳುತ್ತಿಲ್ಲ. ಬೇರೆ ಭಾಷೆಯಲ್ಲಿ ಪ್ರಕಟವಾದ ಕೃತಿಗಳು ಕನ್ನಡಕ್ಕೆ ತತ್‌ಕ್ಷಣ ಅನುವಾದಿಸುವ ಯಾವ ಕ್ರಿಯಾ ಯೋಜನೆಗಳನ್ನು ರೂಪಿಸುವ ಸಂಘ-ಸಂಸ್ಥೆಗಳು ಕನ್ನಡದಲ್ಲಿ ಇಲ್ಲ. ಜಗತ್ತಿನ ಪ್ರಸಿದ್ಧ ಲೇಖಕರಲ್ಲೊಬ್ಬರಾದ ಟಾಲ್‌ಸ್ಟಾಯ್ ರಷ್ಯನ್ ಭಾಷೆಯಲ್ಲಿ ಕೃತಿರಚನೆ ಮಾಡಿದ್ದು 1867ರಲ್ಲಿ. ಕನ್ನಡದಲ್ಲಿ ಅನುವಾದವಾದುದು 1965ರ

ಸುಮಾರಿಗೆ. ಅಂದರೆ ತೊಂಬತ್ತೆಂಟು ವರ್ಷಗಳ ನಂತರ. ನೆರೆಯ ಮಲಯಾಳಂನಲ್ಲಿ 'ಇಂದುಲೇಖಾ' ಕಾದಂಬರಿ ಪ್ರಕಟವಾದುದು 1889ರಲ್ಲಿ. ಕನ್ನಡಕ್ಕೆ ಅನುವಾದವಾಗಿ ಪ್ರಕಟವಾದುದು 1995ರಲ್ಲಿ. 'ಶಾರದಾ' ಮಲಯಾಳಂನಲ್ಲಿ ಬಂದುದು 1893 ಕನ್ನಡ ಅನುವಾದ 2016. ಹೀಗೆ ಮೂಲ ಭಾಷೆಯ ಕೃತಿಗೂ ಅನುವಾದಗಳಿಗೂ ಶತಮಾನಗಳ ಅಂತರವಿದೆ.

**ಸಾಂಸ್ಕೃತಿಕ ರಾಜಕಾರಣ**

ಅನುವಾದಕ್ಕೆ ಕೃತಿಗಳನ್ನು ಆಯ್ಕೆ ಮಾಡುವಲ್ಲಿ ಸಾಂಸ್ಕೃತಿಕ ರಾಜಕಾರಣದ ಪ್ರಭಾವವನ್ನು ಅಲ್ಲಗಳೆಯಲಾಗದು. ಮೂಲ ಭಾಷೆಯ ಕೃತಿ ಇವತ್ತು ಅದು ಪ್ರತಿನಿಧಿಸುವ ಸಂಸ್ಕೃತಿ ಲಕ್ಷ್ಯ ಭಾಷೆಯಲ್ಲಿ ಅದನ್ನು ಅಪೇಕ್ಷಿಸುವ ಪ್ರಭುತ್ವ ಅನುವಾದವನ್ನು ರೂಪಿಸುವಂತೆ ನಿರ್ದೇಶಿಸುತ್ತದೆ. ಅಂತಹ ನಿರ್ದೇಶನಗಳು ಕೆಲವೊಮ್ಮ ಪ್ರತ್ಯಕ್ಷವಾಗಿ ಮತ್ತೆ ಕೆಲವೊಮ್ಮೆ ಪರೋಕ್ಷವಾಗಿ ಅನುವಾದದ ಆಯ್ಕೆಯ ಹಿಂದೆ ಕೆಲಸ ಮಾಡಬಹುದು. ಅನುವಾದಕರಾದವರೂ ಈ ಬಗೆಯ ಸಾಂಸ್ಕೃತಿಕ ರಾಜಕಾರಣದ ಭಾಗವಾಗಿಯೇ ಆಯ್ಕೆ ಪ್ರಕ್ರಿಯೆಯನ್ನು ಮಾಡಬಹುದು. ಸಮಕಾಲೀನ ಸಮಾಜ ಮತ್ತು ಅದು ಅಪೇಕ್ಷಿಸುವ ನಿರ್ದಿಷ್ಟ ವೈಚಾರಿಕ ಆಶಯಗಳ ಭಾಗವಾಗಿಯೇ ಅನುವಾದಗಳು ಕಾಣಿಸಿಕೊಳ್ಳುತ್ತವೆ.

ಬಿ.ಎಂ.ಶ್ರೀಯವರ ಇಂಗ್ಲಿಷ್ ಗೀತೆಗಳನ್ನು ಆಯ್ಕೆಮಾಡಿ ರೂಪಾಂತರಿಸುವಲ್ಲಿ ಅಂದಿನ ಸಮಕಾಲೀನ ಸಾಂಸ್ಕೃತಿಕ ರಾಜಕಾರಣದ ಪ್ರಭಾವವಿದೆ. ಇದು ರಾಜಕೀಯ ಪ್ರಭುತ್ವದ ಭಾಗವಾಗುವುದಕ್ಕಿಂತಲೂ ಸಾಂಸ್ಕೃತಿಕ ಪ್ರಭುತ್ವದ ಭಾಗವಾಗಿಯೇ ಆಗಿದೆ. ಕನ್ನಡ ಭಾಷೆಯಲ್ಲಿ ಸಂಸ್ಕೃತ ಕಾವ್ಯ ಪರಂಪರೆಯನ್ನು ವಿಸ್ತರಿಸುವ ರೀತಿಯಲ್ಲಿಯೇ ಆಧುನಿಕ ದಿನಗಳಲ್ಲಿಯೂ ಮುಂದುವರಿದಿತ್ತು. ಪಾಶ್ಚಾತ್ಯ ಪ್ರಭಾವ ಅದರಲ್ಲಿಯೂ ಇಂಗ್ಲಿಷ್ ಶಿಕ್ಷಣದ ಪರಿಣಾಮವಾಗಿ ಚಿಂತನೆ, ಆಶಯ ಹಾಗೂ ಬರವಣಿಗೆಯ ವಿಧಾನವನ್ನು ಹೊಸದಾಗಿ ರೂಪಿಸಿಕೊಳ್ಳುವ ಅಗತ್ಯ ಕನ್ನಡ ಸಾಹಿತ್ಯಕ್ಕೆ ಇತ್ತು. ಇದನ್ನು ಮನಗಂಡು ಕನ್ನಡದಲ್ಲಿ ಹೊಸ ಬಗೆಯು ಕಾವ್ಯ ರಚನೆಗೆ ಬೇಕಾದ ಮಾದರಿಗಳನ್ನು ರೂಪಿಸಿಕೊಡುವ ಪ್ರಯತ್ನವನ್ನು ಬಿ.ಎಂ.ಶ್ರೀಯವರು ಮಾಡಿದರು. ಕನ್ನಡದ ಸಾಂಸ್ಕೃತಿಕ ವಲಯವನ್ನು ಹೊಸ ಬಗೆಯಲ್ಲಿ ಪ್ರಚೋದಿಸುವ ಸಾಧ್ಯತೆಯನ್ನು ಕನ್ನಡ ಸಾಂಸ್ಕೃತಿಕ ಪ್ರಭುತ್ವದ ನೆಲೆಯಿಂದ ಕಂಡುಕೊಂಡರು. ಕನ್ನಡದ ಇತಿಮಿತಿಗಳನ್ನು ಪಶ್ಚಿಮದ ಪ್ರಭಾವದಿಂದ ಮೀರಬಹುದು ಎಂಬ ಯೋಚನೆಯಿಂದ ಇಂಗ್ಲಿಷ್ ಗೀತಗಳು ರೂಪುಗೊಂಡುವು. ಕನ್ನಡವು ಸಂಸ್ಕೃತದ ಕೊಂಡಿ ಕಳಚಿಕೊಂಡು ಇಂಗ್ಲಿಷ್‌ನ ಸಂಪರ್ಕದಿಂದ ಹೊಸ ಬಗೆಯಲ್ಲಿ

ಬೆಳೆಯಬೇಕಾದ ಅಗತ್ಯವನ್ನು ಬಿ.ಎಂ.ಶ್ರೀ ಅವರು ಮನಗಂಡಿದ್ದರು. ಕನ್ನಡ ಓದುಗರು ಬರಹಗಾರರು ಒಪ್ಪುವ ರೀತಿಯಲ್ಲಿ ಸಮಕಾಲೀನ ಕನ್ನಡ ಕಾವ್ಯಕ್ಕೆ ಹೊಸ ದಾರಿಯನ್ನು ತೋರಿದರು. ಶ್ರೀಯವರು ಸಾಂಸ್ಕೃತಿಕ ರಾಜಕಾರಣದ ಭಾಗವಾಗಿ ನಿರ್ವಹಿಸಿದ ಈ ಮಹತ್ಕಾರ್ಯದಿಂದ ಆಧುನಿಕ ಕನ್ನಡ ಕಾವ್ಯ ಹೊಸ ಜಾಡನ್ನು ಹಿಡಿಯಿತು. ಅದರ ಪ್ರಭಾವ ಆಧುನಿಕ ಕನ್ನಡದ ಸಂದರ್ಭದಲ್ಲಿ ಶತಮಾನಗಳವರೆಗೂ ಮುಂದುವರಿಯುವಲ್ಲಿ ಶಕ್ತವಾಯಿತು.

ಸ್ವಾತಂತ್ರ್ಯೋತ್ತರ ಭಾರತದಲ್ಲಿನ ಅಧಿಕಾರ ರಾಜಕಾರಣವು ಗಾಂಧಿ ಚಿಂತನೆಗಳನ್ನು ಭಾರತೀಯ ಭಾಷೆಗಳಿಗೆ ಅನುವಾದಿಸುವ ಕೆಲಸಗಳನ್ನು ಮಾಡಿತು. ಕನ್ನಡದಲ್ಲಿಯೂ ಗಾಂಧೀ ಚಿಂತನೆಗಳು ಅನುವಾದಗೊಂಡು ಪ್ರಕಟವಾದುವು. ಅದೇ ವೇಳೆಗೆ ಸಮಕಾಲೀನರಾದ ಬಿ.ಆರ್.ಅಂಬೇಡ್ಕರ್ ಅವರ ಚಿಂತನೆಗಳ ಅನುವಾದಗಳಿಗೆ ಅವಕಾಶ ದೊರೆಯಲಿಲ್ಲ. 20ನೆಯ ಶತಮಾನದ ಕೊನೆಯ ದಶಕಗಳಲ್ಲಿ ಅಂಬೇಡ್ಕರ್ ಚಿಂತನೆಗಳಿಗೆ ಹೆಚ್ಚಿನ ಮಾನ್ಯತೆ ಪ್ರಭುತ್ವದ ಕಡೆಯಿಂದ ದೊರೆಯಿತು. ಪರಿಣಾಮವಾಗಿ ಅನೇಕ ಸಾಂಸ್ಕೃತಿಕ ಸಂಘ-ಸಂಸ್ಥೆಗಳು ಅಂಬೇಡ್ಕರ್ ಬರಹಗಳ ಅನುವಾದಗಳನ್ನು ಕನ್ನಡದಲ್ಲಿ ಈಗಲೂ ಪ್ರಕಟಿಸುತ್ತಿವೆ. ಅಂಬೇಡ್ಕರ್ ಚಿಂತನೆಗಳಿಗೆ ಸಮಕಾಲೀನ ಸಾಮಾಜಿಕ ರಾಜಕೀಯ ವಲಯಗಳಲ್ಲಿ ದೊರೆತ ಪ್ರಾಶಸ್ತ್ಯದಿಂದಾಗಿ ಅವು ಕನ್ನಡದಲ್ಲಿ ಎಲ್ಲರಿಗೂ ಲಭ್ಯವಾಗುವಂತೆ ಸಾಂಸ್ಕೃತಿಕ ರಾಜಕಾರಣ ಮುತುವರ್ಜಿ ವಹಿಸಿದೆ. ಅಂಬೇಡ್ಕರ್ ಬರಹಗಳು, ಭಾಷಣಗಳು ಅವರ ಸಮಕಾಲೀನ ದಿನಗಳಿಗಿಂತ ಇಂದು ಹೆಚ್ಚು ಪ್ರಸ್ತುತವಾಗಲು ಇಂದಿನ ಸಾಂಸ್ಕೃತಿಕ ರಾಜಕಾರಣದ ಪ್ರಭುತ್ವವೇ ಕಾರಣವಾಗಿದೆ.

ಹಾಗೆಯೆ ಸಮಾಜವಾದಿ ಚಿಂತನೆಗಳು ಸಮಾಜದಲ್ಲಿ ರಾಜಕೀಯವಾಗಿ ನೆಲೆಯೂರತೊಡಗಿದಾಗ ಕನ್ನಡದಲ್ಲಿಯೂ ಅವುಗಳ ಅನುವಾದಗಳು ಪ್ರಕಟವಾಗಲಾರಂಭಿಸಿದುವು. ಲೋಹಿಯಾ ಜೀವಿಸಿದ್ದ ದಿನಗಳಲ್ಲಿ ಕನ್ನಡದಲ್ಲಿ ಅನುವಾದವಾಗಿ ಕಾಣಿಸಿಕೊಳ್ಳದೆ ಇದ್ದರೂ ಮುಂದೆ ಅವುಗಳು ಪ್ರಕಟವಾಗಲು ಸಾಂಸ್ಕೃತಿಕ ರಾಜಕಾರಣವೇ ಪ್ರಮುಖ ಕಾರಣ. ಮಾರ್ಕ್ಸ್‌ವಾದಿ ಚಿಂತನೆಗಳು ರಾಜಕೀಯವಾಗಿ ಪ್ರಚಾರಕ್ಕೆ ಅನಿವಾರ್ಯವಾದುವು. ಹಿಂದುಗಳಿದ ವರ್ಗಗಳ ಚಳವಳಿಗೆ ತಮಿಳಿನ ಪೆರಿಯಾರ್ ರಾಮಸ್ವಾಮಿ ನಾಯ್ಕರ್ ಅವರ ಚಿಂತನೆ ಪ್ರೇರಣೆ ಒದಗಿಸುವ ಸಂದರ್ಭಗಳು ಒದಗಿದಾಗ ಕನ್ನಡದಲ್ಲಿ ಪೆರಿಯಾರ್ ಚಿಂತನೆಗಳು ಕಾಣಿಸಿಕೊಂಡುವು. ಪಂಡಿತ್ ದೀನದಯಾಳ್ ಉಪಾಧ್ಯಾಯ ಅವರ ಬರೆಹಗಳ ಅನುವಾದಗಳು ಇತ್ತೀಚೆಗೆ ಪ್ರಕಟವಾಗುತ್ತಿರುವುದು ಸಾಂಸ್ಕೃತಿಕ ರಾಜಕಾರಣದ ಭಾಗವೇ ಆಗಿದೆ. ಹಾಗೆ ಕೃತಿಯೊಂದರ ಆಯ್ಕೆ ಮತ್ತು ಅನುವಾದಗಳ ಹಿಂದೆ

ಸಾಂಸ್ಕೃತಿಕ ರಾಜಕಾರಣವು ಮಹತ್ವದ ಪಾತ್ರ ವಹಿಸುತ್ತದೆ. ಸಾಂಸ್ಕೃತಿಕ ಅಪೇಕ್ಷೆ, ಒತ್ತಡಗಳು ಲಕ್ಷ್ಯ ಭಾಷೆಯ ಸಂದರ್ಭದಲ್ಲಿ ಪ್ರಭುತ್ವದ ನಿಯಂತ್ರಣಕ್ಕೆ ಒದಗಿದಾಗ ಕೃತಿಯೊಂದರ ಅನುವಾದ ರೂಪುಗೊಳ್ಳುತ್ತದೆ. ಸಾಂಸ್ಕೃತಿಕ ರಾಜಕಾರಣವು ಬಹುತೇಕ ಸಾಮೂಹಿಕ ಅಪೇಕ್ಷೆಯ ನೆಲೆಯಿಂದಲೇ ಮುನ್ನೆಲೆಗೆ ಬಂದಿರಬಹುದು. ಅವು ಮೂಲ ಕೃತಿ ರೂಪಿಸಿದ ಸಮಾಜದ ಸಮಕಾಲೀನತೆಗಿಂತ ಲಕ್ಷ್ಯ ಭಾಷಾ ಸಮಕಾಲೀನತೆಗೆ ಹೆಚ್ಚು ಪ್ರಸ್ತುತವಾಗಿರುತ್ತವೆ. ಹಾಗಾಗಿ ಲಕ್ಷ್ಯಭಾಷೆಯಲ್ಲಿ ಪ್ರಸ್ತುತವಾಗುವ ಕಾಲಘಟ್ಟವು ಮೂಲಕೃತಿ ರಚನೆಯ ಕಾಲದಿಂದ ತುಂಬಾ ಅಂತರದಲ್ಲಿಯೇ ಇರಬಹುದು. ಅಂದರೆ ಕೃತಿಯೊಂದರ ಅನುವಾದ ರೂಪುಗೊಳ್ಳಲು ಸಮಕಾಲೀನ ಸಾಂಸ್ಕೃತಿಕ ರಾಜಕಾರಣದ ನೆರವು ಇದ್ದೇ ಇರುತ್ತದೆ. ಅದನ್ನು ರೂಪಿಸುವಲ್ಲಿ ಸಾಹಿತ್ಯ, ರಾಜಕೀಯ, ಧಾರ್ಮಿಕ, ಸಾಮಾಜಿಕ ಪ್ರಭಾವಗಳು ಇವುಗಳಲ್ಲಿ ಯಾವುದೇ ಒಂದು ಘಟಕ ನಿರ್ಣಾಯಕ ಪಾತ್ರವಹಿಸಬಹುದು. ಕೃತಿಯೊಂದು ನಿರ್ದಿಷ್ಟ ಸಾಂಸ್ಕೃತಿಕ ಆಶಯಗಳಿಗೆ ನೆರವಾಗುವುದರ ನೆಲೆಯಿಂದಲೇ ರಾಜಕಾರಣದ ಸ್ವರೂಪವನ್ನು ಗುರುತಿಸಬಹುದು. ಅಂದರೆ ಸಾಂಸ್ಕೃತಿಕ ರಾಜಕಾರಣವನ್ನು ಮಾಡುವ ಶಕ್ತಿ ಇರುವುದು ಕೃತಿಯಲ್ಲಿ ಅಲ್ಲ, ಬದಲಾಗಿ ಅದು ಅನುವಾದವಾಗುವ ಲಕ್ಷ್ಯಭಾಷೆಯ ಸಂದರ್ಭದಲ್ಲಿ ಎಂಬುದು ಗಮನಾರ್ಹ.

## ಪದ್ಯ ಹೃದ್ಯ

ಕನ್ನಡದಲ್ಲಿ ಪದ್ಯಾನುವಾದಗಳಿಗೆ ಸಿಕ್ಕ ಪ್ರಾಶಸ್ತ್ಯ ಗದ್ಯಾನುವಾದಗಳಿಗೆ ದೊರೆಯಲಿಲ್ಲ. ಅರವತ್ಮೂರು ಪುರಾತನರನ್ನು ಕುರಿತು ಶೇಕ್ಕಿಳಾರ್ ಕವಿ ಬರೆದ 'ಪೆರಿಯ ಪುರಾಣಂ' ಗದ್ಯಕೃತಿ. ಅದೇ ವಿಷಯನ್ನಾಧರಿಸಿದ ಹರಿಹರನ ರಗಳೆ ಛಂದಸ್ಸಿನ ಪದ್ಯಕೃತಿಯಾಗಿದೆ. ಬಾಣಭಟ್ಟನ ಸಂಸ್ಕೃತ ಕಾದಂಬರಿ ಗದ್ಯ. ಅದನ್ನಾಧರಿಸಿದ 'ಕರ್ಣಾಟಕ ಕಾದಂಬರಿ' ಚಂಪೂ ಕಾವ್ಯ. ಆಧುನಿಕ ಪೂರ್ವ ದಿನಗಳಲ್ಲಿ ಪದ್ಯ ಕಾವ್ಯಗಳಿಗೆ ಸಿಕ್ಕ ಮನ್ನಣೆ ಆಧುನಿಕ ದಿನಗಳ ಹೊತ್ತಿಗೆ ಗದ್ಯಬರಹಗಳಿಗೆ ದೊರೆಯಿತು. ಮುದ್ದಣ 'ಪದ್ಯಂ ವಧ್ಯಂ ಗದ್ಯಂ ಹೃದ್ಯಂ' ಎಂದೇ ಸಾರಿ ಗದ್ಯಕ್ಕೆ ಪ್ರಾಶಸ್ಯ ನೀಡಿದ. ಕೆಂಪು ನಾರಾಯಣನ 'ಮುದ್ರಾರಾಕ್ಷಸ' ನಾಟಕವನ್ನು ಮುದ್ರಾಮಂಜೂಷವಾಗಿ ಗದ್ಯಾನುವಾದ ಮಾಡಲಾಯಿತು. ಇಷ್ಟಿದ್ದರೂ ಕಾವ್ಯಾನುವಾದಗಳಿಗೆ ದೊರೆತ ಪ್ರಚಾರ, ಪ್ರಸಿದ್ಧಿ ಗದ್ಯಾನುವಾದಗಳಿಗೆ ಸಾಹಿತ್ಯವಲಯದಲ್ಲಿ ದೊರೆಯಲಿಲ್ಲ. ಇಂಗ್ಲಿಷಿನ ವರ್ಡ್ಸ್‌ವರ್ತ್, ಕೀಟ್ಸ್, ಜರ್ಮನ್ ಕವಿಗಳಾದ ರಿಲ್ಕ್, ಗಯಟೆ ಫ್ರೆಂಚ್ ಕವಿಗಳಾದ ಚಾರ್ಲ್ಸ್ ಬೋದಿಲೇರ್ ರಷ್ಯನ್ ಕವಿ ಅಲೆಗ್ಸಾಂಡರ್ ಪುಷ್ಕಿನ್ ಮೊದಲಾದವರ ಕವಿತೆಗಳು ಕನ್ನಡದಲ್ಲಿ ಅನುವಾದ

ವಾಗಿವೆ. ಸಾಹಿತ್ಯ ವಲಯದಲ್ಲಿ ಈ ಕವಿಗಳ ಹೆಸರುಗಳು ಪರಿಚಿತವೆನಿಸಿವೆ. ಹಾಗೆಯೇ ಜಿ.ಪಿ.ರಾಜರತ್ನಂ ಅವರ ಬುದ್ಧ ಚರಿತೆ, ಎಲ್.ಬಸವರಾಜ ಅವರ 'ಸೌಂದರ ನಂದ' ಮೊದಲಾದ ಕಾವ್ಯಾನುವಾದಗಳು ವಸ್ತು ವಿಷಯಗಳಿಂದಷ್ಟೇ ಅಲ್ಲ, ಅನುವಾದದ ನಿರೂಪಣೆ ಶೈಲಿಯಿಂದಲೂ ಹೃದ್ಯವೆನಿಸುವ ರಚನೆಗಳು. ಕಾವ್ಯ ಅನುವಾದಗಳಲ್ಲಿ ಮೂಲ ಪಠ್ಯದ ಭಾಷಿಕ ಲಯ, ಛಂದಸ್ಸು, ಶ್ಲೇಷಾರ್ಥಗಳೊಡನೆ ರೂಪಿಸುವುದು ಸಾಧ್ಯವಿಲ್ಲ ಎಂಬೊಂದು ಮಾತಿದೆ. ಹಾಗಾಗಿ ಗದ್ಯಾನುವಾದಗಳು ಹೆಚ್ಚಾಗಿ ಕನ್ನಡದಲ್ಲಿ ಆಗಿವೆ. ಯಾವುದೇ ಅನುವಾದಗಳು ಮಧ್ಯವರ್ತಿ ಭಾಷೆಯ ಮೂಲಕ ಬರುವಾಗಲೂ ಆಧುನಿಕ ದಿನಗಳಲ್ಲಿ ಮೂಲ ಭಾಷೆಯ ಲಯವನ್ನು ಕೇಳಿಸಿಕೊಳ್ಳುವ ಅವಕಾಶಗಳಿವೆ. ಕಾವ್ಯಾನುವಾದಗಳ ಸಂದರ್ಭದಲ್ಲಿ ಧ್ವನಿ ಮುದ್ರಣದ ಮೂಲಕ ಮೂಲ ಭಾಷೆಯ ಕಾವ್ಯದ ಓದನ್ನು ಕೇಳಿಸಿಕೊಳ್ಳಬಹುದು. ಈಗಾಗಲೇ ಬೇರೆ ಭಾಷೆಗಳಿಗೆ ಅನುವಾದವಾಗಿರುವ ಪಠ್ಯಗಳನ್ನು ಆಧಾರವಾಗಿ ಇರಿಸಿಕೊಂಡು ಮೂಲ ಭಾಷೆಯ ಬನಿಯೊಡನೆ ಕನ್ನಡದಲ್ಲಿಯೂ ಅನುವಾದಿಸಬಹುದು. ಉದಾಹರಣೆಗೆ ಎಚ್.ಎಸ್. ರಾಘವೇಂದ್ರರಾವ್ ಅವರ **'ಕಪ್ಪು ಕವಿತೆ'** (2013)ಯನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಕನ್ನಡ ವಿಶ್ವವಿದ್ಯಾಲಯದಲ್ಲಿ ಕನ್ನಡ–ತಮಿಳು, ಕನ್ನಡ–ಮಲಯಾಳಂ ಕಾವ್ಯಾನುವಾದ ಕಮ್ಮಟದಲ್ಲಿ ಆಯಾಭಾಷೆಗಳ ಕವಿಗಳೇ ಇಂಗ್ಲಿಷ್ ಭಾಷೆಯ ನೆರವಿಲ್ಲದೆ ಕಾವ್ಯವಾಚನ ಮಾಡಿ ಅವುಗಳ ಲಯವನ್ನು ಅನುಸರಿಸಿ ಅನುವಾದಿಸಲಾಗಿತ್ತು. ಈ ಅನುವಾದ ಕೃತಿಗಳು ಕೇಂದ್ರ ಸಾಹಿತ್ಯ ಅಕಾಡೆಮಿ ಮತ್ತು ಕನ್ನಡ ವಿಶ್ವವಿದ್ಯಾಲಯದಿಂದ ಪ್ರಕಟವಾಗಿವೆ. ಸಂಗಂ ಕಾಲದ ತಮಿಳು ಸಾಹಿತ್ಯವನ್ನು ಕುವೆಂಪು ಭಾಷಾ ಭಾರತಿಯು ಇದೇ ರೀತಿಯ ಪ್ರಾಯೋಗಿಕ ಕಮ್ಮಟವನ್ನು ಮಾಡಿ 'ನಿಚ್ಚಂ ಪೊಸತು' ಎಂಬ ಅನುವಾದವನ್ನು ಪ್ರಕಟಿಸಿದೆ.

ಈಗಾಗಲೇ ಆಗಿರುವ ಬೇರೆ ಭಾಷೆಯ ಹಲವು ಅನುವಾದಗಳನ್ನು ಲಕ್ಷ್ಯಭಾಷೆಯಲ್ಲಿ ಇದ್ದರೆ ಅವುಗಳನ್ನು ಇರಿಸಿಕೊಂಡು ಹೊಸತೊಂದು ಅನುವಾದವನ್ನು ರೂಪಿಸುವ ಅವಕಾಶಗಳು ಅನುವಾದ ಕ್ಷೇತ್ರದಲ್ಲಿ ಇದೆ. ಟಾಲ್‌ಸ್ಟಾಯ್‌ಯ 'ಅನ್ನಾಕರೆನಿನಾ' ಮತ್ತು 'ಯುದ್ಧಮತ್ತುಶಾಂತಿ'ಯನ್ನು ದೇ.ಜ.ಗೌ. ಅವರು ಅನುವಾದಿಸಿದ್ದರು. ಜ.ನಾ. ತೇಜಶ್ರೀ ರೂಪಿಸಿದ ಅನ್ನಾಕರೆನಿನಾದ ಸಂಗ್ರಹಾನುವಾದವನ್ನು ಅಲ್ಲದೆ ಹಲವು ಇಂಗ್ಲಿಷ್ ಅನುವಾದಗಳನ್ನು ಆಧರಿಸಿ ಓ.ಎಲ್. ನಾಗಭೂಷಣಸ್ವಾಮಿಯವರು ಅನುವಾದಿಸಿರುವ 'ಯುದ್ಧ ಮತ್ತು ಶಾಂತಿ'ಯನ್ನು ಇಲ್ಲಿ ಮಾದರಿಯಾಗಿ ಉದಾಹರಿಸಬಹುದು.

## ಕನ್ನಡದಿಂದ ಇತರೆ ಭಾಷೆಗಳಿಗೆ ಅನುವಾದಗಳು

ಕನ್ನಡ ಸೃಜನ ಲೇಖಕರು ಪ್ರಮುಖವಾಗಿ ಎರಡು ಮಹತ್ವಾಕಾಂಕ್ಷೆಗಳನ್ನು ಪ್ರಕಟಿಸುತ್ತಿರುತ್ತಾರೆ. ತಮ್ಮ ಕೃತಿಗಳು ಬೇರೆ ಭಾಷೆಗಳಿಗೆ ಅನುವಾದವಾಗಬೇಕು ಎಂಬುದು ಮೊದಲನೆಯದು. ಕಥಾಸಾಹಿತ್ಯವಾದರೆ ಅವು ಬೆಳ್ಳಿತೆರೆಯ ಮೇಲೆ ಕಾಣಿಸಿಕೊಳ್ಳಬೇಕು ಎಂಬುದು ಎರಡನೆಯದು. ಈ ಎರಡೂ ಬಗೆಯಲ್ಲಿ ಹೆಚ್ಚಿನ ಸಹೃದಯರನ್ನು ತಲುಪಬಹುದು, ಪ್ರಚಾರ ದೊರೆಯಬಹುದು ಎಂಬ ಬಯಕೆ ಅವರದು.

ಕನ್ನಡದ ಸಂದರ್ಭದಲ್ಲಿ ಬೇಕಾದ ಸಾಹಿತ್ಯ, ವಿಚಾರ, ವಿಜ್ಞಾನಾದಿಗಳನ್ನು ಲೇಖಕರು ಕಾಲಕ್ಕೆ ತಕ್ಕಂತೆ ಅನುವಾದಗಳ ಮೂಲಕ ಬರಮಾಡಿಕೊಂಡಿದ್ದಾರೆ. ಹೀಗೆ ಅನುವಾದಗಳ ಆಮದು ನಡೆದಿರುವುದು ಕನ್ನಡ ಸಾಂಸ್ಕೃತಿಕ ಲೋಕದ ಅಪೇಕ್ಷೆಯನ್ನು ಅಥವಾ ಬೇಡಿಕೆಯನ್ನು ಈಡೇರಿಸುವ ಸಲುವಾಗಿಯೇ ಆಗಿರಬಹುದು. ಹಾಗಾಗಿ ಅನುವಾದಗಳು, ಅನುಸೃಷ್ಟಿಗಳು, ರೂಪಾಂತರಗಳ ಮೂಲಕ ಬೇರೆ ಭಾಷೆಯ ಕೃತಿಗಳು ಕನ್ನಡವನ್ನು ಪೋಷಿಸಿವೆ, ಪ್ರಭಾವಿಸಿವೆ. ಹಾಗೆಯೇ ಕನ್ನಡದಿಂದ ಬೇರೆ ಭಾಷೆಗಳಿಗೆ ಹೋದ ಕೃತಿಗಳ ಸಂಖ್ಯೆ ತೀರಾ ನಗಣ್ಯವೆಂದೇ ಹೇಳಬೇಕು.

ಶ್ರೀಕೃಷ್ಣ ಆಲನಹಳ್ಳಿಯವರ ಕತೆ, ಕಾದಂಬರಿಗಳು ಮಲಯಾಳಂನಲ್ಲಿ ಜನಪ್ರಿಯವಾಗಿವೆ. ನಿರಂಜನರ 'ಚಿರಸ್ಮರಣೆ' ಮಲಯಾಳಂನಲ್ಲಿ ಎಡಪಂಥೀಯ ಓದುಗರನ್ನು ಪ್ರಭಾವಿಸಿದೆ. ಬೇಂದ್ರೆಯವರ ಕೆಲವು ರಚನೆಗಳು ಹಾಗೂ ಎಸ್.ಎಲ್.ಬೈರಪ್ಪ ಅವರ ಕೃತಿಗಳು ಮರಾಠಿ ಭಾಷೆಯ ಓದುಗರ ಪ್ರೀತಿಗೆ ಪಾತ್ರವಾಗಿವೆ. ಕೃತಿಯ ಹಾಗೂ ಬಿ.ಆರ್.ನಾರಾಯಣ ಅವರ ಮಲೆಗಳಲ್ಲಿ ಮದುಮಗಳು, ಪರ್ವ, ತಬ್ಬಲಿಯು ನೀನಾದೆ ಮಗನೆ, ಚಿಕ್ಕವೀರ ರಾಜೇಂದ್ರ, ಶೂದ್ರತಪಸ್ವಿ ಮೊದಲಾದ ಕೃತಿಗಳ ಹಿಂದಿ ಅನುವಾದಗಳು, ಶಂಕರ ಮೊಕಾಶಿ ಪುಣೇಕರರ ಅವಧೇಶ್ವರಿ, ಅವರು ಅನುವಾದಿಸಿದ 'ಶ್ರೀ ರಾಮಾಯಣ ದರ್ಶನಂ', ತೇಜಸ್ವಿನಿ ನಿರಂಜನ ಅವರ ಚಿರಸ್ಮರಣೆ, ಫಣಿಯಮ್ಮ, ವನಮಾಲಾವಿಶ್ವನಾಥ್ ಅವರ 'ದಿ ಲೈಫ್ ಆಫ್ ಹರಿಶ್ಚಂದ್ರ' ಇತ್ಯಾದಿ ಇಂಗ್ಲಿಷ್ ಅನುವಾದಗಳನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಎ.ಕೆ. ರಾಮಾನುಜನ್ ಅವರ 'ಸ್ಪೀಕಿಂಗ್ ಆಫ್ ಶಿವ' ಕನ್ನಡಕ್ಕೆ ಅಂತಾರಾಷ್ಟ್ರೀಯ ಪ್ರಸಿದ್ಧಿಯನ್ನು ತಂದುಕೊಟ್ಟ ಕೃತಿ. ಹಾಗೆಯೇ ಸಂಸ್ಕಾರ ಕಾದಂಬರಿಯ ಅನುವಾದ 'ಎ ರೈಟ್ ಫಾರ್ ಎ ಡೆಡ್ ಮ್ಯಾನ್ ' ಎಂಬುದೂ ಇದೇ ಸಾಲಿನಲ್ಲಿ ಹೆಸರಿಸಬೇಕಾದ ಕೃತಿ.

ಕನ್ನಡದ ಜ್ಞಾನಪೀಠ ಪುರಸ್ಕೃತ ಕವಿಗಳ ರಚನೆಗಳು ಭಾರತದ ಇತರ ಭಾಷೆಗಳ ಓದುಗರಿಗೆ ಈ ದಿನಗಳಲ್ಲೂ ದೊರೆಯುತ್ತಿಲ್ಲ. ಅಲ್ಲಿ ಇಲ್ಲಿ ಬಿಡಿ ರಚನೆಗಳ ಇಂಗ್ಲಿಷ್ ಅನುವಾದಗಳ ಮೂಲಕವೇ ಅವರನ್ನು ತಿಳಿಯುವ ಅವಕಾಶ ಮಾತ್ರ ಸಾಹಿತ್ಯ ಅಕಾದೆಮಿಯಂತಹ ಸಂಸ್ಥೆಗಳು ರೂಪಿಸಿದ ಅನುವಾದಗಳ ಮೂಲಕ ಸಾಧ್ಯವಾಗಿರಬಹುದು. ಆದರೆ ದೇಶೀಯ ಭಾಷೆಗಳಲ್ಲಿ ಅನೇಕರ ರಚನೆಗಳು ಇಲ್ಲವೇ ಇಲ್ಲ ಎನ್ನುವಷ್ಟು ವಿರಳ. ಅನ್ಯ ಭಾಷಾ ಲೇಖಕರು ಕನ್ನಡದಲ್ಲಿ ಅನುವಾದಗಳ ಮೂಲಕ ಪರಿಚಿತರಾಗಿದ್ದಾರೆ. ಆದರೆ ಅನುವಾದಗಳೇ ಇಲ್ಲದ ಕಾರಣಕ್ಕೆ ಕನ್ನಡ ಲೇಖಕರು ಕನ್ನಡೇತರರಿಗೆ ಅಪರಿಚಿತರಾಗಿಯೇ ಉಳಿದಿದ್ದಾರೆ. ಕೆಲವೊಂದು ಭಾಷೆಗಳಲ್ಲಿ ಅದರಲ್ಲಿಯೂ ಮಲಯಾಳಂ, ತೆಲುಗು, ಭಾಷೆಗಳಲ್ಲಿ ಕೆಲವೊಂದು ಕೃತಿಗಳು ಅನುವಾದಗಳಾಗಿವೆ. ಅವು ಸಾಹಿತ್ಯ ಅಕಾದೆಮಿಯಂತಹ ಸಂಸ್ಥೆ ಹಾಗೂ ಕೆಲವೊಂದು ವೈಯಕ್ತಿಕ ನೆಲೆಯಲ್ಲಿ ರೂಪಿಸಿದ ಅನುವಾದಗಳೇ ಆಗಿವೆ. ಇಂಗ್ಲಿಷಿನಲ್ಲಿ ಅನುವಾದವಾದ ಕೃತಿಗಳು ಬಹುತೇಕ ಕನ್ನಡ ಲೇಖಕರೇ ರೂಪಿಸಿ, ಪ್ರಕಟಿಸಿದ ಪುಸ್ತಕಗಳು. ಕನ್ನಡದ ಬಹುಮುಖ್ಯ ರಚನೆಗಳೆಂದೋ, ಲೇಖಕರ ವೈಯಕ್ತಿಕ ಆಸೆಯನ್ನು ಪೂರೈಸಿಕೊಳ್ಳಲೋ ಎಂಬಂತೆ ರೂಪಿಸಿದ ಅನುವಾದಗಳಾಗಿಯೋ ಕೆಲವೊಮ್ಮೆ ಸಾಂಸ್ಥಿಕ ಅನುವಾದಗಳಾಗಿಯೋ ರೂಪುಗೊಂಡಿರುವ ಸಂದರ್ಭಗಳು ಇವೆ. ಶರಣರ ವಚನಗಳು, ಕನಕದಾಸರ ರಚನೆಗಳು ಇತ್ಯಾದಿ ಅನುವಾದ ಕೆಲಸಗಳು ಕನ್ನಡದ ಮಹತ್ವಾಕಾಂಕ್ಷೆಯ ಯೋಜನೆಗಳಾಗಿವೆ. ಅವೆಲ್ಲ ಒಂದು ರೀತಿಯಲ್ಲಿ ರಫ್ತು ಅನುವಾದಗಳಾಗಿ ಬಹುತೇಕ ಜಡವಾಗಿಯೇ ಉಳಿದಿವೆ. ಅವೆಂದೂ ಲಕ್ಷ್ಯಭಾಷೆಯಲ್ಲಿ ಓದುಗರ ಬೇಡಿಕೆಯನ್ನು ಪೂರೈಸುವ ರಚನೆಗಳಾಗಿ ರೂಪುಪಡೆಯಲಿಲ್ಲ. ಕನ್ನಡದ ಕೃತಿಗಳನ್ನು ಕನ್ನಡಿಗರೇ ಓದಿ ಅರ್ಥೈಸಿಕೊಂಡು ಭಾಷೆಗಳಲ್ಲಿ ಬರೆದು ಲಕ್ಷ್ಯಭಾಷೆಯಲ್ಲಿ ತಜ್ಞರಿಂದ ಪರಿಷ್ಕರಿಸಿಕೊಂಡು ರೂಪಿಸಿದ ಅನುವಾದಗಳು ಎಂದೂ ಲಕ್ಷ್ಯಭಾಷೆಯಲ್ಲಿ ಬೇಡಿಕೆಯ ಸರಕುಗಳಾಗಲೇ ಇಲ್ಲ. ಕನ್ನಡದಲ್ಲಿ ಬೇರೆ ಭಾಷೆಯ ಕೃತಿಗಳು ಕನ್ನಡ ಓದುಗರ ಆಪೇಕ್ಷೆಯನ್ನು ಪೂರೈಸುವಂತೆ ಬಂದಾಗ ಮಾತ್ರ ಸ್ವೀಕಾರಾರ್ಹ ಎನಿಸಿವೆ; ಹಾಗೆಯೇ ಕನ್ನಡ ಓದುಗರ ಮನಸೆಳೆದಿವೆ. ಹಾಗಾಗಿ ಬೇರೆ ಭಾಷೆಯ ಓದುಗರ ನಡುವೆ ಕನ್ನಡದ ಕೃತಿಗಳ ಬಗೆಗೆ ಅಭಿರುಚಿ ಹುಟ್ಟಿಸುವ ಕೆಲಸಗಳನ್ನು ಮೊದಲು ಮಾಡಬೇಕಾಗಿದೆ. ಅವುಗಳ ಬಗೆಗೆ ಕುತೂಹಲ ತಾಳಿದ ಬೇರೆ ಭಾಷೆಯ ಓದುಗರು ಕನ್ನಡವನ್ನು ಕಲಿತು ಅನುವಾದಗಳ ಮೂಲಕ ಬೇರೆ ಭಾಷೆಗಳಿಗೆ ಕೊಂಡೊಯ್ಯುವಂತೆ ಮಾಡುವ ಅಗತ್ಯವಿದೆ. ಬಿ. ವೆಂಕಟಾಚಾರ್ಯರು ಅನುವಾದ ಮಾಡುವ ಸಲುವಾಗಿಯೇ ಬಂಗಾಳಿ ಭಾಷೆ ಕಲಿತರು. ಬಂಕಿಮಚಂದ್ರರೇ ಮೊದಲಾದವರ ಅನೇಕ ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿದರು. ತಗಳಿ ಶಿವಶಂಕರ

ಪಿಳ್ಳೆಯವರ ಮಲಯಾಳಂ ಕಾದಂಬರಿ 'ಚೆಮ್ಮೀನ್' ಜಗತ್ತಿನ ನಲವತ್ತೇಳು ಭಾಷೆಗಳಿಗೆ ಅನುವಾದವಾಗಿವೆ. ಮಲಯಾಳಂ ಭಾಷೆಗೆ ವಿದೇಶಿ ಸಾಹಿತ್ಯ ವಲಯದಲ್ಲಿ 'ಚೆಮ್ಮೀನ್ ಭಾಷೆ' ಎಂಬ ಪರ್ಯಾಯ ಹೆಸರೇ ದಾಖಲಾಗಿದೆಯೆಂಬುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು.

**ಕನ್ನಡ ಅನುವಾದಕರು**

ಬ್ರಿಟಿಷರ ಆಳ್ವಿಕೆಯು ಆರಂಭವಾಗುತ್ತಿದ್ದಂತೆ ಭಾರತದಲ್ಲಿ ಇಂಗ್ಲಿಷ್ ಭಾಷೆಯ ಪ್ರಭಾವ ನಿಧಾನವಾಗಿ ಕಾಣಿಸಿಕೊಳ್ಳತೊಡಗಿತು. ಭಾರತೀಯರಲ್ಲಿ ಇಂಗ್ಲಿಷ್ ಮಾದರಿಯ ಶಿಕ್ಷಣ, ಇಂಗ್ಲಿಷ್ ಕಲಿಕೆ ಪರಿಣಾಮವಾಗಿ ಯುರೋಪಿಯನ್ ಸಾಹಿತ್ಯದ ಅನಾವರಣವಾಗತೊಡಗಿತು. ಫ್ರಾನ್ಸ್, ಜರ್ಮನಿ, ಇಟಲಿ, ಸ್ಪೇಯಿನ್, ರಷ್ಯಾ ಮೊದಲಾದ ದೇಶಗಳ ಅನೇಕ ಕೃತಿಗಳು ಭಾರತೀಯರ ಓದಿಗೆ ನಿಲುಕಿದುವು. ಹಾಗೆ ಇಂಗ್ಲಿಷ್‌ನ ಮೂಲಕ ಓದಿದ ಯೂರೋಪಿಯನ್ ಭಾಷೆಯ ಕೃತಿಗಳನ್ನು ತಮ್ಮ ಓದುಗರಿಗೂ ಭಾರತೀಯ ಭಾಷೆಯಲ್ಲಿ ಅನುವಾದಿಸಿದರು.

19ನೆಯ ಶತಮಾನದ ಉತ್ತರಾರ್ಧದಲ್ಲಿ ನಿಧಾನ ಗತಿಯಲ್ಲಿ ಆರಂಭವಾದ ಈ ಬಗೆಯ ಅನುವಾದ ಚಟುವಟಿಕೆಗಳು 20ನೆಯ ಶತಮಾನದ ಆರಂಭದ ಹೊತ್ತಿಗೆ ಇನ್ನಷ್ಟು ತ್ವರಿತಗತಿಯಲ್ಲಿ ಮುನ್ನಡೆದುವು. ಪರಿಣಾಮವಾಗಿ ಭಾರತೀಯ ಭಾಷೆಗಳಲ್ಲಿ ಯೂರೋಪಿಯನ್ ಸಾಹಿತ್ಯ ಕೃತಿಗಳು ಹಲವು ರೂಪಗಳಲ್ಲಿ ಕಾಣಿಸಿಕೊಂಡುವು. ಮುಂದುವರಿದು ಭಾರತೀಯ ಭಾಷೆಗಳ ಕೃತಿಗಳನ್ನು ಪರಸ್ಪರ ಅನುವಾದಿಸುವ ಕೆಲಸಗಳೂ ನಡೆದುವು. ಆರಂಭದಲ್ಲಿ ಭಾರತೀಯ ಭಾಷೆಗಳ ಕೃತಿಗಳನ್ನು ಇಂಗ್ಲಿಷ್ ಭಾಷೆಯ ಮೂಲಕವೇ ಅನುವಾದಿಸುವ ಕೆಲಸ ನಿರ್ವಹಿಸಿದರು. ಕ್ರಮೇಣ ಆಯಾ ಭಾಷೆಗಳಿಂದ ನೇರವಾಗಿ ಅನುವಾದಿಸುವ ಚಟುವಟಿಕೆಗಳಿಗೆ ಉತ್ತೇಜನ ದೊರೆಯಿತು.ಅಂತಹ ಅನುವಾದಕರು ಕನ್ನಡದಲ್ಲಿ ಹೇಳಿಕೊಳ್ಳುವಂತಹ ಸಂಖ್ಯೆಯಲ್ಲೇನೂ ಇಲ್ಲ. ಈ ದಿಸೆಯಲ್ಲಿ ಹಲವು ಅನುವಾದಕರು ತಮ್ಮ ಪರಿಸರದ ಭಾಷೆಗಳ ನಡುವೆ ಬದುಕುತ್ತಲೇ ಅನುವಾದಗಳ ಕೆಲಸಗಳಲ್ಲಿ ತೊಡಗಿಸಿಕೊಂಡರು. ಈ ಬಗೆಯ ಅನುವಾದಕರಲ್ಲಿ ವಿಭಿನ್ನ ಹಿನ್ನೆಲೆಯುಳ್ಳವರನ್ನು ಗಮನಿಸಬಹುದು.

**ಕನ್ನಡೇತರ ಮಾತೃಭಾಷೆ**

ಕನ್ನಡದಲ್ಲಿ ಕನ್ನಡೇತರ ಮನೆ ಮಾತಿನ ಬರಹಗಾರರೂ ಅನುವಾದ ಕೆಲಸಗಳನ್ನು ನಿರ್ವಹಿಸಿದ್ದಾರೆ. ಈ ದಿಸೆಯಲ್ಲಿ ಮರಾಠಿ ಮನೆಮಾತಿನ ಬೇಂದ್ರೆ, ವಿ.ಎಂ. ಇನಾಂದಾರ್, ಮೀನಾ ವಾಂಗೀಕರ್ ತಮಿಳು ಮನೆಮಾತಿನ ಮಾಸ್ತಿ, ಗೊರೂರು, ಡಿ.ವಿ. ಗುಂಡಪ್ಪ, ಎಲ್. ಗುಂಡಪ್ಪ, ಶೇಷನಾರಾಯಣ, ಮತ್ತೂರು

ಕೃಷ್ಣಮೂರ್ತಿ, ತಮಿಳು ಸೆಲ್ವಿ, ಜಯಲಲಿತ, ಮಲಯಾಳಂ ಮನೆ ಮಾತಿನ ನಾ. ಕಸ್ತೂರಿ, ಕೊಂಕಣಿ ಮನೆಮಾತಿನ ಗೋವಿಂದ ಪೈ, ಪಂಜೆ ಮಂಗೇಶರಾವ್, ಎಂ.ಎನ್. ಕಾಮತ್, ತೆಲುಗು ಮನೆ ಮಾತಿನ ಆರ್ವೀಯಸ್ ಸುಂದರಂ, ಶೇಷಶಾಸ್ತ್ರಿ, ಉರ್ದು ಮನೆಮಾತಿನ ಹಸನ್ ನಯೀಂ ಸುರಕೋಡ, ಫಕೀರ್ ಮುಹಮ್ಮದ್ ಕಟ್ಪಾಡಿ, ತುಳು ಮನೆಮಾತಿನ ಕೆದಂಬಾಡಿ ಜತ್ತಪ್ಪ ರೈ ಮೊದಲಾದವರು ಪ್ರಮುಖರು. ಇವರೆಲ್ಲರೂ ಸಾಹಿತ್ಯ ಕೃತಿಗಳನ್ನು ಕನ್ನಡದಲ್ಲಿ ಅನುವಾದಿಸುವ ಕೆಲಸ ಮಾಡಿದ್ದಾರೆ. ಈ ಲೇಖಕರಿಗೆ ಅನುವಾದಗಳ ಮೂಲಭಾಷೆ ಮಾತೃಭಾಷೆಯಾಗಿದ್ದುದು ಆಕಸ್ಮಿಕವೇ ಇರಬಹುದು. ಆದರೆ ಅನುವಾದ ಕೆಲಸಗಳಲ್ಲಿ ತೊಡಗಿಸಿಕೊಳ್ಳಲು ಅವರಿಗೆ ಇದ್ದ ಬಹುಭಾಷಾ ತಿಳುವಳಿಕೆ ಮುಖ್ಯ ಕಾರಣಗಳಲ್ಲಿ ಒಂದು.

## ಔದ್ಯೋಗಿಕ ನೆಲದ ಭಾಷೆ

ಮತ್ತೆ ಕೆಲವರು ಔದ್ಯೋಗಿಕ ಕಾರಣಗಳಿಗೆ ಬೇರೆ ಬೇರೆ ಊರುಗಳಲ್ಲಿ ತಾವು ನೆಲೆಸಿದ ರಾಜ್ಯದ ಭಾಷೆಯನ್ನು ಕಲಿತು ಅನುವಾದ ಕೆಲಸಗಳಲ್ಲಿ ತೊಡಗಿಸಿಕೊಂಡವರೂ ಇದ್ದಾರೆ. ಕಾಸರಗೋಡು ಸರಕಾರೀ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದ ಬಿ.ಕೆ. ತಿಮ್ಮಪ್ಪ, ಕಲ್ಲಿಕೋಟೆ ಮೊದಲಾದೆಡೆ ಕೇರಳದ ಸ್ಪೈಸ್ ಬೋರ್ಡ್‌ನಲ್ಲಿ ಕೆಲಸ ನಿರ್ವಹಿಸುತ್ತಿದ್ದ ಎಂ.ಎಸ್.ಲಕ್ಷ್ಮಣಚಾರ್, ಅವರ ಶ್ರೀಮತಿಯವರಾದ ವಸುಮತಿ ಲಕ್ಷ್ಮಣಾಚಾರ್ ಇವರೆಲ್ಲ ಮಲಯಾಳಂ ಕಲಿತು ಅಲ್ಲಿನ ಕೃತಿಗಳನ್ನು ಅನುವಾದ ಮಾಡಿದರು. ಮದ್ರಾಸ್ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿದ್ದ ಬಿ.ವಿ.ಕೆದಿಲ್ಲಾಯ, ಮದುರೈ ಕಾಮರಾಜ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿದ್ದ ಪಾ.ಶ.ಶ್ರೀನಿವಾಸ, ಟಿ.ಬಿ.ಸಿದ್ಧಲಿಂಗಯ್ಯ ಮೊದಲಾದವರು ತಮಿಳು ಕಲಿತು ಅನುವಾದಗಳಲ್ಲಿ ತೊಡಗಿಸಿಕೊಂಡವರು. ಕಲ್ಕತ್ತಾದಲ್ಲಿ ನೆಲೆಸಿದ್ದ ಕುಮಾರಪ್ಪ ಬಂಗಾಳಿ ಕಲಿತು ಅನುವಾದಗಳನ್ನು ಮಾಡಿದರು. ಆಂಧ್ರದಲ್ಲಿ ಅಧ್ಯಾಪಕರಾಗಿದ್ದ ಕುಂ.ವೀರಭದ್ರಪ್ಪ ಅವರು ತೆಲುಗಿನಿಂದ, ಸ್ನೇಹಲತಾ ರೋಹಿಡೇಕರ್ ಅವರು ಒರಿಯಾದಿಂದ ಅನುವಾದಗಳನ್ನು ಮಾಡಿದ್ದಾರೆ.

## ಆಸಕ್ತಿಯಿಂದ ಅನ್ಯಭಾಷೆ ಕಲಿತವರು

ವೈಯಕ್ತಿಕ ಆಸಕ್ತಿಯಿಂದ ದೇಶ, ವಿದೇಶಗಳ ಭಾಷೆಗಳನ್ನು ಕಲಿತು ಅನುವಾದ ಮಾಡಿದವರೂ ಇದ್ದಾರೆ. ಈಗಾಗಲೇ ಹೇಳಿದಂತೆ ಬಂಗಾಳಿ ಭಾಷೆಯನ್ನು ಕಲಿತು ನೇರ ಅನುವಾದಗಳನ್ನು ಮಾಡಿದ ಬಿ. ವೆಂಕಟಾರ್ಯರು ಪ್ರಮುಖರು. ಮುಂದೆ ಎ.ಆರ್. ಕೃಷ್ಣಶಾಸ್ತ್ರೀ, ಅಹೋಬಲ ಶಂಕರ ಮೊದಲಾದವರು ಬಂಗಾಳಿ ಭಾಷೆ ಕಲಿತು ಅನುವಾದಗಳನ್ನು ರೂಪಿಸಿದ್ದರು. ರಷ್ಯನ್ ಭಾಷೆಯನ್ನು ಕಲಿತ ಕೆ.ಎಲ್. ಗೋಪಾಲಕೃಷ್ಣರಾವ್, ಬಿ.ಕೆ.ಎಸ್. ಮೂರ್ತಿ, ಎಚ್.ಎಸ್. ಹರಿಶಂಕರ್, ಕೆ.ಎಸ್.

ಶಿವದಾಸನ್, ಬುದ್ಧಣ್ಣ ಹಿಂಗಮಿರೆ ಮೊದಲಾದವರು ಅನುವಾದಗಳನ್ನು ಮಾಡಿದ್ದಾರೆ. ವಸುಂಧರಾ ಫಿಲಿಯೋಜಾ ಅವರು ಫ್ರೆಂಚ್‌ನಿಂದ, ವಿಜಯಾ ಗುತ್ತಲ ಅವರು ಗ್ರೀಕ್‌ನಿಂದ ಕನ್ನಡಕ್ಕೆ ನೇರ ಅನುವಾದಗಳನ್ನು ಮಾಡಿದ್ದಾರೆ. ಹೈದ್ರಾಬಾದ್ ಕರ್ನಾಟಕದಲ್ಲಿ ಉರ್ದು ಶಿಕ್ಷಣ ಮಾಧ್ಯಮವಾಗಿದ್ದುದರಿಂದ ಪಂಚಾಕ್ಷರಿ ಹಿರೇಮಠ, ಶಾಂತರಸ ಮೊದಲಾದವರು ಉರ್ದು ಕಲಿತು ಅನುವಾದ ಮಾಡಿದ್ದನ್ನು ಇಲ್ಲಿ ನೆನಪಿಸಿಕೊಳ್ಳಬಹುದು.

ಬೇರೆ ಭಾಷೆಗಳನ್ನು ಕಲಿಯಲು ಅನುಕೂಲ ಇಲ್ಲದ ದಿನಗಳಲ್ಲಿಯೂ ಹಿರಿಯ ತಲೆಮಾರಿನ ಜನರು ಭಾಷೆಗಳನ್ನು ಕಲಿತು ಅನುವಾದಗಳ ಮೂಲಕ ಕೃತಿಗಳನ್ನು ಕನ್ನಡಕ್ಕೆ ತಂದಿದ್ದಾರೆ. ಈಗ ಬೇರೆ ಭಾಷೆಗಳನ್ನು ಕಲಿಯುವ ಮನಸ್ಸು ಕ್ಷೀಣಿಸಿದೆ. ಬಹುಭಾಷಾ ಕಲಿಕೆಯ ಶ್ರಮಕ್ಕಿಂತ ಇಂಗ್ಲಿಷ್ ಭಾಷೆಯನ್ನು ಮಾತ್ರ ಕಲಿಯುವುದು ಉತ್ತಮ ಎಂಬ ನಿಲುವಿಗೆ ಜನ ತಲುಪಿದ್ದಾರೆ. ಬೇರೆ ಭಾಷೆ ಕಲಿತಾಗಲೂ ಅನುವಾದ ಕೆಲಸಗಳನ್ನು ಮಾಡುವ ಮನಸ್ಥಿತಿಯಂತೂ ಇಲ್ಲವಾಗಿದೆ.

### ಗಡಿನಾಡಿನ ಲೇಖಕರು

ರಾಜ್ಯದ ಗಡಿಭಾಗಗಳಲ್ಲಿ ಅನ್ಯರಾಜ್ಯಗಳ ಸಂಪರ್ಕದ ಕಾರಣಕ್ಕೆ ಅನೇಕ ಲೇಖಕರು ಎರಡು ಭಾಷೆಗಳ ನಡುವೆ ತಮ್ಮ ಬರವಣಿಗೆಯನ್ನು ರೂಪಿಸಿರುತ್ತಾರೆ. ಕರ್ನಾಟಕದ ಬಹುತೇಕ ಪ್ರದೇಶಗಳಲ್ಲಿ ಬಹುಭಾಷಿಕ ಪರಿಸರವೇ ಇದೆ. ಹಾಗಾಗಿ ಆಯಾ ಪ್ರದೇಶಗಳಲ್ಲಿ ಜನರು ಒಂದಲ್ಲ ಒಂದು ಭಾಷೆಯನ್ನು ತಮ್ಮ ಬರಹದ ಭಾಷೆಯಾಗಿ ರೂಪಿಸಿಕೊಂಡಿರುವುದನ್ನು ಕಾಣಬಹುದು. ಕನ್ನಡ ಮಲಯಾಳಂ ಗಡಿಪ್ರದೇಶದ ಲೇಖಕರಲ್ಲಿ ಸಿ. ರಾಘವನ್, ಕೆ.ಕೆ. ನಾಯರ್, ಪಾರ್ವತಿ ಜಿ. ಐತಾಳ್, ಮೋಹನ ಕುಂಟಾರ್ ತಮಿಳಿನಿಂದ ನಲ್ಲತಂಬಿ ಮೊದಲಾದವರು ಎರಡೂ ಭಾಷೆಗಳಿಗೆ ಸಾಹಿತ್ಯ ಕೃತಿಗಳನ್ನು ಪರಿಸ್ಪರ ಅನುವಾದಿಸಿದ್ದಾರೆ. ಸಾರಾ ಅಬೂಬಕ್ಕರ್, ನಾ.ದಾ. ಶೆಟ್ಟಿ, ಅರ್ತಿಕಜೆ ಶ್ರೀಕೃಷ್ಣಭಟ್ ಮೊದಲಾದವರು ಮಲಯಾಳಂನಿಂದ ಕನ್ನಡಕ್ಕೆ ಅನುವಾದ ಮಾಡಿದರೆ, ಪಯ್ಯನ್ನೂರು ಕುಞರಾಮನ್‌ನಂತಹ ಲೇಖಕರು ಕನ್ನಡದಿಂದ ಮಲಯಾಳಂ ಭಾಷೆಗೆ ಅನುವಾದ ಮಾಡಿದ್ದಾರೆ. ಕನ್ನಡ ಮರಾಠಿ ಸಂದರ್ಭದಲ್ಲಿ ಉಮಾ ಕುಲಕರ್ಣಿ, ಸರಜೂ ಕಾಟ್ಕರ್, ಡಿ.ಎಸ್. ಚೌಗಲೆ ಮೊದಲಾದವರು ಗಡಿ ಪ್ರದೇಶದಲ್ಲಿ ಮರಾಠಿಯಿಂದ ಕನ್ನಡಕ್ಕೆ ನೇರ ಅನುವಾದ ಗಳನ್ನು ಮಾಡಿದ್ದಾರೆ. ಗಡಿನಾಡು ಭಾಷಾ ಸಂಘರ್ಷದ ನೆಲವಾಗದೆ ಭಾಷಾ ಸೌಹಾರ್ದದ ನೆಲೆಯಾಗುವಲ್ಲಿ ಅನುವಾದಕರ ಶ್ರಮವೂ ಇದೆ. ಎರಡು ಭಾಷೆಗಳ ನಡುವೆ ಕೊಡುಕೊಳುಗೆಗಳ ಕೆಲಸ ಸಾಂಸ್ಕೃತಿಕ ವಿನಿಮಯದ ಭಾಗವಾಗಿಯೂ ಪರಿಣಾಮಕಾರಿಯೆನಿಸಿದೆ.

ಇವರಷ್ಟೇ ಅಲ್ಲದೆ ಕರ್ನಾಟಕದ ಒಳಗಡೆ ವಾಸ ಮಾಡುವ ಅನೇಕರು ತಮ್ಮ ಮಾತೃಭಾಷೆಯ ಕೃತಿಗಳನ್ನು ಕನ್ನಡಕ್ಕೆ ಅನುವಾದ ಮಾಡಿದ್ದಾರೆ. ಶೇಷನಾರಾಯಣ ಅವರ ಮನೆ ಮಾತು ತಮಿಳು. ಕೆ.ಕೆ. ಗಂಗಾಧರನ್, ಅಶೋಕಕುಮಾರ್ ಮೊದಲಾದವರ ಮನೆ ಮಾತು ಮಲಯಾಳಂ. ತೆಲುಗು ಮನೆಮಾತಿನ ಜಿ.ಎಸ್. ಮೋಹನ್, ಕೊಂಕಣಿ ಮನೆಮಾತಿನ ಗೀತಾ ಶೆಣೈ ಹೀಗೆ ಅನೇಕರಿದ್ದಾರೆ. ಭಾಷಾ ಅಧ್ಯಾಪಕರಾಗಿ ಸಾಹಿತ್ಯ ಪ್ರೀತಿಯ ಭಾಗವಾಗಿ ಅನುವಾದವನ್ನು ರೂಪಿಸಿದ ಅನೇಕರು ಕನ್ನಡ ಅನುವಾದ ಕ್ಷೇತ್ರದಲ್ಲಿ ಹೆಸರಾಗಿದ್ದಾರೆ. ಇಂಗ್ಲಿಷ್ ಪ್ರಾಧ್ಯಾಪಕರಾಗಿ ಅನುವಾದಗಳಲ್ಲಿ ತೊಡಗಿಸಿಕೊಂಡ ಅನೇಕರು ಕನ್ನಡದಲ್ಲಿದ್ದಾರೆ. ಸುಮತೀಂದ್ರ ನಾಡಿಗ, ಶಾಂತಿನಾಥ ದೇಸಾಯಿ, ಪಿ. ಲಂಕೇಶ್, ಓ.ಎಲ್. ನಾಗಭೂಷಣಸ್ವಾಮಿ, ಎಲ್.ಎಸ್. ಶೇಷಗಿರಿರಾವ್ ಸಿ. ನಾಗಣ್ಣ, ಕೆ.ಎಸ್. ಭಗವಾನ್, ಸಿ.ಎನ್. ರಾಮಚಂದ್ರನ್, ವೀಣಾ ಶಾಂತೇಶ್ವರ, ಲಕ್ಷ್ಮೀ ಚಂದ್ರಶೇಖರ್, ವನಮಾಲಾ ವಿಶ್ವನಾಥ್, ಪಾರ್ವತಿ ಜಿ. ಐತಾಳ್ ಮೊದಲಾದವರು ಸಾಹಿತ್ಯಾಸಕ್ತಿಯಿಂದ ಅನುವಾದ ಕೆಲಸಗಳನ್ನು ನಿರ್ವಹಿಸಿದ್ದಾರೆ. ಕನ್ನಡ ಪ್ರಾಧ್ಯಾಪಕರಾಗಿದ್ದ ದೇ.ಜ.ಗೌ., ನರಹಳ್ಳಿ ಬಾಲಸುಬ್ರಹ್ಮಣ್ಯ, ಸಿ.ಪಿ.ಕೆ., ಎನ್.ಎಸ್.ಲಕ್ಷ್ಮೀನಾರಾಯಣ ಭಟ್ಟ, ಎಚ್.ಎಸ್. ರಾಘವೇಂದ್ರರಾವ್, ಎಚ್.ಎಸ್. ಶ್ರೀಮತಿ, ಪಿ.ವಿ. ನಾರಾಯಣ, ವಿಜಯ ಸುಬ್ಬರಾಜ್, ನಾ.ದಾ. ಶೆಟ್ಟಿ, ಬಿ.ಎ. ವಿವೇಕ ರೈ, ಎಂ.ಆರ್. ಕಮಲಾ, ಎಲ್.ಸಿ. ಸುಮಿತ್ರಾ ಹಿಂದಿ ಭಾಷಾ ಪ್ರಾಧ್ಯಾಪಕರಾದ ತಿಪ್ಪೇಸ್ವಾಮಿ, ಬಾಲಚಂದ್ರ ಜಯಶೆಟ್ಟಿ, ಲಕ್ಷ್ಮೀನಾರಾಯಣ ಅರೋರಾ, ಪ್ರಧಾನ್ ಗುರುದತ್ತ, ಸಿದ್ಧಲಿಂಗ ಪಟ್ಟಣಶೆಟ್ಟಿ, ತೇಜಸ್ವಿ ಕಟ್ಟೀಮನಿ ಹೀಗೆ ಅನೇಕರು ನಿರಂತರವಾಗಿ ಕನ್ನಡ ಅನುವಾದ ಕ್ಷೇತ್ರವನ್ನು ಹುಲುಸಾಗಿ ಬೆಳೆಸಿದ್ದಾರೆ.

ಇವರಷ್ಟೇ ಅಲ್ಲದೆ ಬೇರೆ ಬೇರೆ ಕ್ಷೇತ್ರಗಳಲ್ಲಿ ದುಡಿಯುವವರೂ ಆಸಕ್ತಿಯಿಂದ ಅನುವಾದಗಳನ್ನು ಮಾಡುತ್ತಲೇ ಬಂದಿದ್ದಾರೆ. ಎಸ್. ದಿವಾಕರ್, ಎಚ್.ಎಸ್. ಪಾರ್ವತಿ, ಎಸ್.ಎಂ. ರಾಮಚಂದ್ರಸ್ವಾಮಿ, ಬಿ. ಸುಜ್ಞಾನಮೂರ್ತಿ ಈ ದಿಸೆಯಲ್ಲಿ ಪ್ರಮುಖ ಹೆಸರು.

## 21ನೆಯ ಶತಮಾನದ ಅನುವಾದಗಳ ಆಯಾಮ

21ನೆಯ ಶತಮಾನದ ಕನ್ನಡ ಅನುವಾದಗಳಲ್ಲಿ ಹೆಚ್ಚಾಗಿ ಆತ್ಮಕತೆಗಳದೇ ಸಿಂಹಪಾಲು. ಅದರಲ್ಲಿಯೂ ಮಹಿಳಾ ಆತ್ಮಕತೆಗಳ ಸಂಖ್ಯೆಯೂ ಹೆಚ್ಚಿದೆ. ಮರಾಠಿ ದಲಿತ ಆತ್ಮಕತೆಗಳ ಅನುವಾದಗಳು 20ನೆಯ ಶತಮಾನದ ಕೊನೆಯ ದಶಕದಲ್ಲಿ ಕಾಣಿಸಿಕೊಂಡು, ಕನ್ನಡದಲ್ಲಿ ಹೊಸ ಸಂಚಲನವನ್ನು ಹುಟ್ಟು ಹಾಕಿದುವು.

ಚಂದ್ರಕಾಂತ ಪೋಕಳೆಯವರು ಅನುವಾದಿಸಿದ ಲಕ್ಷ್ಮಣ ಗಾಯಕವಾಡರ ಉಚಲ್ಯಾ(1994), ದು.ನಿಂ. ಬೆಳಗಲಿಯವರು ಅನುವಾದಿಸಿದ ಶರಣಕುಮಾರ ನಿಂಬಾಳೆಯವರ 'ಅಕ್ರಮಸಂತಾನ' ಇವು ಆರಂಭದ ಮರಾಠಿ ಆತ್ಮಕತೆಗಳ ಅನುವಾದಗಳು. ಅವು ಮುಂದುವರಿದು ಅನೇಕ ಅನುವಾದಗಳು ಬಂದುವಲ್ಲದೆ ಮಹಿಳಾ ಆತ್ಮಕತೆಗಳು ಕನ್ನಡದಲ್ಲಿ ಯಥೇಚ್ಛವಾಗಿ ಅನುವಾದವಾದುವು. ಪೂರ್ಣಿಮಾಭಟ್ ಅನುವಾದಿಸಿದ ಮಲಯಾಳಂ ಲೇಖಕಿ ಕಮಲಾದಾಸ್ ಅವರ 'ನನ್ನ ಕತೆ'(1995) ನಾ.ದಾ. ಶೆಟ್ಟಿ ಅನುವಾದಿಸಿದ 'ಬಾಲ್ಯದ ನೆನಪುಗಳು'(2001) ಪಾರ್ವತಿ ಜಿ. ಐತಾಳ್ ಅನುವಾದಿಸಿದ 'ನೀರ್‌ಮಾದಳ ಹೂ ಬಿಟ್ಟ ಕಾಲ'(2009) ಇತ್ಯಾದಿ ಅನೇಕ ಆತ್ಮಕತೆಗಳು ಕನ್ನಡದಲ್ಲಿ ಬಂದುವು. ರವಿ ಬೆಳಗೆರೆಯವರು ಅನುವಾದಿಸಿದ ಪ್ರೊತಿಮಾ ಬೇಡಿ ಅವರ 'ಟೈಂಪಾಸ್' (1999, ಪುನರ್ಮುದ್ರಣ 2000), ಅಲ್ಲದೆ ಹಸನ್ ನಯೀಂ ಸುರಕೋಡ ಅನುವಾದಿಸಿದ ಅಮೃತಾ ಪ್ರೀತಮ್ ಅವರ 'ರಸೀದಿ ಟಿಕೇಟು' ಇತ್ಯಾದಿ ಆತ್ಮಕತೆಗಳು ಗಮನ ಸೆಳೆಯುತ್ತವೆ.

ಎಂ.ಆರ್. ಕಮಲ ಅನುವಾದಿಸಿದ 'ಕಪ್ಪು ಹಕ್ಕಿಯ ಬೆಳಕಿನ ಹಾಡು'(2004) ಇದರಲ್ಲಿ ನೀಗ್ರೋ ಗುಲಾಮಿ ಕಪ್ಪು ಮಹಿಳೆಯರ ಒಟ್ಟು ನಾಲ್ವರ ಆತ್ಮಕತೆಗಳು ಹಾಗೂ ಒಬ್ಬಳ ಜೀವನಗಾಥೆಯಿದೆ. 'ರೋಸಾಪಾರ್ಕ್ಸ್: ನನ್ನ ಕಥೆ'(2006) ಇದರಲ್ಲಿ ಅಮೆರಿಕದ ಕಪ್ಪು ಜನರ ಹೋರಾಟದ ಬದುಕಿನ ಕತೆಯಿದೆ. 'ಸೆರೆಹಕ್ಕಿ ಹಾಡುವುದು ಏಕೆಂದುಬಲ್ಲೆ' ಮಾಯಾ ಏಂಜೆಲೋ ಆತ್ಮಕತೆ(2007). ಇದರಲ್ಲಿ ಕಪ್ಪು ಜನಾಂಗದ ನೊಂದವರ ಆಸೆ, ಆಕಾಂಕ್ಷೆ, ನೋವು, ನಲಿವುಗಳ ಕತೆಯಿದೆ. 'ಮರುಭೂಮಿಯ ಹೂ' ಆಫ್ರಿಕಾದ ಮಹಿಳೆಯೊಬ್ಬಳ ಆತ್ಮಕತೆ(2013). ವಾರಿಸ್ ಡೆರಿಸ್ ಆಫ್ರಿಕಾದ ಸೋಮಾಲಿಯಾ ದೇಶದ ಮುಸ್ಲಿಂ ಅಲೆಮಾರಿ ಬುಡಕಟ್ಟಿಗೆ ಸೇರಿದ ಮಹಿಳೆಯೊಬ್ಬಳ ಹೋರಾಟದ ಬದುಕಿನ ಚಿತ್ರಣವಿದೆ. ಪಾಕಿಸ್ತಾನದ ಬಾಲಕಿ ಮಲಾಲಾ ಯೂಸಫ್ಜೈಯಾಗೆ ನೋಬೆಲ್ ಪಾರಿತೋಷಕ ಸಿಕ್ಕಾಗ ಪ್ರಕಟವಾದ 'ನಾನು ಮಲಾಲಾ' ಪುಸ್ತಕ ಜಗತ್ತಿನ ಅನೇಕ ಭಾಷೆಗಳಲ್ಲಿಯೂ ಅನುವಾದವಾದಂತೆ ಕನ್ನಡದಲ್ಲಿಯೂ ಕಾಣಿಸಿಕೊಂಡಿತು. ತೆಹಮಿನ ದುರ್ರಾನಿಯ 'ಆರನೆಯ ಹೆಂಡತಿ', ಮಾಧವಿ ದೇಸಾಯಿಯ 'ಕುಣಿಯೆ ಗುಮಾ', ಸುಶ್ಮಿತಾ ಬಂದೋಪಾಧ್ಯಾಯರ 'ಕಾಬೂಲಿವಾಲಾನ ಮಡದಿ', ಬೇಬಿಹಲ್ದಾರ್‌ಳ 'ನೋವಿನ ಬದುಕು', ನಳಿನಿ ಜಮೀಲರ 'ಸೆಕ್ಸ್‌ವರ್ಕರ್ ಒಬ್ಬಳ ಆತ್ಮಕತೆ', ನಟಿ ಶಕೀಲಾರ ಆತ್ಮಕತೆ ಇತ್ಯಾದಿಗಳನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಈ ಬಗೆಯ ಆತ್ಮಕತೆಯ ಅನುವಾದಗಳು ಮೂಲ ಭಾಷೆಯಲ್ಲಿ ಪ್ರಕಟವಾಗಿ ಹೆಚ್ಚು ತಡವಾಗದೆ ಇತರ ಭಾಷೆಗಳಿಗೆ ಅನುವಾದ ವಾಗಿರುವುದನ್ನು ಗಮನಿಸಬಹುದು.

21ನೇ ಶತಮಾನದಲ್ಲಿ ದೇವರು, ಧರ್ಮ, ದಾರ್ಶನಿಕ ಪರಂಪರೆಗಳನ್ನು ಕುರಿತ ಅನುವಾದಗಳು ಹೆಚ್ಚಾಗಿ ಪ್ರಕಟವಾಗಲಾರಂಭಿಸಿವೆ. ಅನೇಕ ಖಾಸಗಿ ಸಂಘ-ಸಂಸ್ಥೆಗಳು ಈ ಬಗೆಯ ಅನುವಾದಗಳನ್ನು ರೂಪಿಸಿ ಪ್ರಕಟಿಸುತ್ತಿವೆ. ಹಾಗೆಯೇ ವಿಜ್ಞಾನ ಸಾಹಿತ್ಯ, ವೈಚಾರಿಕ ಸಾಹಿತ್ಯ ಕೃತಿಗಳ ಅನುವಾದಗಳಿಗೂ ಹೆಚ್ಚಿನ ಪ್ರಾಶಸ್ತ್ಯವಿದೆ. ಕೆ.ಪುಟ್ಟಸ್ವಾಮಿ ಅವರು 'ಜೀವಸಂಕುಲಗಳ ಉಗಮ'ದಂತಹ ಕೃತಿಗಳ ಮೂಲಕ ವಿಜ್ಞಾನ ಸಾಹಿತ್ಯದ ಅನುವಾದಗಳಿಗೆ ಹೆಸರಾಗಿದ್ದಾರೆ. ಅನುವಾದಗಳ ಮೂಲಕ ಹೊಸಬಗೆಯ ಕಾವ್ಯ, ಕತೆ, ಕಾದಂಬರಿಗಳ ಕುರಿತ ಕುತೂಹಲಕ್ಕಿಂತಲೂ ವ್ಯಕ್ತಿಗಳ ವೈಯಕ್ತಿಕ ನೋವು ನಲಿವುಗಳ ಆಖ್ಯಾನಗಳಿಗೆ ಓದುಗರು ಆಕರ್ಷಿತ ರಾಗುವುದು ಒಂದೆಡೆ. ವೈಯಕ್ತಿಕ ನೋವನ್ನು ಹೇಳಿಕೊಳ್ಳುವುದರ ಜೊತೆಗೆ ಧಾರ್ಮಿಕತೆಯ ಮುಖವಾಡವನ್ನು ತೆರೆದಿಡುತ್ತಲೇ ಮುಸ್ಲಿಂ ಮಹಿಳೆಯೊಬ್ಬಳ ದುರಂತ ಬದುಕನ್ನು ಹಿಡಿದಿಡುವ ಕಾದಂಬರಿ 'ಪೀಠಾಧಿಪತಿಯ ಪತ್ನಿ'ಯಂತಹ ಕಾದಂಬರಿಗಳೂ ಗಮನ ಸೆಳೆದಿವೆ. ದಾರ್ಶನಿಕ ತತ್ವಸಿದ್ಧಾಂತಗಳನ್ನು ಕುರಿತ ಪ್ರಚಾರ, ಪ್ರಸಾರದ ಕೆಲಸವನ್ನು ಕೈಗೆತ್ತಿಕೊಂಡಿರುವ ಸಂಘಟನೆಗಳು ನಿರ್ದಿಷ್ಟ ಸಮಾಜವನ್ನು ಕೇಂದ್ರವಾಗಿರಿಸಿಕೊಂಡು ಅನುವಾದಗಳನ್ನು ರೂಪಿಸುತ್ತಿವೆ.

ದೆಹಲಿಯ ಜವಹರ್‌ಲಾಲ್ ನೆಹರು ವಿಶ್ವವಿದ್ಯಾಲಯದ ಕನ್ನಡ ಪೀಠವು ಪುರುಷೋತ್ತಮ ಬಿಳಿಮಲೆಯವರ ನೇತೃತ್ವದಲ್ಲಿ ಕನ್ನಡದ ಅಭಿಜಾತ ಕೃತಿಗಳ ಇಂಗ್ಲಿಷ್ ಅನುವಾದ ಯೋಜನೆಗಳನ್ನು ಕೈಗೊಂಡಿದೆ. ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಭಾಷಾಂತರ ಕೇಂದ್ರವು ಹನ್ನೆರಡನೆಯ ಶತಮಾನದ ವಚನಗಳು, ಕನಕದಾಸರ ರಾಮಧಾನ್ಯ ಚರಿತೆ ಮೊದಲಾದ ಕೃತಿಗಳು, ಕನ್ನಡ ಮೌಖಿಕ ಕಥನಗಳು, ಕುವೆಂಪು ಕವಿತೆಗಳು, 5 ರಿಂದ 13ನೇ ಶತಮಾನದ ವರೆಗಿನ ಕನ್ನಡ ಅಭಿಜಾತ ಕೃತಿಗಳ ವಾಚಿಕೆ ಇತ್ಯಾದಿಗಳ ಇಂಗ್ಲಿಷ್ ಅನುವಾದಗಳನ್ನು ಪ್ರಕಟಿಸಿದೆ. ಅನುವಾದ ಕೆಲಸಗಳನ್ನು ಪ್ರಮುಖವಾಗಿ ಲಕ್ಷ್ಯದಲ್ಲಿಟ್ಟು ಸ್ಥಾಪನೆಯಾದ ಕುವೆಂಪು ಭಾಷಾಭಾರತಿಯೂ ಅನೇಕ ಅನುವಾದ ಯೋಜನೆಗಳನ್ನು ರೂಪಿಸಿ ಉತ್ತಮ ಕೃತಿಗಳನ್ನು ಕನ್ನಡ ಮತ್ತು ಇತರ ಭಾರತೀಯ ಭಾಷೆಗಳಲ್ಲಿಯೂ ಪ್ರಕಟಿಸಿದೆ. ಸಾಹಿತ್ಯ ಅಕಾದೆಮಿಯಂತೂ ಅನುವಾದಗಳನ್ನು ಪ್ರಕಟಿಸುತ್ತಲೇ ಬಂದಿದೆ. ಜಾಗತಿಕ ಮಟ್ಟದಲ್ಲಿ ಕನ್ನಡ ಕೃತಿಗಳನ್ನು ಪರಿಚಯಿಸುವ ಮಹತ್ವಾಕಾಂಕ್ಷೆಯೊದಿಗೆ ಮೂರ್ತಿ ಕ್ಲಾಸ್ಸಿಕಲ್ ಲೈಬ್ರರಿ ಆಫ್ ಇಂಡಿಯಾದಂತಹ ಸಂಸ್ಥೆಗಳು ಅನುವಾದ ಕ್ಷೇತ್ರದಲ್ಲಿ ಕಾಣಿಸಿಕೊಂಡಿವೆ. ಹೀಗೆ ಅನುವಾದ ಚಟುವಟಿಕೆಗಳು ಸಾಂಸ್ಥಿಕ ನೆಲೆಯಲ್ಲಿಯೂ ನಡೆಯುತ್ತಿವೆ.

ಆಡಳಿತ ನಡೆಸುವ ಸರಕಾರಗಳು ತಮ್ಮ ತತ್ವಸಿದ್ಧಾಂತಗಳನ್ನು ಬೆಂಬಲಿಸುವ ಮಹನೀಯರ ವಿಚಾರಗಳನ್ನು ಪ್ರಕಟಿಸುವ ಯೋಜನೆಗಳನ್ನು ರೂಪಿಸುತ್ತಿರುತ್ತವೆ. ಸರಕಾರದ ಅಂಗ ಸಂಸ್ಥೆಗಳು ಇದನ್ನು ಕಾರ್ಯರೂಪಕ್ಕೆ ತರುತ್ತವೆ. ಹಾಗಾಗಿ

ಅನುವಾದಗಳು ಕೇವಲ ಲಕ್ಷ್ಯಭಾಷಾ ಓದುಗರ ಬೇಡಿಕೆಯ ಕಾರಣಗಳಿಗಷ್ಟೇ ರೂಪುಗೊಳ್ಳುವುದಿಲ್ಲ. ಪ್ರಭುತ್ವದ ಹಿತಾಸಕ್ತಿಗಳನ್ನು ಪೋಷಿಸುವಲ್ಲಿಯೂ ಅನುವಾದ ಚಟುವಟಿಕೆಗಳು ಸಮಕಾಲೀನ ದಿನಗಳಲ್ಲಿ ಹೆಚ್ಚು ಕ್ರಿಯಾಶೀಲವಾಗಿವೆ.

**ಪರಾಮರ್ಶನ ಗ್ರಂಥಗಳು:**


- ಅನಂತನಾರಾಯಣ ಎಸ್. (1976 ಎರಡನೆಯ ಮುದ್ರಣ) ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ, ರಾಜಲಕ್ಷ್ಮಿ ಪ್ರಕಾಶನ, ಬೆಂಗಳೂರು
- ಕರೀಗೌಡ ಬೀಚನಹಳ್ಳಿ (ಡಾ.)(ಸಂ), (1999) ಭಾಷಾಂತರದ ಸಾಂಸ್ಕೃತಿಕ ನೆಲೆಗಳು, ಕನ್ನಡ ವಿಶ್ವವಿದ್ಯಾಲಯ ಹಂಪಿ
- ಕೀರ್ತಿನಾಥ ಕುರ್ತಕೋಟಿ (1992), ಬಯಲು ಆಲಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ
- ಮೋಹನ ಕುಂಟಾರ್ (ಡಾ.), (2010) ಭಾಷಾಂತದರ ವಿಭಿನ್ನ ನೆಲೆಗಳು, ಪಲ್ಲವ ಪ್ರಕಾಶನ ಚನ್ನಪಟ್ಟಣ
- ಮೋಹನ ಕುಂಟಾರ್ ಎ.(ಡಾ.),(2014) ಕನ್ನಡ – ಮಲಯಾಳಂ ಭಾಷಾಂತರ ಪ್ರಕ್ರಿಯೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ
- ಮೋಹನ ಕುಂಟಾರ್ (ಪ್ರೊ.), (ಸಂ)., (2015) ಅನುವಾದ ಸಾಹಿತ್ಯ, ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆ ಸಂಪುಟ 10 ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು
- ಮೋಹನ ಕುಂಟಾರ್ (ಡಾ.), (2015) ಭಾಷಾಂತರ ಪ್ರಕ್ರಿಯೆ ಪ್ರೇರಣೆ ಪ್ರಭಾವ, ಪ್ರಸಾರಾಂಗ, ಯಾಜಿ ಪ್ರಕಾಶನ ಹೊಸಪೇಟೆ
- ಲಕ್ಷ್ಮೀನಾರಾಯಣ ಅರೋರಾ (2010), ಸ್ವಾತಂತ್ರ್ಯೋತ್ತರ ಕನ್ನಡ ಭಾಷಾಂತರ ಸಾಹಿತ್ಯ, ಕನ್ನಡ ಅಧ್ಯಯನ ಮತ್ತು ಸಂಶೋಧನ ವಿಭಾಗ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ, ಮೈಸೂರು
- ಶ್ರೀನಿವಾಸ ಹಾವನೂರ (1974) ಹೊಸಗನ್ನಡದ ಅರುಣೋದಯ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ
- ಸಿ. ಪಿ. ಕೆ. (2009) ಭಾಷಾಂತರ ಭಾರತಿ, ಶ್ರೀಲಲಿತಾ ಬುಕ್ ಬ್ಯೂರೋ, ಮೈಸೂರು





**– ಡಾ. ಮೋಹನ ಕುಂಟಾರ್**

ಪ್ರಾಧ್ಯಾಪಕರು

ಭಾಷಾಂತರ ಅಧ್ಯಯನ ವಿಭಾಗ

ಹಂಪಿ ಕನ್ನಡ ವಿಶ್ವವಿದ್ಯಾನಿಲಯ

ವಿದ್ಯಾರಣ್ಯ, ಹೊಸಪೇಟೆ

## ಅನುವಾದವೆಂಬ ಗಂಭೀರ ಕಾರ್ಯ

*– ಎಸ್. ವಿ. ಮಂಜುನಾಥ್*

**ಚಾ**ರಿತ್ರಿಕವಾಗಿ ನೋಡಿದರೆ, ಜ್ಞಾನವೆನ್ನುವುದು ಎಲ್ಲಾ ಸಂಸ್ಕೃತಿಗಳಲ್ಲಿಯೂ ವಿವಿಧ ಭಾಷೆಗಳಲ್ಲಿಯೂ ಬೆಳೆದು ಬಂದಿದೆ. ಜ್ಞಾನವು ಯಾವುದೇ ನಿರ್ದಿಷ್ಟ ಗುಂಪಿಗೆ ಸೀಮಿತಗೊಳ್ಳದಂತೆ ಹಂಚಿಕೊಂಡಿರುವ ಕಾರಣ ಎಲ್ಲೆಡೆ ವ್ಯಾಪಿಸಿದೆ. ಅನುವಾದವು ಜ್ಞಾನವಿನಿಮಯದ ಒಂದು ಸಹಜ ಪ್ರಕ್ರಿಯೆ. ಒಂದು ಅರ್ಥದಲ್ಲಿ ಲಿಪಿ ಮತ್ತು ಬರವಣಿಗೆಯ ಬೆಳವಣಿಗೆಯು ಜ್ಞಾನದ ಮುಕ್ತ ಹಾಗೂ ಸುಲಭ ವಿನಿಮಯಕ್ಕೆ ತಡೆಯೊಡ್ಡತೊಡಗಿತು ಎನ್ನಬಹುದು. ಪರಿಣಾಮವಾಗಿ, ವಿವಿಧ ಸಂಸ್ಕೃತಿಗಳ ನಡುವೆ ಹಾಗೂ ಭಾಷೆಗಳ ನಡುವೆ ಜ್ಞಾನವಿನಿಮಯವು ಅಷ್ಟೊಂದು ಸಹಜ ಅಥವಾ ಸುಗಮವಾಗಿ ಸಾಗುತ್ತಿಲ್ಲ. ಮುದ್ರಿತ ಮಾಧ್ಯಮದ ಬಳಕೆ ಹೆಚ್ಚಾದಂತೆ, ಅಭಿವೃದ್ಧಿಯ ವೇಗವೂ ಹೆಚ್ಚಾಗಿ, ಈ ಪ್ರವೃತ್ತಿಯು ಇನ್ನಷ್ಟು ಉಲ್ಬಣಗೊಂಡಿತು. ಜ್ಞಾನದ ಅಭಿವೃದ್ಧಿ ಹಾಗೂ ಸ್ವೀಕೃತಿಗಳು ನಿರ್ದಿಷ್ಟಗೊಳ್ಳತೊಡಗಿದವು ಹಾಗೂ ಸೀಮಿತವಾಗತೊಡಗಿದವು. ಹೀಗಿರುವಾಗ, ಭಾಷೆಗಳು ನೆಲೆಗೊಳ್ಳುತ್ತ ಅಭಿವೃದ್ಧಿಗೊಂಡ ಸಮಾಜಗಳಲ್ಲಿ, ಜ್ಞಾನವನ್ನು ಹಿಡಿದಿಟ್ಟುಕೊಳ್ಳುವ ಹಾಗೂ ವಿನಿಮಯಿಸಿಕೊಳ್ಳುವ ಭಾಷೆಯ ಸಹಜ ಸಾಮರ್ಥ್ಯದ ರೂಪವೇ ಬದಲಾಗಿ ಹೋಯಿತು. ಜೊತೆಗೆ ಯಾವ ಯಾವ ಭಾಷೆಗಳು ಅಭಿವೃದ್ಧಿ ಹೊಂದಿವೆಯೋ ಅವುಗಳೆಡೆಯೇ ಬಲ, ಅಧಿಕಾರಗಳ ಆಧಾರದ ಮೇಲೆ ಜ್ಞಾನ ನೆಲೆಗೊಳ್ಳುವ ಪ್ರವೃತ್ತಿ ಬೆಳೆಯಿತು. ಕಳೆದ ಸುಮಾರು ಅರ್ಧ ಶತಮಾನದ ಅವಧಿಯಲ್ಲಿ ಜ್ಞಾನಾಭಿವೃದ್ಧಿ ಹಾಗೂ ಕ್ರೋಢೀಕರಣ ಕೆಲವೇ ಭಾಷೆಗಳಿಗೆ ಸೀಮಿತಗೊಳ್ಳುತ್ತ ಬಂದಿದ್ದು, ಅವುಗಳಲ್ಲಿ ಇಂಗ್ಲಿಷ್ ಪ್ರಬಲವಾಗಿದೆ.

ಸದ್ಯದ ಜಾಗತಿಕ ಬಲಾಬಲದ ಸಮೀಕರಣದ ಕಾರಣದಿಂದಾಗಿ, ಭಾರತದ ದೇಸಿ ಭಾಷೆಗಳು ಹಾಗೂ ಜ್ಞಾನವ್ಯವಸ್ಥೆಗಳು ಜ್ಞಾನದ ಉತ್ಪಾದನೆ ಹಾಗೂ ವಿನಿಮಯಕ್ಕೆ ಸಂಬಂಧಿಸಿದಂತೆ ಪ್ರಬಲ ಭಾಷೆಗಳಿಗೆ ಅಡಿಯಾಳಾಗಿವೆ. ಜನಸಂಖ್ಯೆಯ ಹೆಚ್ಚಿನ ಭಾಗಕ್ಕೆ ಜ್ಞಾನವು ಲಭ್ಯವಾಗುವಂತೆ ಮಾಡಲು ಅದು ಅವರಿಗೆ ಸಲೀಸಾದ ಭಾಷೆಗಳಲ್ಲಿ ಲಭ್ಯವಾಗಬೇಕು. ಇದಕ್ಕಾಗಿ ಜ್ಞಾನದ ಕುರಿತಾದ ಸಂವಾದಗಳು ಮತ್ತು ಜ್ಞಾನದ ಉತ್ಪಾದನೆಯೂ ಕೂಡ ಭಾರತೀಯ ಭಾಷೆಗಳಲ್ಲಿ ಆಗಬೇಕು. ಆದರೆ ಇದೊಂದು ನಿಧಾನವಾಗಿ ಜರುಗುವ ಪ್ರಕ್ರಿಯೆ. ಇದ್ದಕ್ಕಿದ್ದಂತೆ ಸಂಭವಿಸಿ ಬಿಡುವುದಲ್ಲ. ಜ್ಞಾನವು ಎಲ್ಲಿಯೇ ಇದ್ದರೂ ಯಾವುದೇ ಭಾಷೆಯಲ್ಲಿಯೇ ಲಭ್ಯವಿದ್ದರೂ ನಾವದನ್ನು ಪಡೆದುಕೊಳ್ಳಬೇಕು. ಮಾನವ ಸಂಸ್ಕೃತಿಗಳಿಗೆ ಚಿಂತನೆ, ಸಿದ್ಧಾಂತ, ನೀತಿಕಥೆ, ಪುರಾಣ ಹಾಗೂ ಇನ್ನಿತರ ಸಾಹಿತ್ಯ ರೂಪಗಳನ್ನು ಹಂಚಿಕೊಳ್ಳಲು ಅನುವಾದಗಳು ಸಹಜ ಪ್ರಕ್ರಿಯೆಗಳಾಗಿವೆ. ಈ ಲೇಖನದಲ್ಲಿ ಕೆಲವು ಸಮಸ್ಯೆಗಳನ್ನು, ಸವಾಲುಗಳನ್ನು ಹಾಗೂ ಭವಿಷ್ಯದ ಕೆಲವು ಸಾಧ್ಯತೆಗಳ ಜೊತೆಗೆ ಅನುವಾದದ ಕುರಿತಾದ ಕೆಲವು ಅನುಭವಗಳನ್ನು ಚರ್ಚಿಸಲಾಗಿದೆ.

ಬಹಳ ಹಿಂದಿನಿಂದಲೂ ಸಾಹಿತ್ಯಕ ಅನುವಾದಗಳ ಪರಂಪರೆಯೇ ಇದೆ. ಚಾಪ್‌ಮನ್ ಅನುವಾದಿಸಿದ ಹೋಮರ್‌ನ ಕೃತಿಗಳನ್ನು ಓದಿ ಕೀಟ್ಸ್ ಆನಂದಿಸಿದ. ಇನ್ನಿತರ ಭಾಷೆಗಳಂತೆಯೇ ಕನ್ನಡದ ಆರಂಭಿಕ ಸಾಹಿತ್ಯವು ಪ್ರಾಕೃತ ಮತ್ತು ಸಂಸ್ಕೃತ ನಾಟಕ ಹಾಗೂ ಕಾವ್ಯಗಳ ಅನುವಾದದಿಂದ ಸಮೃದ್ಧವಾಗಿದೆ. ಲಭ್ಯವಿರುವ ಕನ್ನಡದ ಮೊಟ್ಟಮೊದಲ ಸಾಹಿತ್ಯ ಕೃತಿ 'ಕವಿರಾಜಮಾರ್ಗ' (ಕ್ರಿ.ಶ. 850) ಹಾಗೂ ಕನ್ನಡದ ಮೊದಲ ನಾಟಕ ಸಿಂಗಾರಾರ್ಯನ 'ಮಿತ್ರಾವಿಂದ ಗೋವಿಂದ'ಗಳೆರಡೂ (17ನೆಯ ಶತಮಾನ) ಭಾಗಶಃ ಸಂಸ್ಕೃತ ಪಠ್ಯಗಳಿಂದ ಸ್ಫೂರ್ತಿ ಪಡೆದವುಗಳಾಗಿವೆ ಎನ್ನಲಾಗಿದೆ. ಆಧುನಿಕ ಸಾಹಿತ್ಯವು ಅನುವಾದಗಳಿಂದ ಪ್ರಭಾವಿತವಾಗಿದೆ. ಸಾಹಿತ್ಯದ ಅನುವಾದಕರಲ್ಲಿ ಹೆಚ್ಚಿನವರು ಕಾವ್ಯವನ್ನು ಅದರ ಅಂತರ್ಗತ ಪ್ರಾಸ ಸಂಯೋಜನೆ, ಛಂದೋಬದ್ಧ ಲಯ, ಆದಿಪ್ರಾಸ, ರೂಪಕ-ಪ್ರತಿಮೆಗಳ ಕಾರಣ ಅನುವಾದಿಸುವುದು ಸಂಕೀರ್ಣವಾದ ಕಾರ್ಯವೆನ್ನುವುದನ್ನು ಒಪ್ಪುತ್ತಾರೆ. ಬಹುಶಃ ಈ ಕಾರಣದಿಂದಲೇ ಆಂಗ್ಲ ಕವಿ ಜಾನ್‌ಡ್ರೈಡನ್ ಹೇಳಿದ್ದಿರಬೇಕು, "ಪರಿಪೂರ್ಣ ಅನುವಾದಕನಾಗಲು ಪರಿಪೂರ್ಣ ಕವಿಯಾಗಿರಬೇಕು," ಎಂದು.

ಪರಿಪೂರ್ಣ ಅನುವಾದವೆನ್ನುವುದೊಂದು ಕಷ್ಟಸಾಧ್ಯವಾದ ಕಾರ್ಯ. ಅದರಲ್ಲಿಯೂ ಮೂಲ ಪಠ್ಯವು ಭಾಷೆ ಮತ್ತು ಸಂದರ್ಭದ ದೃಷ್ಟಿಯಿಂದ ಹೊರಗಿನದಾಗಿದ್ದಲ್ಲಿ ಇನ್ನೂ ಕಷ್ಟ. ವಸ್ತುವಿಷಯವು ಗಹನವಾದ ಶೈಕ್ಷಣಿಕ ಅಂಶಗಳನ್ನು ಒಳಗೊಂಡಿದ್ದರೆ, ಕ್ಲಿಷ್ಟತೆ / ಸವಾಲು ದುಪ್ಪಟ್ಟಾಗುತ್ತದೆ. ಮೂಲ

ಪಠ್ಯವನ್ನು ಸೂಕ್ಷ್ಮವಾಗಿ ಓದಿ ಗ್ರಹಿಸಿಕೊಳ್ಳುವುದಷ್ಟೇ ಅಲ್ಲ, ಅನುವಾದಕರಿಗೆ ಎರಡೂ ಭಾಷೆಗಳಲ್ಲಿ- ಮೂಲ ಪಠ್ಯವನ್ನು ಎಲ್ಲಿಂದ ತೆಗೆದುಕೊಳ್ಳಲಾಗಿದೆಯೋ ಆ ಭಾಷೆ ಹಾಗೂ ಯಾವ ಭಾಷೆಗೆ ತರಲಾಗುತ್ತದೆಯೋ ಆ ಭಾಷೆ - ಸಾಮರ್ಥ್ಯ ಇರಬೇಕಾಗುತ್ತದೆ. ಪ್ರತಿಯೊಂದು ಜ್ಞಾನ ಶಿಸ್ತೂ ಯಾವ ಭಾಷೆಯಲ್ಲಿ ತನ್ನನ್ನು ಅಭಿವ್ಯಕ್ತಿಪಡಿಸಿಕೊಳ್ಳುತ್ತದೆಯೋ ಆ ಅನನ್ಯ ಭಾಷೆ ಮತ್ತು ನುಡಿಗಟ್ಟನ್ನು ತಿಳಿದಿರುವುದು ಅಷ್ಟೇ ಮುಖ್ಯ.

ಚಾರಿತ್ರಿಕ ದೃಷ್ಟಿಯಿಂದ ನೋಡಿದರೆ, ಕೆಲವು ಹೆಸರಾಂತ ಕನ್ನಡಿಗರು ವಿಜ್ಞಾನ ಸಂಬಂಧಿ ಕಾರ್ಯಗಳಲ್ಲಿ ತೊಡಗಿಕೊಂಡಿದ್ದಲ್ಲದೆ ಕನ್ನಡದಲ್ಲಿಯೂ ಬರೆಯುವ ಮೂಲಕ ಮಹತ್ವದ ಕೊಡುಗೆಯನ್ನು ನೀಡಿರುವುದು ಕಂಡುಬರುತ್ತದೆ. ಶಿವರಾಮ ಕಾರಂತರು, 'ಪಶ್ಚಿಮ ಘಟ್ಟ ಉಳಿಸಿ' ಆಂದೋಲನವೂ ಸೇರಿದಂತೆ ಪರಿಸರ ಸಂಬಂಧಿ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಪ್ರಖ್ಯಾತ ಸಸ್ಯಶಾಸ್ತ್ರಜ್ಞ ಹಾಗೂ ಲೇಖಕ ಬಿಜಿಎಲ್ ಸ್ವಾಮಿಯವರು ಸಸ್ಯಗಳ ಅಂಗರಚನಾಶಾಸ್ತ್ರದ ಕುರಿತಾಗಿ ಸಂಶೋಧನೆಯನ್ನು ಮಾಡಿದರು ಹಾಗೂ ಕೆಲವು ಸಸ್ಯ ಪ್ರಭೇದಗಳನ್ನು ಕೂಡ ಕಂಡುಹಿಡಿದರು. ಪೂರ್ಣಚಂದ್ರ ತೇಜಸ್ವಿಯವರಿಗೆ ಪ್ರಕೃತಿಯೊಂದಿಗೆ ವಿಶೇಷವಾದ ನಂಟಿತ್ತು. ಜೆ.ಆರ್. ಲಕ್ಷ್ಮಣರಾವ್ ಹಾಗೂ ಜಿ.ಟಿ. ನಾರಾಯಣರಾವ್ ಅವರು ಹಲವು ದಶಕಗಳ ಕಾಲ ವಿಜ್ಞಾನವನ್ನು ಕುರಿತಂತೆ ವ್ಯಾಪಕವಾಗಿ ಬರೆದರು. ನಾಗೇಶ್ ಹೆಗಡೆಯವರು ಪರಿಸರ ಕಾಳಜಿ ಕುರಿತಂತೆ ನಿಯಮಿತವಾಗಿ ಬರೆಯುತ್ತಿದ್ದಾರೆ.

ಸಮಾಜ ವಿಜ್ಞಾನ ಹಾಗೂ ಮಾನವಿಕ ವಿಷಯಗಳಲ್ಲಿ ಕೂಡ ಕರ್ನಾಟಕದ ವಿದ್ವಾಂಸರು ಜ್ಞಾನ ನಿರ್ಮಾಣದ ಪ್ರಕ್ರಿಯೆಗೆ ಮಹತ್ವದ ಕೊಡುಗೆಗಳನ್ನು ನೀಡಿದ್ದಾರೆ. ವಿಕೆಆರ್‌ವಿ ರಾವ್‌ಒಬ್ಬ ಪ್ರಸಿದ್ಧ ಅರ್ಥಶಾಸ್ತ್ರಜ್ಞ ಹಾಗೂ ಪ್ರಮುಖ ಸಂಸ್ಥೆಗಳ ನಿರ್ಮಾತೃವಾಗಿದ್ದರು. ಜಿ. ತಿಮ್ಮಯ್ಯ ಮತ್ತು ಡಿ.ಎಮ್. ನಂಜುಂಡಪ್ಪ ಕೂಡ ಅರ್ಥಶಾಸ್ತ್ರದಲ್ಲಿ ಮೂಲ ಕೊಡುಗೆಯನ್ನು ನೀಡಿದರು. ಎಮ್.ಎನ್. ಶ್ರೀನಿವಾಸ್ ಒಬ್ಬ ಶ್ರೇಷ್ಠ ಸಮಾಜಶಾಸ್ತ್ರಜ್ಞ ಹಾಗೂ ಸಾಮಾಜಿಕ ಮಾನಶಾಸ್ತ್ರಜ್ಞರಾಗಿದ್ದರು. ಎಸ್. ಶೆಟ್ಟರ್ ಅವರು ಭಾರತೀಯ ಪುರಾತತ್ತ್ವಶಾಸ್ತ್ರ, ಧಾರ್ಮಿಕ ಇತಿಹಾಸ ಹಾಗೂ ತತ್ತ್ವಶಾಸ್ತ್ರದ ಕುರಿತಾಗಿ ವಿದ್ವತ್‌ಪೂರ್ಣ ಸಂಶೋಧನೆಯನ್ನು ಮಾಡಿದ್ದಾರೆ. ಇತಿಹಾಸಜ್ಞ ಸೂರ್ಯನಾಥ ಕಾಮತ್‌ರು ರಾಜ್ಯ ಗೆಜೆಟಿಯರ್‌ನ ಸಂಪಾದಕರಾಗಿ ಕೊಡುಗೆ ನೀಡಿದ್ದಾರೆ.

ಆದರೆ ನಿಜವಾದ ಅಗತ್ಯವಿರುವುದಕ್ಕೆ ಹೋಲಿಸಿದರೆ ಈ ಸಾಧನೆಗಳಷ್ಟೇ ಸಾಕಾಗುವುದಿಲ್ಲ. ವಿದ್ಯಾರ್ಥಿಗಳ, ಅದರಲ್ಲಿಯೂ ವಿಶೇಷವಾಗಿ, ಶಿಕ್ಷಕರು ಹಾಗೂ

ಶಿಕ್ಷಕ ಶಿಕ್ಷಕರಿಬ್ಬರ ಅಗತ್ಯಗಳನ್ನು ಸಮಾನವಾಗಿ ಪೂರೈಸುವುದಕ್ಕೆ ಉನ್ನತ ಶಿಕ್ಷಣ ಹಂತದಲ್ಲಿ ಶೈಕ್ಷಣಿಕ ಅನುವಾದಗಳು ತ್ವರಿತಗತಿಯಲ್ಲಿ ಆಗಬೇಕಾದ ಅಗತ್ಯವಿದೆ. ಶೈಕ್ಷಣಿಕ ಓದು ದಟ್ಟವಾಗಿದ್ದು ಪರಿಕಲ್ಪನಾತ್ಮಕವಾಗಿರುತ್ತದೆ ಹಾಗೂ ಬಿಗಿಯಾದ ಭಾಷೆಯನ್ನು ಹೊಂದಿರುತ್ತದೆ. ಶಿಸ್ತುವಾರು (ಬೇರೆ ಬೇರೆ ಅಧ್ಯಯನ ಶಿಸ್ತುಗಳಿಗೆ ಸಂಬಂಧಿಸಿದಂತೆ) ತಾಂತ್ರಿಕ ಪದಗಳ ಪಾರಿಭಾಷಿಕ ಪದಕೋಶ ಇರುವುದಿಲ್ಲ. ಸೂಕ್ತ ಪ್ರಕ್ರಿಯೆಯ ಮೂಲಕವೇ ಇವುಗಳನ್ನು ನಿರ್ಣಯಿಸುತ್ತ ಹೋಗಬೇಕು. ಹೀಗೆ ಭಾಗವಹಿಸುವಿಕೆಯ ಪ್ರಕ್ರಿಯೆಯ ಮೂಲಕ ನಿರ್ಣಯಿಸಲಾದ ಈ ಪದಗಳು ಬಳಕೆದಾರರಿಗೆ ಪರಿಚಿತವಾಗಿದ್ದಿರಬೇಕು. ಇದನ್ನು ಹೇಗೆ ಮಾಡಬೇಕು ಎನ್ನುವ ಕಾರ್ಯವಿಧಾನವನ್ನು ರೂಪಿಸುವುದೊಂದೇ ಅಲ್ಲದೆ ಅದನ್ನು ಬಹಳ ದಿನ ಚಾಲ್ತಿಯಲ್ಲಿರಿಸಿಕೊಳ್ಳಬೇಕು.

ಉದಾಹರಣೆಗೆ, ವಿಜ್ಞಾನವು ತನ್ನದೇ ಆದ ಅನನ್ಯತೆಯನ್ನು ಬೆಳೆಸಿಕೊಂಡಿದೆ. ಜಗತ್ತಿನಲ್ಲಿ ನಡೆಯುವುದೆಲ್ಲವನ್ನೂ ಅಂದರೆ ಸಸ್ಯಗಳು ದ್ಯುತಿ ಸಂಶ್ಲೇಷಣ ಕ್ರಿಯೆಯ ಮೂಲಕ ತಮ್ಮ ಆಹಾರವನ್ನು ತಾವೇ ತಯಾರಿಸಿಕೊಳ್ಳುವುದಿರಬಹುದು ಅಥವಾ ಭೂಮಿಯು ಸೂರ್ಯನ ಸುತ್ತ ಸುತ್ತುವುದರಿಂದ ಋತುಮಾನಗಳಲ್ಲಿ ಬದಲಾವಣೆಗಳಾಗುವುದಿರಬಹುದು, ಎಲ್ಲವನ್ನೂ ವಿಜ್ಞಾನವು ವಿವರಿಸಬಲ್ಲದು. ವಿದ್ಯಾರ್ಥಿಗಳ ಸಹಜ ಕುತೂಹಲವನ್ನು ಪೋಷಿಸುವ ಹಾಗೂ ಅವರನ್ನು ತೊಡಗಿಸಿಕೊಳ್ಳುವ ನಿಟ್ಟಿನಲ್ಲಿ ವೈಜ್ಞಾನಿಕ ಜ್ಞಾನವನ್ನು ಉತ್ಪಾದಿಸುವ ಹಾಗೂ ಅವುಗಳನ್ನು ದೃಢೀಕರಿಸುವ ವಿಧಾನ ಹಾಗೂ ಪ್ರಕ್ರಿಯೆಗಳನ್ನು ವಿಜ್ಞಾನದ ಪಠ್ಯಕ್ರಮವು ಒಳಗೊಂಡಿರುತ್ತದೆ. ನಿರ್ದಿಷ್ಟ ಶಿಸ್ತೊಂದರ ಕೇಂದ್ರ ವಸ್ತುವಿಷಯಗಳನ್ನು ಎಷ್ಟು ಶ್ರಮಪಟ್ಟು ಆಳವಾಗಿ ವಿವೇಚಿಸಿ ರೂಪಿಸಿದ್ದಾರೆ ಎನ್ನುವುದು ಕಲಿಕೆಯ ಮಟ್ಟ ಎಷ್ಟು ಆಳವಾಗಿದೆ ಎನ್ನುವುದನ್ನು ಅವಲಂಬಿಸಿದೆ.

ಅದೇ ರೀತಿಯಾಗಿ, ವಿಶಿಷ್ಟ (ಆದರೂ ಯಾವುದೇ ರೀತಿಯಲ್ಲಿಯೂ ಕಡಿಮೆಯದಲ್ಲದ) ವಿಧಾನಗಳನ್ನು ಬಳಸುತ್ತಿದ್ದರೂ ಕೂಡ ಸಮಾಜ ವಿಜ್ಞಾನಗಳು ನೈಸರ್ಗಿಕ ಹಾಗೂ ಭೌತಿಕ ವಿಜ್ಞಾನಗಳ ಹಾಗೆಯೇ ವೈಜ್ಞಾನಿಕ ಪರಿಶೀಲನೆಗೆ ಒಳಪಡುತ್ತವೆ. ಸಮರ್ಥ ಪಠ್ಯಕ್ರಮವೊಂದಕ್ಕೆ ಅಂತರ್‌ಶಿಸ್ತೀಯ ಚಿಂತನೆಗಳನ್ನು ಸುಗಮಗೊಳಿಸುವ ಕೆಲವು ವಿಷಯಗಳ ಅಗತ್ಯವೂ ಇದೆ. (ಸಮಾಜ ವಿಜ್ಞಾನಗಳ ಬೋಧನೆಯ ಕುರಿತಾದ ಪೊಸಿಷನ್‌ಪೇಪರ್ - NCERT, 2006)

ಈ ದೃಷ್ಟಿಯಿಂದ ಸರಳತೆ, ಸ್ಪಷ್ಟತೆ, ನಿರ್ದಿಷ್ಟತೆ ಹಾಗೂ ಸಂಕ್ಷಿಪ್ತತೆಗಳಂತಹ ಗುಣಲಕ್ಷಣಗಳು ವಿಜ್ಞಾನ ಮತ್ತು ಸಮಾಜ ವಿಜ್ಞಾನ ಅಥವಾ ಮಾನವಿಕ ವಿಷಯ ಗಳಲ್ಲಿ ಕೆಲಸ ಮಾಡುತ್ತವೆ. ಬರವಣಿಗೆಯ ಶೈಲಿಯು ಪ್ರಾಸಂಗಿಕವಾಗುತ್ತದೆ.

ಶೈಕ್ಷಣಿಕ ಅನುವಾದಗಳಲ್ಲಿ ವಿಷಯವಸ್ತುವಿನ ಸೂಕ್ಷ್ಮತೆಗಳನ್ನು ಅದು ಮೂಲದಲ್ಲಿ ಹೇಗಿದೆಯೋ ಹಾಗೆ ನಿಖರವಾಗಿ ಗ್ರಹಿಸಿ, ಅಷ್ಟೇ ಖಚಿತವಾಗಿ ನಿರೂಪಿಸುವುದು ಅತ್ಯಂತ ಮುಖ್ಯವಾಗಿರುತ್ತದೆ.

ಇದಕ್ಕಾಗಿ, ವಿಷಯ ಜ್ಞಾನದ ಜೊತೆಗೆ ಅನುವಾದಕರು ಸೂಕ್ತವಾದ ತಾಂತ್ರಿಕ ಪದಸಂಪತ್ತಿನ ಜ್ಞಾನವನ್ನು ಹೊಂದಿರುವುದು ಅಗತ್ಯ. ಅವರಿಗೆ ಸಾಹಿತ್ಯಕ ಅನುವಾದಕರಿಗಿರುವ ಸ್ವಾತಂತ್ರ್ಯ ಇರುವುದಿಲ್ಲ. ಸಾಹಿತ್ಯಿಕ ಅನುವಾದಕರು ವಿವಿಧ ಪಾತ್ರಗಳ ಮೂಲಕ ಭಾವನೆಯ ವಿವಿಧ ಛಾಯೆಗಳಿಗೆ ಅಭಿವ್ಯಕ್ತ ರೂಪವನ್ನು ಕೊಟ್ಟು ಓದುಗರ ಮನಸ್ಸನ್ನು ಸೆರೆಹಿಡಿಯುವ ಪ್ರಯತ್ನ ಮಾಡುತ್ತಾರೆ. ಕವಿತೆ ಅಥವಾ ಕಾದಂಬರಿಯಂತಹ ಸಾಹಿತ್ಯಕ ಕೃತಿಯೊಂದನ್ನು ಅನುವಾದಿಸುವಾಗ ನಿರೂಪಣೆಯೊಂದಿಗೆ ಭಾಷೆಯು ಸಹಜವಾಗಿ ಹರಿಯುತ್ತದೆ.

ವಿಜ್ಞಾನ ಮತ್ತು ಮಾನವಿಕ ವಿಷಯಗಳಿಂದ ಪಠ್ಯವನ್ನು ಕನ್ನಡದಂತಹ ಭಾಷೆಗಳಿಗೆ ಅನುವಾದಿಸುವಾಗ ಸಾಕಷ್ಟು ಎಚ್ಚರಿಕೆ ವಹಿಸದಿದ್ದಲ್ಲಿ ಅದನ್ನು ತಪ್ಪಾಗಿ ಓದಿಕೊಳ್ಳುವ, ಅರ್ಥವನ್ನು ಬದಲಾಯಿಸುವ ಹಾಗೂ ತಪ್ಪುತಿಳುವಳಿಕೆಗಳಿಗೆ ಎಡೆಮಾಡಿಕೊಡುವಂತಹ, ಕೇವಲ ಆಳವಿಲ್ಲದ ಮೇಲ್ನೋಟದ ಕೆಲಸವಷ್ಟೇ ಆಗಿಬಿಡಬಹುದು. ಅನುವಾದದ ಕಾರ್ಯವನ್ನು ಅತ್ಯಂತ ಜವಾಬ್ದಾರಿಯಿಂದ ನಿರ್ವಹಿಸಬೇಕಾಗುತ್ತದೆ.

ಇಷ್ಟೆಲ್ಲ ಕಠಿಣವಿದ್ದರೂ ಕೆಲವು ಅನುವಾದಕರು ಸಾಧ್ಯವಾದಷ್ಟೂ ಉತ್ಕೃಷ್ಟವಾದ ಅನುವಾದವನ್ನು ತರಲು ಪ್ರಯತ್ನಿಸುವುದರ ಮೂಲಕ ವಿಶಿಷ್ಟರೆನಿಸಿಕೊಳ್ಳುತ್ತಾರೆ. ಅವರಲ್ಲಿನ ಕೆಲವು ಗುಣಲಕ್ಷಣಗಳನ್ನು ವಿಶ್ಲೇಷಿಸಲು ಕುತೂಹಲವೆನಿಸುತ್ತದೆ. ನಮ್ಮವಿಶ್ವವಿದ್ಯಾಲಯವು ಕೈಗೆತ್ತಿಕೊಂಡಿರುವ, ಸ್ನಾತಕೋತ್ತರ ಹಾಗೂ ಪದವಿ ಮಟ್ಟಗಳಲ್ಲಿ ಶಿಕ್ಷಣ ಮತ್ತು ಅದಕ್ಕೆ ಸಂಬಂಧಿಸಿದ ವಿಷಯ ಕ್ಷೇತ್ರಗಳಲ್ಲಿನ ಗುಣಮಟ್ಟದ ಸಾಮಗ್ರಿಗಳನ್ನು ಕನ್ನಡದಲ್ಲಿ ತರುವ ಕಾರ್ಯವು ಅಮೂಲ್ಯವಾದ ಸಂಗತಿಗಳನ್ನು ತಿಳಿಯಲು ಅನುವು ಮಾಡಿಕೊಟ್ಟಿದೆ. ಕರ್ನಾಟಕದೆಲ್ಲೆಡೆಯಿಂದ ಸುಮಾರು 100 ಶಿಕ್ಷಣ ತಜ್ಞರು ಅತ್ಯಂತ ಮಹತ್ವದ ಸಾಮಾಜಿಕ ಧ್ಯೇಯೋದ್ದೇಶದ ಈ ಯೋಜನೆಗೆ ಕೊಡುಗೆ ನೀಡುತ್ತಿದ್ದಾರೆ.

ಒಳ್ಳೆಯ ಅನುವಾದಕರು ಸಂದರ್ಭೋಚಿತವಾದ ಓದಿನ ಸಾಮಗ್ರಿಗಳನ್ನು ವಿದ್ಯಾರ್ಥಿಗಳು ಮತ್ತು ಶಿಕ್ಷಕರಿಬ್ಬರಿಗೂ ಲಭ್ಯವಾಗುವಂತೆ ಮಾಡುವ ಮಹದೋದ್ದೇಶದೊಂದಿಗೆ ಗುರುತಿಸಿಕೊಳ್ಳುತ್ತಾರೆ. ಬೋಧನೆ, ಸಂಶೋಧನೆ, ಕ್ಷೇತ್ರಕಾರ್ಯ ಹಾಗೂ ಇಂಗ್ಲಿಷ್ ಭಾಷೆಯ ಹಿನ್ನೆಲೆಯಿಂದ ಬಂದಿಲ್ಲದ ವಿದ್ಯಾರ್ಥಿಗಳೊಡನೆಯ ನಿಕಟ ಒಡನಾಟ ಇತ್ಯಾದಿಗಳಿಗೆ ಸಂಬಂಧಿಸಿದಂತೆ ಅವರು

ಹೊಂದಿರುವ ದೀರ್ಘ ಅನುಭವಗಳ ಹಿನ್ನೆಲೆಯಲ್ಲಿ ಅವರು ಅತ್ಯಂತ ಸಹಜವಾಗಿ ವಿದ್ಯಾರ್ಥಿಗಳ ಅಗತ್ಯಗಳನ್ನು ಮನಗಾಣುತ್ತಾರೆ. ವಿದ್ಯಾರ್ಥಿಗಳಿಗೆ ತಾವು ಯಾವ ಭಾಷೆಯಲ್ಲಿ ಸುಲಲಿತವಾಗಿ ವ್ಯವಹರಿಸಬಲ್ಲರೋ ಅದೇ ಭಾಷೆಯಲ್ಲಿ ಉತ್ತಮ ಗುಣಮಟ್ಟದ ಸಂಪನ್ಮೂಲ ಸಾಮಗ್ರಿಗಳು ಸಿಗಬೇಕಿದೆ ಎನ್ನುವುದನ್ನು ಒಪ್ಪುತ್ತಾರೆ.

ವಿಶ್ವವಿದ್ಯಾಲಯ ಹಾಗೂ ಕಾಲೇಜಿನ ಗ್ರಂಥಾಲಯಗಳಲ್ಲಿ ಇಂತಹ ಸಂಪನ್ಮೂಲಗಳ ತೀವ್ರ ಕೊರತೆಯಿದೆ ಎಂಬುದನ್ನು ಅರಿತಿರುವ ಅವರು ಸಹಜವಾಗಿಯೇ ಅನುವಾದದ ಮಹತ್ವವನ್ನು ಗುರುತಿಸುತ್ತಾರೆ ಮತ್ತು ಉತ್ಸಾಹದಿಂದ ಅನುವಾದದ ಕೆಲಸದಲ್ಲಿ ತಮ್ಮ ಶ್ರಮವನ್ನು ಹಾಕಲು ಮುಂದೆ ಬರುತ್ತಾರೆ. ಮುಖ್ಯವಾದದ್ದೆಂದರೆ, ಅವರು ಕಲಿಯುವುದಕ್ಕೆ ಮುಕ್ತ ಮನಸ್ಸನ್ನು ಹೊಂದಿದ್ದಾರೆ. ಅವರು ಕಲಿಯುವುದರಿಂದ ಮತ್ತು ಹೊಸತೇನನ್ನೋ ಅಭಿವೃದ್ಧಿ ಪಡಿಸುವುದರಿಂದ ಹೊಸ ಒಳನೋಟವನ್ನು ಪಡೆದುಕೊಳ್ಳುತ್ತಾರೆ, ಆ ಮೂಲಕ ಸಂತೋಷ ಪಡೆಯುತ್ತಾರೆ. ಲೇಖಕರ ವಾದಸರಣಿ ಹಾಗೂ ವಸ್ತುವಿಷಯದ ಕುರಿತು ಪರ್ಯಾಲೋಚಿಸುತ್ತಾರೆ. ಅವರು ಪ್ರೀತಿಯಿಂದ ಕೆಲಸವನ್ನು ಕೈಗೆತ್ತಿಕೊಳ್ಳುತ್ತಾರೆ.

ಅವರು ಕೆಲಸವನ್ನು ಪರಿಪೂರ್ಣವಾಗಿ ಮಾಡಲು ಪ್ರಯತ್ನಿಸುತ್ತಾರೆ. ಮೊದಲು ಮೂಲ ಬರಹವನ್ನು ಎರಡೋ ಮೂರೋ ಬಾರಿ ಓದುತ್ತಾರೆ. ಅನುವಾದ ಕಾರ್ಯವನ್ನು ಆರಂಭಿಸುವ ಮೊದಲು ಅದನ್ನು ಅರ್ಥಮಾಡಿಕೊಳ್ಳುತ್ತಾರೆ. ಬೇರೆಯವರು ಮಾಡಿದ ಅನುವಾದವನ್ನು ಪರಿಶೀಲನೆ ಮಾಡುವಾಗಲೂ ಅವರು ಇದೇ ಪ್ರಕ್ರಿಯೆಯನ್ನು ಅನುಸರಿಸುತ್ತಾರೆ. ಅನುವಾದಿತ ಬರಹವನ್ನು ದೃಢೀಕರಿಸುವ ಮೊದಲು ಜಾಗರೂಕತೆಯಿಂದ ಓದುತ್ತಾರೆ. ಇಡೀ ಬರಹವನ್ನು ಸಂಪೂರ್ಣವಾಗಿ ಪರಿಶೀಲಿಸಿ, ವಿವರವಾದ ಟಿಪ್ಪಣಿಗಳನ್ನು ಬರೆಯುತ್ತಾರೆ.

ಅಗತ್ಯ ಬಿದ್ದಾಗಲೆಲ್ಲ ತಮ್ಮ ಸಹೋದ್ಯೋಗಿಗಳಿಂದಲೋ ಸ್ನೇಹಿತರಿಂದಲೋ ಸಹಾಯವನ್ನು ಪಡೆಯಲು ಅವರು ಹಿಂಜರಿಯುವುದಿಲ್ಲ. ವಾಸ್ತವದಲ್ಲಿ, ಇಂತಹ ಶೈಕ್ಷಣಿಕ ಪ್ರಯತ್ನಗಳು ಸಹಯೋಗದಿಂದಲೇ ಉತ್ಕೃಷ್ಟವಾಗುತ್ತವೆ. ಅವರು ಒಂದು ಮಟ್ಟದಲ್ಲಿ ವೈಯಕ್ತಿಕ ನೆಲೆಯಲ್ಲಿ ತಾವೊಬ್ಬರೇ ಕೆಲಸ ಮಾಡಿದರೂ ಕೂಡ ಪರಸ್ಪರ ಎದುರುಬದುರು ಕುಳಿತು ಅಥವಾ ಸಹಅನುವಾದಕರ ಜೊತೆಗಿನ ಪರಾಮರ್ಶನ ಸಭೆ, ಟೆಲಿಫೋನ್ / ವರ್ಚ್ಯುಅಲ್ ಸಮಾವೇಶಗಳು, ವಾಟ್ಸಪ್ ಅಥವಾ ಮಿಂಚಂಚೆ ಇತ್ಯಾದಿ ಸಹಯೋಗೀ ವೇದಿಕೆಗಳ ಮೂಲಕ ವಿಚಾರಗಳನ್ನು ಹಂಚಿಕೊಳ್ಳುತ್ತಾರೆ. ಆ ಮೂಲಕ ಪ್ರಕ್ರಿಯೆಯನ್ನು ಇನ್ನಷ್ಟು ಶ್ರೀಮಂತಗೊಳಿಸುತ್ತಾರೆ.

ನಮಗೆ ಅಗತ್ಯವಿರುವುದು ಸಾಕಷ್ಟು ಪ್ರಮಾಣದ ಮುಖ್ಯ ಪಠ್ಯಗಳ ಅಧಿಕೃತ ಅನುವಾದವೊಂದೇ ಅಲ್ಲ, ಇದು ಸಾಧ್ಯವಾಗಲು ಭಾರತೀಯ ಭಾಷೆಗಳಲ್ಲಿ ಗಮನಾರ್ಹ

ಪ್ರಮಾಣದ ಮೂಲ ಶೈಕ್ಷಣಿಕ ಬರಹಗಳೂ ಸೃಷ್ಟಿಯಾಗಬೇಕಿವೆ. ನ್ಯಾಷನಲ್ ಟ್ರಾನ್ಸ್‌ಲೇಶನ್ ಮಿಷನ್, ನ್ಯಾಷನಲ್ ಬುಕ್ ಟ್ರಸ್ಟ್, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಕನ್ನಡ ಸಾಹಿತ್ಯ ಅಕಾಡೆಮಿ, ನವಕರ್ನಾಟಕ ಪಬ್ಲಿಕೇಷನ್ಸ್ ಹಾಗೂ ಮೈಸೂರು, ಬೆಂಗಳೂರು ಹಾಗೂ ಹಂಪಿ ಕನ್ನಡ ವಿಶ್ವವಿದ್ಯಾಲಯಗಳ ಪ್ರಸಾರಾಂಗಗಳು ಕೂಡ ಮೇಲೆ ಉಲ್ಲೇಖಿಸಿದ ವಿದ್ವಾಂಸರುಗಳ ಕೆಲವು ಪ್ರಸ್ತುತ ಕೃತಿಗಳನ್ನು ಪ್ರಕಟಿಸಿವೆ ಹಾಗೂ ಡಿ.ಡಿ. ಕೋಸಾಂಬಿ, ಇರ್ಫಾನ್ ಹಬೀಬ್, ಬಿಪಿನ್‌ಚಂದ್ರ ಹಾಗೂ ರೋಮಿಲಾ ಥಾಪರ್ ಅವರಂತಹ ಪ್ರಮುಖ ಇತಿಹಾಸಜ್ಞರ ಕೃತಿಗಳನ್ನು ಇಂಗ್ಲೀಷಿನಿಂದ ಕನ್ನಡಕ್ಕೆ ತಂದಿವೆ. ಆದರೆ ಇನ್ನೂ ಮಾಡಬೇಕಾದುದು ಬಹಳಷ್ಟಿದೆ.

ಅನುವಾದ ಸಿದ್ಧಾಂತಕ್ಕೆ ಸಂಬಂಧಿಸಿದ ಒಂದು ಮುಖ್ಯ ಪ್ರಶ್ನೆಯೆಂದರೆ, ಅನುವಾದಕರು ಮೂಲ ಬರಹಕ್ಕೆ ಎಷ್ಟು ನಿಷ್ಠರಾಗಿರಲು ಅಥವಾ ಹತ್ತಿರವಿರಲು ಸಾಧ್ಯ ಅಥವಾ ಆಗಿರಬೇಕು ಎನ್ನುವುದು. ಮೂಲಪಠ್ಯವನ್ನು ಅನುವಾದದೊಡನೆ ಇಟ್ಟು ನೋಡಿದಾಗ ಯಾವ ಆವೃತ್ತಿಯನ್ನು ಯಶಸ್ವಿಯೆಂದು ಗುರುತಿಸಬೇಕು? ಎಂಬ ಪ್ರಶ್ನೆಗೆ ಪರಿಹಾರವು, ನಾಟಕಕಾರ ಎ.ಎಲ್.ಸ್ಮಿತ್‌ಅವರು ಹೇಳಿದ ಹಾಗೆ, "ಅನುವಾದವೆನ್ನುವುದು, ಸಾಧ್ಯವಾದಷ್ಟೂ ಅರ್ಥವನ್ನು ಉಳಿಸಿಕೊಂಡು ಮತ್ತೊಂದು ಭಾಷೆಗೆ ಬದಲಾಯಿಸುವುದು; ಏಕೆಂದರೆ, ಬಹುತೇಕವಾಗಿ, ಮೂಲದ ಪರಿಣಾಮದ ಕೆಲ ಭಾಗವು ಯಾವಾಗಲೂ ಕಳೆದೇ ಹೋಗುತ್ತದೆ." ಎಂಬ ಮಾತಿನಲ್ಲಿ ಇದ್ದಂತೆ ತೋರುತ್ತದೆ. ಈ ಕಾರ್ಯದಲ್ಲಿನ ಪ್ರಯಾಸ, ಹೆಣಗಾಟ ಯಾವತ್ತೂಇದ್ದೇ ಇದೆ. ಆದರೆ ಇಂತಹ ಪ್ರಯತ್ನಕ್ಕೆ ಬೆಲೆಯಿದ್ದಂತೆ ಕಾಣುತ್ತದೆ.



– ಎಸ್. ಎ. ಮಂಜುನಾಥ್
manjunath@azimpremjifoundation.org

# ಅನುವಾದದ ನೆಪದಲ್ಲಿ ಹಲವು ಅನುಮಾನಗಳ ಅಂತರಾವಲೋಕನ

*– ಚಿದಾನಂದ ಸಾಲಿ*

ಅನುವಾದವೆಂದರೆ ಸ್ಥೂಲವಾಗಿ ಒಂದು ಭಾಷೆಯಲ್ಲಿನ ಭಾವವನ್ನು ಮತ್ತೊಂದು ಭಾಷೆಗೆ ತರುವುದು ಎಂದರ್ಥ. ಹೀಗೆ ತರುವಾಗ ಯಾವ ಭಾಷೆಯಿಂದ ಅದನ್ನು ತರಲಾಗುತ್ತಿದೆಯೋ ಅದನ್ನು ಮೂಲಭಾಷೆಯೆಂದೂ; ಯಾವ ಭಾಷೆಗೆ ತರಲಾಗುತ್ತಿದೆಯೋ ಅದನ್ನು ಉದ್ದೇಶಿತ ಭಾಷೆ ಎಂತಲೂ ಕರೆಯಲಾಗುತ್ತದೆ. ಅನುವಾದವು ನೇರವಾಗಿ ಸಾಧ್ಯವಿರುವ ನೆರೆ ಭಾಷೆಗಳ ನಡುವೆ ಅಷ್ಟೇ ಅಲ್ಲದೆ ಕೆಲವೊಮ್ಮೆ ಮೂಲ ಭಾಷೆ ಮತ್ತು ಉದ್ದೇಶಿತ ಭಾಷೆಗಳೆರಡರ ನಡುವೆ ಇರುವ ಒಂದು ಮಧ್ಯಮ ಭಾಷೆಯ ನೆರವಿನ ಮೂಲಕವೂ ಸಾಗುತ್ತಿರುತ್ತದೆ. ಇದನ್ನು ಒಂದು ಉದಾಹರಣೆ ಮೂಲಕ ಮತ್ತಷ್ಟು ವಿಸ್ತರಿಸುವುದಾದರೆ ತೆಲುಗಿನಿಂದ ಕನ್ನಡಕ್ಕೆ ಅನುವಾದ ಮಾಡಬೇಕಾದಾಗ ತೆಲುಗನ್ನು ಮೂಲ ಭಾಷೆಯೆಂದೂ, ಕನ್ನಡವನ್ನು ಉದ್ದೇಶಿತ ಭಾಷೆಯೆಂದೂ ಕರೆಯಲಾಗುತ್ತದೆ. ಕೆಲವೊಮ್ಮೆ ಬೆಂಗಾಲಿಯಿಂದ ಈಗಾಗಲೇ ತೆಲುಗಿಗೆ ಅನುವಾದವಾಗಿರುವ ಪಠ್ಯವೊಂದನ್ನು, ಮೂಲ ಭಾಷೆಯಾದ ಬೆಂಗಾಲಿ ತಿಳಿದಿಲ್ಲದಿದ್ದರೂ, ಈಗಾಗಲೇ ಅನುವಾದವಾಗಿರುವ ತೆಲುಗಿನ ಮೂಲಕ ಅದನ್ನು ಒಬ್ಬ ಅನುವಾದಕನು ಕನ್ನಡಕ್ಕೆ ತರುತ್ತಾನೆ. ಇಂಥ ಸಂದರ್ಭಗಳಲ್ಲಿ ಬೆಂಗಾಲಿಯನ್ನು ಮೂಲ ಭಾಷೆಯೆಂದೂ, ಕನ್ನಡವನ್ನು ಉದ್ದೇಶಿತ ಭಾಷೆಯೆಂದೂ ಕರೆದರೆ, ನಡುವೆ ಸೇತುವೆಯಾಗಿ ಬಳಕೆಯಾಗಿರುವ ತೆಲುಗನ್ನು ವಯಾ ಭಾಷೆ ಅಥವಾ ಮಧ್ಯಮ ಭಾಷೆ ಎಂದು ಕರೆಯಲಾಗುತ್ತದೆ. ಜಪಾನಿ, ಸ್ಪ್ಯಾನಿಷ್, ರಷ್ಯನ್ ಮುಂತಾದ ಭಾಷೆಗಳಿಂದ ಕನ್ನಡಕ್ಕೆ ಬಂದಿರುವ ಬಹುಪಾಲು ಪಠ್ಯವು ಹೀಗೆ ಆ ಭಾಷೆಗಳಿಂದ

ಕನ್ನಡಕ್ಕೆ ನೇರವಾಗಿ ಅನುವಾದಗೊಂಡಿರದೆ, ಇಂಗ್ಲೀಷೆಂಬ ವಯಾ ಭಾಷೆ ಅಥವಾ ಮಧ್ಯಮ ಭಾಷೆಯ ಮೂಲಕ ಉದ್ದೇಶಿತ ಭಾಷೆಗೆ ತಲುಪಿದೆ.

ಅನುವಾದ ಪ್ರಕ್ರಿಯೆಯನ್ನು 'ಒಂದು ಬಾಟಲಿಯಿಂದ ಮತ್ತೊಂದು ಬಾಟಲಿಗೆ ಸುಗಂಧದ್ರವ್ಯವೊಂದನ್ನು ವರ್ಗಾಯಿಸುವ ಕೆಲಸ'ಕ್ಕೆ ಹೋಲಿಸಬಹುದೆನಿಸುತ್ತದೆ. ಏಕೆಂದರೆ ಎಷ್ಟೇ ಮುತುವರ್ಜಿ ವಹಿಸಿದರೂ, ಮುನ್ನೆಚ್ಚರಿಕಾ ಕ್ರಮಗಳನ್ನು ಕೈಗೊಂಡರೂ, ಜಾಗ್ರತೆಯಿಂದಿದ್ದರೂ 'ಒಂದಷ್ಟು' ಪರಿಮಳದ ಸೋರಿಕೆಯಂತೂ ಆಗಿಯೇ ತೀರುತ್ತದೆ. ಮೂಲಭಾಷೆಯಿಂದ ಉದ್ದೇಶಿತ ಭಾಷೆಗೆ ನೇರವಾಗಿ ಪಠ್ಯವೊಂದು ಅನುವಾದಾಗಲೂ ಈ ಪರಿಮಳದ ಸೋರಿಕೆಯು ಸಹಜವಾಗಿಯೆಂಬಂತೆ ಆಗಿಯೇ ಆಗುತ್ತದೆ. ಇನ್ನು ಮಧ್ಯಮ ಭಾಷೆಯ ನೆರವಿನಿಂದ ಮೂಲಭಾಷೆಯಿಂದ ಉದ್ದೇಶಿತ ಭಾಷೆಗೆ ವಯಾ ಅನುವಾದವಾದಾಗ ಈ ಸೋರಿಕೆಯ ನಷ್ಟದ ಪ್ರಮಾಣವು ಹೆಚ್ಚೇ ಆಗಿರುತ್ತದೆ. ಏಕೆಂದರೆ ಮೂಲ ಭಾಷೆಯಿಂದ ಮಧ್ಯಮ ಭಾಷೆಗೆ ಅನುವಾದಾಗಲೇ ಒಂದಷ್ಟು ನಷ್ಟವಾಗಿದ್ದರೆ; ಮಧ್ಯಮ ಭಾಷೆಯಿಂದ ಉದ್ದೇಶಿತ ಭಾಷೆಗೆ ಅನುವಾದವಾಗುವ ಹೊತ್ತಿಗೆ ಮತ್ತಷ್ಟು ನಷ್ಟವಾಗಿರುತ್ತದೆ. ಹಾಗಾಗಿ ಓದುಗರೊಬ್ಬರು ಮೂಲ ಕೃತಿಯನ್ನು ಮೂಲ ಭಾಷೆಯಲ್ಲೇ ಓದಿ ಪಡೆಯುವ ರಸಾನುಭೂತಿಗೂ, ನೇರ ಅನುವಾದದ ಪಠ್ಯದಿಂದ ಪಡೆಯುವ ರಸಾನುಭೂತಿಗೂ ಮತ್ತು ಮಧ್ಯಮ ಭಾಷೆಯ ನೆರವಿನಿಂದಾದ ಅನುವಾದದ ಪಠ್ಯದಿಂದ ಹೊಂದುವ ರಸಾನುಭೂತಿಗೂ ವ್ಯತ್ಯಾಸವು ಇದ್ದೇ ಇರುತ್ತದೆ. ಬಹುಶಃ ಇದೇ ಕಾರಣಕ್ಕೆ ಇರಬಹುದು ಶ್ರೀ ಅಹೋಬಲ ಶಂಕರ ಅವರು ರವೀಂದ್ರನಾಥ ಟ್ಯಾಗೋರರ ಗೀತಾಂಜಲಿಯನ್ನು ಕನ್ನಡಕ್ಕೆ ಅನುವಾದಿಸುವ ಮೊದಲು, ಮೂಲ ಬೆಂಗಾಲಿ ಭಾಷೆಯನ್ನೇ ಕಲಿತು, ಬೆಂಗಾಲಿ ಭಾಷೆಯಲ್ಲಿ ಅದು ಕೊಡುವ ರಸಾನುಭೂತಿಯನ್ನು ಪಡೆದುಕೊಂಡು, ನಂತರವಷ್ಟೇ ಅದನ್ನು ಅಲ್ಲಿಂದ ನೇರವಾಗಿ ಕನ್ನಡಕ್ಕೆ ಅನುವಾದಿಸಿದ್ದು. ಸೋವಿಯೆತ್ ಯುನಿಯನ್‌ನ ರಾದುಗ ಪ್ರಕಾಶನದ ಹಲವಾರು ರಷ್ಯನ್ ಕೃತಿಗಳು ಕರ್ನಾಟಕದ ನವಕರ್ನಾಟಕ ಪ್ರಕಾಶನದ ಮೂಲಕ ಕನ್ನಡಕ್ಕೆ ಬಂದಾಗ ನಿರಂಜನ, ಹರಿಶಂಕರ್ ಅಂಥವರು ನೇರವಾಗಿ ರಷ್ಯನ್ ಭಾಷೆಯನ್ನೇ ಕಲಿತು ಅಲ್ಲಿಂದ ಕನ್ನಡಕ್ಕೆ ನೇರ ಅನುವಾದ ಮಾಡಿದ್ದನ್ನು ಕೂಡ ಇಲ್ಲಿ ಉಲ್ಲೇಖಿಸಬಹುದು. ಕನ್ನಡದಲ್ಲಿ ಈಗ ತುಂಬಾ ಜನ ಬರೆಯುತ್ತಿರುವ ಗಜಲ್ ಪ್ರಕಾರವು ಕೂಡ ಮೂಲದಲ್ಲಿ ಉರ್ದುವಿನ ಕಾವ್ಯ ಪ್ರಕಾರವಾಗಿದ್ದು, ಅದರ ಛಂದಸ್ಸಿನ ತಿಳಿವಳಿಕೆಯನ್ನು ಶಾಂತರಸರು ಮೂಲ ಉರ್ದುವಿನಿಂದಲೇ ಪಡೆದವರಾಗಿದ್ದರೆ; ನಂತರ ಬರೆಯಲಾರಂಭಿಸಿದ ಕೆಲವರು ಶಾಂತರಸರ ಮೂಲಕ, ಮತ್ತೆ ಕೆಲವರು ತೆಲುಗಿನ ಮೂಲಕ, ಇನ್ನೂ ಕೆಲವರು ಇಂಗ್ಲೀಷಿನ ಮೂಲಕ ಪಡೆದುಕೊಂಡವರಾಗಿದ್ದಾರೆ.

ಅನುವಾದವನ್ನು ಸಾಹಿತ್ಯಿಕ, ಮಾನವಿಕ, ವೈಜ್ಞಾನಿಕ ಮತ್ತು ವಾಣಿಜ್ಯಿಕ ಎಂದು ಸ್ಥೂಲವಾಗಿ ವರ್ಗೀಕರಿಸಬಹುದಾಗಿದೆ. ಸಾಹಿತ್ಯಿಕ ಅನುವಾದವು ಕಥೆ, ಕವಿತೆ ಮುಂತಾದ ಸೃಜನಶೀಲ ಕೃತಿಗಳ ಅನುವಾದಗಳ ಜೊತೆಗೆ; ಸಂಶೋಧನೆ, ವಿಮರ್ಶೆ ಮುಂತಾದ ಸೃಜನೇತರ ಕೃತಿಗಳ ಅನುವಾದಗಳನ್ನು ಒಳಗೊಂಡಿದೆ. ಮಾನವಿಕ ಅನುವಾದವು ಐತಿಹಾಸಿಕ, ಧಾರ್ಮಿಕ, ಶೈಕ್ಷಣಿಕ ಮುಂತಾದ ಸಾಹಿತ್ಯೇತರವಾದ ಮಾನವಿಕ ನಿಕಾಯಗಳ ಪಠ್ಯಗಳ ಅನುವಾದಗಳೊಂದಿಗೆ ವ್ಯವಹರಿಸಿದರೆ; ವೈಜ್ಞಾನಿಕ ಅನುವಾದವು ಮೂಲ ವಿಜ್ಞಾನ ಮತ್ತು ಅನ್ವಯಿಕ ವಿಜ್ಞಾನಗಳೆಂಬ ವಿಜ್ಞಾನದ ಎರಡೂ ಜ್ಞಾನಶಾಖೆಗಳಲ್ಲಿ ಲಭ್ಯವಿರುವ ಉಪಯುಕ್ತ ಪಠ್ಯಗಳ ಅನುವಾದಗಳೊಂದಿಗೆ ವ್ಯವಹರಿಸುತ್ತದೆ. ಕೊನೆಯದಾಗಿ ಇರುವ ವಾಣಿಜ್ಯಿಕ ಅನುವಾದವು ಆರ್ಥಿಕ ಉದ್ದೇಶಗಳನ್ನು ಮುಖ್ಯ ಲಕ್ಷ್ಯವಾಗಿ ಹೊಂದಿರುವ ಜಾಹೀರಾತು ಬರೆಹಗಳು, ವ್ಯಾಪಾರೀ ಸಿನಿಮಾಗಳು ಮುಂತಾದವನ್ನು ಒಳಗೊಂಡಿದೆ. ಮತ್ತೊಂದು ವಿಧದಲ್ಲಿ ಈ ನಾಲ್ಕೂ ವರ್ಗಗಳ ಅನುವಾದಗಳನ್ನು ಒಳಗೊಳ್ಳುವಂತೆ, ಒಟ್ಟಾರೆ ಅನುವಾದವನ್ನು ಒಳಬರುವ ಮತ್ತು ಹೊರಹೋಗುವ ಅನುವಾದಗಳೆಂದು ಎರಡು ಭಾಗಗಳಲ್ಲಿ ವರ್ಗೀಕರಿಸಬಹುದು. ಒಳಬರುವ ಅನುವಾದವು ಹೊರಗಿನ ಭಾಷೆಯನ್ನು ಮೂಲ ಭಾಷೆಯಾಗಿ ಹೊಂದಿದ್ದು, ಒಳಗಿನ ಭಾಷೆಯನ್ನು ಉದ್ದೇಶಿತ ಭಾಷೆಯಾಗಿ ಹೊಂದಿರುತ್ತದೆ. ಹೊರಹೋಗುವ ಅನುವಾದದಲ್ಲಿ ಹೊರಗಿನ ಭಾಷೆಯೇ ಉದ್ದೇಶಿತ ಭಾಷೆಯಾಗಿದ್ದು, ಒಳಗಿನ ಭಾಷೆಯೇ ಮೂಲಭಾಷೆಯಾಗಿರುತ್ತದೆ. ಕನ್ನಡದಲ್ಲಿ ಒಳಬರುವ ಅನುವಾದದ ಸುರಿವಿನ ಪ್ರಮಾಣ ಮತ್ತು ಹೊರಹೋಗುವ ಅನುವಾದದ ಹರಿವಿನ ಪ್ರಮಾಣದ ಅನುಪಾತದಲ್ಲಿ ವ್ಯತ್ಯಾಸವಿದ್ದು ಒಳಬರುವ ಅನುವಾದದ ಪ್ರಮಾಣವೇ ಹೆಚ್ಚಾಗಿದೆ.

ಒಂದು ಕೃತಿಯು ಅನುವಾದವಾಗುವಾಗ ಅದರ ಭಾಷೆ, ಭಾವ, ಬೆಡಗು ಮತ್ತು ಜಾಯಮಾನಗಳು ಅನುವಾದವಾಗುತ್ತಿರುತ್ತವೆಯಾದರೂ, ಭಾಷೆ ಬದಲಾಗುತ್ತಿರುವುದು ಮಾತ್ರ ತಕ್ಷಣಕ್ಕೆ ಮೇಲ್ನೋಟಕ್ಕೆ ಎದ್ದು ಕಾಣಿಸುತ್ತಿರುತ್ತದೆ. ಪ್ರಜ್ಞಾಪೂರ್ವಕವಾಗಿಯೋ ಅಪ್ರಜ್ಞಾಪೂರ್ವಕವಾಗಿಯೋ ಒಂದು ಉತ್ತಮ ಅನುವಾದ ಕೃತಿಯು ಈ ಅಷ್ಟೂ ಅಂಶಗಳನ್ನು ಒಳಗೊಂಡಿರುತ್ತದೆ. ಇವುಗಳ ತಿಳಿವಳಿಕೆಯಿಲ್ಲದೆಯೂ ಒಂದು ಕೃತಿಯ ಅನುವಾದವು ಸಫಲವಾಗಿರಬಹುದಾದರೂ ಅಂಥ ಉದಾಹರಣೆಗಳು ಅಪರೂಪದಲ್ಲಿ ಅಪರೂಪ. ಈ ಅರಿವಿನಿಂದ ಅನುವಾದದ ಸೂಕ್ಷ್ಮತೆ ಮತ್ತಷ್ಟು ಹೆಚ್ಚುತ್ತದೆ. ಏಕೆಂದರೆ ಅನುವಾದದ ಸಾಫಲ್ಯತೆಯು ಮೂಲದ ಭಾಷೆ ಮತ್ತು ಭಾವಗಳನ್ನು ಮತ್ತೊಂದು ಭಾಷೆಗೆ ತರುವುದಕ್ಕಿಂತ ಮುಖ್ಯವಾಗಿ ಅದರ 'ಬೆಡಗ'ನ್ನು ಯಥಾವತ್ತಾಗಿ ತರುವ ಅನುವಾದಕನ ಪ್ರತಿಭಾಶಕ್ತಿಯನ್ನು ಹೆಚ್ಚು

ಅವಲಂಬಿಸಿರುತ್ತದೆ. ಇದಕ್ಕಾಗಿ ಅನುವಾದಕನಿಗೆ ಮೂಲ ಮತ್ತು ಉದ್ದೇಶಿತ ಭಾಷೆಗಳೆರಡರ ಸಾಂಸ್ಕೃತಿಕ ಮತ್ತು ಸಾಹಿತ್ಯಿಕ ಪರಂಪರೆಗಳ ನಡುವಿನ ಸಾಮ್ಯತೆ ಮತ್ತು ಭಿನ್ನತೆಗಳ ಅರಿವಿದ್ದಷ್ಟೂ ಒಳ್ಳೆಯದು. ಉದಾಹರಣೆಗೆ ಕನ್ನಡದಿಂದ ತೆಲುಗಿಗೆ ಪೂರ್ಣಚಂದ್ರ ತೇಜಸ್ವಿಯವರ ಪರಿಸರದ ಕಥೆಗಳನ್ನು ಅನುವಾದಿಸುವಾಗ ಶಾಖಮೂರಿ ರಾಮಗೋಪಾಲ್ ಅವರಿಗೆ ಕನ್ನಡ ಸಾಹಿತ್ಯದಲ್ಲಿ ತೇಜಸ್ವಿಯವರ ಸ್ಥಾನ, ವೈಶಿಷ್ಟ್ಯತೆ ಮತ್ತು ಮಹತ್ವಗಳ ಜೊತೆಗೆ ತೆಲುಗಿನ ಯಾವ ಲೇಖಕರೊಂದಿಗೆ ಅವರನ್ನು (ಒಂದು ಹಂತದವರೆಗಾದರೂ) ಸಮೀಕರಿಸಬಹುದು ಎಂಬ ಸ್ಪಷ್ಟ ತಿಳಿವಳಿಕೆಯಿರಬೇಕಾಗುತ್ತದೆ ಮತ್ತು ಈ ತೆರನ ಒಳನೋಟಗಳಿರುವ ಮಾಹಿತಿಯನ್ನು ಅವರು ಅನುವಾದಕನ ಮಾತಿನಲ್ಲಿ ಹಂಚಿಕೊಂಡಾಗ ಉದ್ದೇಶಿತ ಭಾಷೆಯ ಓದುಗನಿಗೆ ತುಂಬ ಉಪಕಾರವಾಗುತ್ತದೆ. ಈ ಮಾತು ತೆಲುಗಿನಿಂದ ಕನ್ನಡಕ್ಕೆ ಅನುವಾದಕ್ಕಾಗಿ ಕೃತಿಯೊಂದನ್ನು ಆಯ್ಕೆ ಮಾಡಿಕೊಳ್ಳುವ ಸಂದರ್ಭಕ್ಕೂ ಅನ್ವಯವಾಗುತ್ತದೆ. ಉದಾಹರಣೆಗೆ ತೆಲುಗಿನಿಂದ ವಿಶ್ವನಾಥ ಸತ್ಯನಾರಾಯಣ, ಶ್ರೀಶ್ರೀ, ಚಲಂ, ಶಿವಾರೆಡ್ಡಿಯವರಲ್ಲದೆ ಹೊಸ ಕಾಲದ ಪ್ರತಿಭಾಶಾಲಿ ಲೇಖಕರಾದ ಅಫ್ಸರ್, ಮಹಮ್ಮದ್ ಖದೀರ್ ಬಾಬು, ಮಹೆಜಬೀನ್, ವೇಂಪಲ್ಲಿ ಷರೀಫ್‌ರಂಥವರನ್ನು ತರುವಾಗ ಅವರು ನಮ್ಮ ಕನ್ನಡಕ್ಕೆ ಹೇಗೆ ಹತ್ತಿರ, ಯಾಕೆ ಮುಖ್ಯ ಎಂಬುದನ್ನು ಅನುವಾದಕರು ತಿಳಿದಿರುವುದೊಳಿತು. ಇದಕ್ಕಾಗಿ ತೆಲುಗಿನ ಸಾಹಿತ್ಯ ಚರಿತ್ರೆ, ಅಲ್ಲಿನ ಪಂಥಗಳ ಪರಿಚಯ ಮತ್ತು ಆಯಾ ಪಂಥಗಳ ಪಥನಿರ್ಮಾತೃ ಲೇಖಕರ ಪರಿಚಯ ಅನುವಾದಕ್ಕೆ ಹೊಸ ಕಸುವು ನೀಡುವುದರಲ್ಲಿ ಸಂಶಯವಿಲ್ಲ. ಸಾಹಿತ್ಯಿಕ ಅನುವಾದಕ್ಕೆ ಈ ಮಾತು ಹೆಚ್ಚು ಅನ್ವಯವಾಗುತ್ತದೆ. ಹಾಗೆಯೇ ವಾಣಿಜ್ಯಿಕ ವಿಷಯ ವಸ್ತುವಿನ ಅನುವಾದದಲ್ಲಿ ಈ ಪ್ರಮೇಯಕ್ಕೆ ಅಷ್ಟೇನೂ ಮಹತ್ವದ ಸ್ಥಾನವಿಲ್ಲ ಏಕೆಂದರೆ ವಾಣಿಜ್ಯಿಕ ವಸ್ತುವಿನ ಬರೆಹವೊಂದಕ್ಕೆ 'ಇಂದು' ಎಂಬ ಸದ್ಯತನ ಮತ್ತು 'ಇಷ್ಟು' ಎಂಬ ಲಾಭಕೋರತನಗಳು ಆಧಾರವನ್ನು ಒದಗಿಸಿರುತ್ತವೆಯಾಗಿ ಅದಕ್ಕೆ 'ಹಿಂದೆ'ಯೂ ಬೇಕಿಲ್ಲ, 'ಮುಂದೆ'ಯೂ ಬೇಕಿರುವುದಿಲ್ಲ.

ಸಾಹಿತ್ಯಿಕ ಅನುವಾದದ ವಿಷಯಕ್ಕೆ ಬಂದಾಗ ಅನುವಾದಕನಿಗೆ ಎರಡು ಭಾಷೆಗಳ ಜಾಯಮಾನ, ವೈಯಾಕರಣಿಕ ವ್ಯತ್ಯಾಸ ಮತ್ತು ಸಮಾನ ಪದಸಂಪತ್ತುಗಳು ಇರಬೇಕಾಗುತ್ತದೆ. ಎಷ್ಟೋ ಸಲ ನಿಘಂಟುವಿನ ಸಹಾಯ ಪಡೆಯುವುದನ್ನು ಕೆಲವರು ವಿರೋಧಿಸುವುದುಂಟು. ಆದರೆ ಎಷ್ಟೋ ಸಲ ಕನ್ನಡದ ಪಠ್ಯವೊಂದನ್ನು ಓದುವಾಗಲೇ ನಮಗೆ ತಿಳಿಯದ ಎಷ್ಟೋ ಪದಗಳು ಎದುರಾಗಿ, ಅದರ ಸರಿಯಾದ ರೂಪ ಮತ್ತು ಅರ್ಥಗಳಿಗಾಗಿ ನಾವು ಪದಕೋಶವನ್ನು ಎಡತಾಕುವುದುಂಟು. ಹಾಗೆ ಅನ್ಯ ಭಾಷೆಯ ಪಠ್ಯವೊಂದನ್ನು ಅನುವಾದಿಸುವಾಗ ಅಗತ್ಯ ಬಿದ್ದರೆ ನಿಘಂಟುವಿನ ಸಹಾಯ

ಪಡೆದರೆ ತಪ್ಪೇನಿಲ್ಲ. ಕಡೆಗೂ ಅದು ಪದಕ್ಕೆ ಅರ್ಥ ಕೊಡಬಹುದೇ ಹೊರತು ಭಾವಕ್ಕಲ್ಲ. ಅದಕ್ಕಾಗಿಯೇ ಪದಕ್ಕೆ ಅರ್ಥ ಪದಕೋಶದಿಂದ; ಭಾವಕ್ಕೆ ಅರ್ಥ ಭಗವಂತನಿಂದ ಎಂಬ ಮಾತಿರುವುದು. ಅಲ್ಲಮ ಕೂಡ ಪದವನರಿಯಬಹುದಲ್ಲದೆ ಪದಾರ್ಥವನರಿಯಲಾಗದು ಎಂದಿರುವುದು. ಯಾವುದೇ ಭಾಷೆಯ ಆತ್ಯಂತಿಕ ಲಕ್ಷ್ಯ ಸಂವಹನ ಮಾಡುವುದಾಗಿರುತ್ತದೆ. ಈ ಸಂವಹನ ಸುಲಭವಾಗುವಂತೆ ಪ್ರತಿ ಭಾಷೆಗೂ ಅದರದೇ ಜಾಯಮಾನವಿರುತ್ತದೆ. ಅದನ್ನು ಪದಶಃ ಅನುವಾದಿಸಿದಾಗ ಅದು ಉದ್ದೇಶಿತ ಭಾಷೆಯ ಜಾಯುವಮಾನಕ್ಕೆ ಹೊಂದಿಕೆಯಾಗದಂತೆ ಉಳಿಯುವುದರಿಂದ ಸಂವಹನಕ್ಕೆ ತೊಡಕಾಗುತ್ತದೆ. ಏಕೆಂದರೆ ಈ ಭಾಷೆಯಲ್ಲಿ ಸಂವಹನ ಸುಲಭವಾಗುವಂತೆ ಇದಕ್ಕೆ ಇದರದೇ ಆದ ಜಾಯಮಾನವಿರುತ್ತದೆ. ಪದಶಃ ಅನುವಾದದಿಂದ ಆಗುವ ಗೊಂದಲಗಳಿವು. ಗೂಗಲ್ ಅನುವಾದವು ಮಾಡುವುದು ಇಂಥ ಪದಶಃ ಅನುವಾದದ ಗೊಂದಲಗಳನ್ನೇ. ಆ ತಂತ್ರಜ್ಞಾನದಲ್ಲಿ ಅನುವಾದವೆಂಬ ಪ್ರಕ್ರಿಯೆಯಲ್ಲಿ ಅಡಗಿರುವ ಇಂಥ ಹಲವು ಸೂಕ್ಷ್ಮಗಳನ್ನು ತಿಳಿದುಕೊಂಡಿರುವ ಕ್ರಿಯಾಶೀಲ ಮನಸ್ಸಿನ ಬದಲಿಗೆ ಒಂದೇ ಸಿಂಗಲ್ ಕಮಾಂಡಿನ ಮೂಲಕ ಪದಗಳ ಅರ್ಥಗಳನ್ನು ಪಕ್ಕದಲ್ಲಿಟ್ಟಂಥ ಅನರ್ಥದ ಅವಾಂತರಗಳು ಸೃಷ್ಟಿಯಾಗುತ್ತವೆ. ಮಾಧ್ಯಮದವರಿಗೆಂದು ಉದ್ದೇಶಿಸಿ ಬರೆಯಲಾದ 'ಪ್ರೆಸ್' ಎಂಬ ಪದವು ಗೂಗಲ್ ಅನುವಾದದಲ್ಲಿ 'ಒತ್ತು' ಎಂದಾಗುತ್ತದೆ! ಇನ್ನು ಎರಡು ಭಾಷೆಗಳ ಭಾಷಿಕ ಸಂರಚನೆಯಲ್ಲಿರುವ ವ್ಯತ್ಯಾಸದ ಅರಿವು ಕೂಡ ಅನುವಾದಕನಿಗೆ ಮುಖ್ಯವಾಗುತ್ತದೆ. ಅನುವಾದದ ಮೂಲನಿಯಮವೇ 'ಸಾಧ್ಯವಾದಷ್ಟು ಮೂಲಾನುಸಾರಿಯಾಗಿರುವುದು' ಎಂದಿದೆ. ಹಾಗಾಗಿ ಮೂಲದಲ್ಲಿರುವ ಪದಗಳ ಕ್ರಮ, ವಾಕ್ಯ ರಚನಾ ಶೈಲಿಯನ್ನೇ ಅನುವಾದದಲ್ಲೂ ಉಳಿಸಿಕೊಳ್ಳುತ್ತೇನೆಂದು ಹೊರಟಾಗ ಆಗುವ ಗೊಂದಲಗಳಿವು. ಉದಾಹರಣೆಗೆ ಇಂಗ್ಲೀಷಿನಲ್ಲಿ ಐ ಯಾಮ್ ಗೋಯಿಂಗ್ ಟು ಸ್ಕೂಲ್ ಎಂಬುದರಲ್ಲಿ ಕರ್ತೃ, ಕ್ರಿಯೆ ಮತ್ತು ಕರ್ಮಗಳ ಕ್ರಮಣಿಕೆ ಇದೆ. ಮೂಲವನ್ನು ಅನುಸರಿಸಬೇಕೆಂದು ಪದವನ್ನು ಅನುವಾದದ ಘಟಕ ಮಾಡಿಕೊಂಡು ಇದನ್ನು ಅನುವಾದಿಸಿದಾಗ ಇದು ನಾನು ಹೋಗುತ್ತೇನೆ ಶಾಲೆಗೆ ಎಂದಾಗುತ್ತದೆ. ಇದು ಕನ್ನಡದಲ್ಲಿ ವಿಚಿತ್ರವಾಗಿ ಕೇಳಿಸುತ್ತದೆ. ಮೂಲದ ಕರ್ತೃ, ಕ್ರಿಯೆ ಮತ್ತು ಕ್ರಮಗಳ ಕ್ರಮಣಿಕೆಯನ್ನು ಉದ್ದೇಶಿತ ಭಾಷೆಯಾದ ಕನ್ನಡದ ಭಾಷಿಕ ರಚನೆಯಂತೆ ಕರ್ತೃ, ಕರ್ಮ ಮತ್ತು ಕ್ರಿಯೆಗಳ ಕ್ರಮಣಿಕೆಯಲ್ಲಿ ತಂದಾಗ ನಾನು ಶಾಲೆಗೆ ಹೋಗುತ್ತೇನೆ ಎಂದಾಗುತ್ತದೆ. ಇದು ಕನ್ನಡಕ್ಕೆ ಹೆಚ್ಚು ಹೊಂದಿಕೆಯಾಗುತ್ತದೆ. ಇದಕ್ಕಾಗಿ ಈ ಎರಡು ಭಾಷೆಗಳ ಸಹಜ ಜಾಯಮಾನಗಳು ತಿಳಿದಿರಬೇಕು ಮತ್ತು ಇಂಥಲ್ಲಿ ಪದವನ್ನು ಅನುವಾದ ಘಟಕವಾಗಿ ಪರಿಗಣಿಸುವ ಬದಲಿಗೆ ಇಡೀ ವಾಕ್ಯವನ್ನೇ

ಅನುವಾದದ ಘಟಕವಾಗಿ ಪರಿಗಣಿಸಿ ಮುಂದುವರಿಯಬೇಕು. ಉರ್ದುವಿನ ಒಂದು ಕವಿತೆಯ ಉದಾಹರಣೆಯ ಮೂಲಕ ಇದನ್ನು ಮತ್ತಷ್ಟು ಸ್ಪಷ್ಟಪಡಿಸಿಕೊಳ್ಳೋಣ. ಏಜಾಜ್ ತಿಮ್ಮಾಪುರಿ ಅವರ ಗಜಲಿನ ಮೊದಲ ಎರಡು ಸಾಲು ಹೀಗಿವೆ:

ಆವಾನಿ ಕಾ ತರಾನಾ ಆರಝೀ ಹೈ
ನಶೀಲಾ ಸಾ ಜಮಾನಾ ಆರಝೀ ಹೈ

ಇದನ್ನು

ತಾರುಣ್ಯದ ಈ ಗಾನವು ಅನಿಶ್ಚಿತ ಇಹುದು
ಅಮಲಿನಂಥ ಈ ಕಾಲವು ಅನಿಶ್ಚಿತ ಇಹುದು

ಹೀಗೆ ಎರಡೂ ಭಾಷೆಗಳ ಭಾಷಿಕ ಸಂರಚನೆಯನ್ನು ಗಮನಕ್ಕೆ ತೆಗೆದುಕೊಳ್ಳದೆ, ಪದವನ್ನು ಅನುವಾದದ ಘಟಕವಾಗಿ ಪರಿಗಣಿಸಿ ಅನುವಾದಿಸಬಹುದು. ಹಾಗೆಯೇ ಎರಡೂ ಭಾಷೆಗಳ ಭಾಷಿಕ ಸಂರಚನೆಯನ್ನು ಲಕ್ಷ್ಯದಲ್ಲಿಟ್ಟುಕೊಂಡು, ಇಡೀ ವಾಕ್ಯವನ್ನು ಅನುವಾದದ ಘಟಕವಾಗಿ ಪರಿಗಣಿಸಿ ಈ ಕೆಳಗಿನಂತೆಯೂ ಅನುವಾದಿಸಬಹುದು:

ತಾರುಣ್ಯದ ಗಾನ ಅನಿಶ್ಚಿತ
ನಶೆಯಂಥ ಕಾಲ ಅನಿಶ್ಚಿತ

ಇದಕ್ಕಾಗಿ ಸಂದರ್ಭಾನುಸಾರ ಒಮ್ಮೆ ಪದವನ್ನು ಅನುವಾದದ ಘಟಕವಾಗಿ, ಮತ್ತೊಮ್ಮೆ ವಾಕ್ಯವನ್ನು ಅನುವಾದದ ಘಟಕವಾಗಿ ಮಗದೊಮ್ಮೆ ಹಲವು ವಾಕ್ಯಗಳಿರುವ ಒಂದು ಪ್ಯಾರಾವು ಹೊಮ್ಮಿಸುವ ಅರ್ಥ/ಭಾವವನ್ನು ಅನುವಾದದ ಘಟಕವಾಗಿ ಪರಿಗಣಿಸಬೇಕಾಗುತ್ತದೆ. ಮೂಲಾನುಸಾರಿಯೂ ಆಗಿರಬೇಕು. ಉದ್ದೇಶಿತ ಭಾಷೆಯ ಜಾಯಮಾನಕ್ಕೂ ಹೊಂದಿಕೆಯಾಗಬೇಕು. ವಸ್ತು ಮತ್ತು ಭಾವದ ಜೊತೆಗೆ ಅದರ ಬೆಡಗೂ ಬಂದಿರಬೇಕು. ಇದೆಲ್ಲದರ ಜೊತೆಗೆ ಮೂಲ ಭಾಷೆಯ ಲೇಖಕರ ಅನನ್ಯ ಶೈಲಿಯೂ ತನ್ನ ಸಹಿ ಸಮೇತ ಉದ್ದೇಶಿತ ಭಾಷೆಗೆ ಬಂದಿರಬೇಕು. ಒಟ್ಟಿನಲ್ಲಿ ಆ ವಸ್ತುವನ್ನು, ಆ ಲೇಖಕನು ತನ್ನದೇ ವಿಶಿಷ್ಟ ಶೈಲಿಯಲ್ಲಿ ಉದ್ದೇಶಿತ ಭಾಷೆಯಲ್ಲಿ ಬರೆದಿದ್ದರೆ ಹೇಗಿರುತ್ತಿತ್ತೋ ಹಾಗಿರಬೇಕು. ಓದುಗನಿಗೆ ಇದೆಲ್ಲ ಅನುವಾದದಲ್ಲಿ ಭಾಸವಾಗಬೇಕು. ಈ ಕಾರಣಕ್ಕಾಗಿಯೇ ಅನುವಾದವು ಸವಾಲಿನ ಕೆಲಸವಾಗಿರುವುದು.

ಅನುವಾದಾತೀತವಾಗಿರುವುದೇ ಒಂದು ಉತ್ತಮ ಕೃತಿಯ ಲಕ್ಷಣ ಎಂದು ಕೆಲವರು ವಾದಿಸುತ್ತಾರೆ. ಇದಕ್ಕೆ ಪೂರಕವಾಗಿ ನೋ ಟ್ರಾನ್ಸ್‌ಲೇಶನ್ ಈಸ್ ಪರ್ಫೆಕ್ಟ್ ಎಂದೂ ಕೆಲವರು ಹೇಳುತ್ತಾರೆ. ಅಡಿ ಟಿಪ್ಪಣಿಗಳನ್ನು ನೀಡುವ ಅನುವಾದವು ಅತಿ ಕೆಟ್ಟ ಅನುವಾದಕ್ಕೆ ಉದಾಹರಣೆ ಎಂದೂ ಕೆಲವರು ಹೇಳುತ್ತಾರೆ. ಕೆಲವು

ಅನುವಾದಾತೀತವಾದ ಸಂಸ್ಕೃತಿ ವಿಶಿಷ್ಟ ಮತ್ತು ಪ್ರದೇಶ ವಿಶಿಷ್ಟ ಪದಗಳ ಉದಾಹರಣೆ ಮೂಲಕ ಅಡಿ ಟಿಪ್ಪಣಿ ಹೇಗೆ ಕೆಲವು ಸಂದರ್ಭಗಳಲ್ಲಿ ಅನಿವಾರ್ಯ ವಾಗುತ್ತದೆಂಬುದನ್ನು ನೋಡೋಣ. ಉರ್ದುವಿನಲ್ಲಿ ರಖೀಬ್ ಎಂಬ ಒಂದು ಪದವಿದೆ. ಒಬ್ಬಳೇ ಹುಡುಗಿಯನ್ನು ಪ್ರೀತಿಸುವ ಇಬ್ಬರು ಹುಡುಗರು ಪರಸ್ಪರರ ಪಾಲಿಗೆ ರಖೀಬ್ ಎಂದೆನಿಸಿಕೊಳ್ಳುವರು. ಈ ಪರಿಕಲ್ಪನೆಯೇ ಕನ್ನಡದಲ್ಲಿಲ್ಲ. ಹಾಗೆಯೇ ತೆಲುಗಿನಲ್ಲಿ ಚಲಿಕಾಡು ಎಂಬೊಂದು ಪದವಿದೆ. ಇತ್ತ ಕೇವಲ ಗೆಳೆಯನೂ ಅಲ್ಲದ, ಅತ್ತ ನಿಖರವಾಗಿ ಪ್ರೇಮಿಯೂ ಅಲ್ಲದ, ಗೆಳೆಯನಿಗಿಂತ ತುಸು ಹೆಚ್ಚು ಆದರೆ ಪ್ರೇಮಿಗಿಂತ ತುಸು ಕಮ್ಮಿ ಎಂಬರ್ಥದ ಈ ಪದವನ್ನು ಹೇಗೆ ಕನ್ನಡಕ್ಕೆ ಅನುವಾದಿಸುವುದು? ತೆಲುಗಿನಲ್ಲಿ ಯರ್‍ರಗಡ್ಡ ಕೇಸ್ ಅಂತ ಒಂದು ಪದವಿದೆ. ಇದನ್ನು ಯರ್‍ರಗಡ್ಡ ಪ್ರಕರಣ ಎಂದು ಅನುವಾದಿಸಿದರೆ ಆಗುವ ಆಭಾಸವೇನೆಂದು ನೋಡೋಣ. ಹೈದ್ರಾಬಾದು ಹತ್ತಿರದ ಯರ್‍ರಗಡ್ಡದಲ್ಲಿ ಮಾನಸಿಕ ಆಸ್ಪತ್ರೆ ಇದ್ದುದರಿಂದ ಹುಚ್ಚ ಎನ್ನಲು ಈ ಪದ ಬಳಸುವರು. ನಮ್ಮಲ್ಲಿ ಮುಂಚಿನಿಂದಲೂ 'ಯಾಕಪ ಧಾರವಾಡದಿಂದ ಬಂದೀಯ?' ಅನ್ನುತ್ತಿದ್ದರು. ಧಾರವಾಡದ ಮಾನಸಿಕ ಆಸ್ಪತ್ರೆಯ ಜೊತೆಗೆ ಈಗ ಹಲವು ಆಸ್ಪತ್ರೆಗಳಾಗಿವೆ. ಹೊಸಬರಿಗೆ ಧಾರವಾಡ ಎಂದರೆ ಶಿಕ್ಷಣ ಕಾಶಿ, ಸಾಹಿತ್ಯನಗರಿ. ಹಾಗೆಯೇ ಯರ್‍ರಗಡ್ಡ ಜೊತೆಗೇ ಈಗ ಅಲ್ಲೂ ಹಲವಿವೆ. ತೆಲುಗಿನ ಕಬೀರ್ ಸಮ್ಮಾನ ಪುರಸ್ಕೃತ ಏಕೈಕ ಕವಿ ಕೆ. ಶಿವಾರೆಡ್ಡಿಯವರ ಮೋಹನಾ ಓ ಮೋಹನಾ ಸಂಕಲನವನ್ನು ಕೇಂದ್ರ ಸಾಹಿತ್ಯ ಅಕಾಡೆಮಿಗಾಗಿ ಅನುವಾದಿಸುವ ಸಂದರ್ಭದಲ್ಲಿ ಒಂದು ಪದ್ಯದಲ್ಲಿ 'ಪೂಲಪೊಟ್ಲಾಲು' ಎಂಬಪದವು ಎದುರಾಯಿತು. ಗುಂಟೂರು ಜಿಲ್ಲೆಯ ತೆನಾಲಿ ತಾಲೂಕಿನ ಆಸುಪಾಸಿನಲ್ಲಿ ಈ ಪದಬಳಕೆಯಲ್ಲಿದೆ.

*ಒಣಗಿದ ತಾಳೆ ಎಲೆಯ ನಡುವೆ ಮದ್ದಿನಪುಡಿ ಇಟ್ಟು, ಅದನ್ನು ಕವಣೆ ಕಲ್ಲಿನಂತೆ ದಾರವೊಂದರ ತುದಿಯಲ್ಲಿ ಕಟ್ಟಲಾಗುತ್ತದೆ. ಇದನ್ನು ಕೈಯಲ್ಲಿ ಹಿಡಿದು ವೃತ್ತಾಕಾರವಾಗಿ ಗಾಳಿಯಲ್ಲಿ ಜೋರಾಗಿ ತಿರುಗಿಸಿದಾಗ ಪೊಟ್ಟಣದಲ್ಲಿನ ಮದ್ದಿನ ತುಣುಕುಗಳು ಒಂದಕ್ಕೊಂದು ತಾಗಿ, ಜೋರುಗಾಳಿಯ ಸ್ಪರ್ಶದ ಸಹಾಯದೊಂದಿಗೆ ಬೆಳಕಿನ ಸಹಾಯದೊಂದಿಗೆ ಬೆಳಕಿನ ಕಿಡಿಗಳಾಗಿ ಉರಿಯುತ್ತ ಬೀಳುತ್ತವೆ. ಹೀಗೆ ಈ ಹೂ ಪೊಟ್ಟಣದ ಪಟಾಕಿಯು ಅದನ್ನು ತಿರುಗಿಸುತ್ತಿರುವ ಹುಡುಗನ ಮೇಲೆ, ಸುತ್ತ ಬೆಳಕಿನ ಕಿಡಿಗಳನ್ನು ಉದುರಿಸುತ್ತ ತಿರುಗುತ್ತಿರುವ ಒಂದು ಪ್ರಖರ ಬೆಳಕಿನ ಗೆರೆಯ ವೃತ್ತವನ್ನು ಉಂಟು ಮಾಡುತ್ತದೆ. ಪಟಾಕಿ ಕೊಳ್ಳಲಾಗದ ಬಡ ಹುಡುಗರ ಲೋ ಕಾಸ್ಟ್–ನೋ ಕಾಸ್ಟ್ ಪಟಾಕಿಯಿದು.*

ಇದಿಷ್ಟನ್ನು ಅದು ಅರ್ಥವಾಗಿ ಒಳಗೊಂಡಿದೆ. ಪೂಲಪೊಟ್ಲಾಲು ಎಂಬ ಒಂದೇ ಪದ ಆ ಭಾಗದಲ್ಲಿ ಬಾಲ್ಯ ಕಳೆದವರಿಗೆ ಇಷ್ಟೆಲ್ಲವನ್ನು ನೆನಪಿಸಿ ಒಂದು

ಚಿತ್ರವನ್ನು ಮನಸಿಗೆ ತರುತ್ತದೆ. ಕನ್ನಡದಲ್ಲಿ ಇದನ್ನು ಹೇಗೆ ಹೇಳುವುದು? ರಾಗಿಮುದ್ದೆಯನ್ನು ರಾಗಿಬಾಲ್ ಎಂದಾಗ ಹೇಗೆ ಅದು ಸಂಪೂರ್ಣವಲ್ಲವೋ, ಉದ್ಧರಣೆಯನ್ನು ಸ್ಪೂನ್ ಎಂದು ಹೇಳಿಬಿಟ್ಟರೆ ಹೇಗೆ ಅದು ಸಂಪೂರ್ಣ ಅನುವಾದವಾಗುವುದಿಲ್ಲವೋ, ಪಿಂಡವೆಂಬುದು ಹೇಗೆ ಬರಿಯ ಅನ್ನದ ಮುದ್ದೆ ಮಾತ್ರವಲ್ಲವೋ ಹಾಗೆಯೇ ಇದೂನೂ. ಇಂಥ ಸಂದರ್ಭಗಳಲ್ಲಿ ಅಡಿಟಿಪ್ಪಣಿ ಅನಿವಾರ್ಯವಾಗುತ್ತದೆ.

ಅನುವಾದಕ್ಕಾಗಿ ಒಂದು ಕೃತಿಯನ್ನು ಆಯ್ಕೆ ಮಾಡಿಕೊಳ್ಳುವಾಗ ಉದ್ದೇಶಿತ ಭಾಷೆಗೆ ಹೋಲಿಸಿದಾಗ ಆ ನಿರ್ದಿಷ್ಟ ಕೃತಿಯು ವಸ್ತು ದೃಷ್ಟಿಯಿಂದ ಅಥವಾ ಶೈಲಿ/ ನಿರ್ವಹಣೆ ದೃಷ್ಟಿಯಿಂದ ಹೊಸದೇನನ್ನಾದರೂ ಹೇಳುತ್ತಿದೆಯೇ ಎಂಬುದನ್ನು ಅನುವಾದಕರು ಗಮನಿಸುವರು. ಕೆಲವೊಮ್ಮೆ ಉದ್ದೇಶಿತ ಭಾಷೆಯಲ್ಲಿಯೇ ಆ ವಸ್ತು ಮತ್ತು ಶೈಲಿಯಲ್ಲಿ ಅದಕ್ಕಿಂತ ಮುಖ್ಯವಾದುದು ಬಂದಿದ್ದರೆ, ಅದನ್ನು ಸ್ಪಷ್ಟಪಡಿಸಲಿಕ್ಕಾಗಿಯೆಂದೇ, ಆಗಲೂ ಅನುವಾದಕನು ಉದ್ದೇಶಪೂರ್ವಕವಾಗಿ ಆ ಕೃತಿಯನ್ನು ಆಯ್ಕೆ ಮಾಡಿಕೊಂಡಿರುವ ಸಾಧ್ಯತೆಯಿದೆ. ಶೈಲಿಯನ್ನು ತರುವುದೆಂದರೆ ಉದಾಹರಣೆಗೆ ಶಿವಾರೆಡ್ಡಿಯವರ ಹೇಳಿದ್ದನ್ನೇ ಮತ್ತೆ ಮತ್ತೆ ಬೇರೆ ಬೇರೆ ಪದಗಳಲ್ಲಿ ಹೇಳುವ ಪುನರಾವೃತ್ತಿಯ ಶೈಲಿ, ಸಿನಾರೆಯವರ ಸುಲಭಧಾರಣಾನುಕೂಲಿ ಶಿಲ್ಪದ ಸಾಂಗೀತಿಕ ಗುಣ, ಅಜಂತಾ ಅವರ ಬೀಭತ್ಸ ಚಿತ್ರಣಗಳಿಂದ ಇಡಿಕಿರಿದಿರುವ ಸಾಂದ್ರ ಶಿಲ್ಪಗಳನ್ನು ಕನ್ನಡಕ್ಕೆ ತರುವುದು. ಹಾಗೆಯೇ ಕನ್ನಡದ ಪುರಂದರದಾಸರನ್ನು ಅವರ ಸಾಂಗೀತಿಕ ಗುಣದೊಂದಿಗೇ, ವಚನಗಳನ್ನು ಅವುಗಳ ನೇರ ನಿರಾಡಂಬರ ಶೈಲಿಯೊಂದಿಗೇ ಮತ್ತೊಂದು ಭಾಷೆಗೆ ಒಯ್ಯುವುದಾಗಿದೆ. ಅನುವಾದಕನ ಆಯ್ಕೆಯ ಹಿಂದೆ ಸಾಂಸ್ಕೃತಿಕ ರಾಜಕಾರಣವೂ ಒಂದು ಲಕ್ಷ್ಯವಾಗಿ ಕೆಲಸ ಮಾಡಿರುವುದನ್ನು ಗಮನಿಸಬಹುದು. ಜಾಜಿ ದೇವೇಂದ್ರಪ್ಪ ತೆಲುಗಿನ ಕಂಚ ಐಲಯ್ಯನವರ ದೇವರ ರಾಜಕೀಯ ತತ್ವವನ್ನು, ಬಂಜಗೆರೆ ಜಯಪ್ರಕಾಶ್ ತೆಲುಗಿನ ರಂಗನಾಯಕಮ್ಮನವರ ರಾಮಾಯಣ ವಿಷವೃಕ್ಷಂ ಅನ್ನು, ಲಂಕೇಶ್ ಫ್ರೆಂಚಿನ ಬೋದಿಲೇರ್‌ನ ಪಾಪದ ಹೂಗಳನ್ನು ಕನ್ನಡಕ್ಕೆ ತಂದಿದ್ದರ ಹಿನ್ನೆಲೆಯಲ್ಲಿ ಕೆಲಸ ಮಾಡಿರುವ ಮನಃಸ್ಥಿತಿಯನ್ನು ನಾವು ಗ್ರಹಿಸಬೇಕು. ಖುಷ್ವಂತ್ ಸಿಂಗ್‌ರ ದಿಲ್ಲಿ ಕಾದಂಬರಿಯನ್ನು ಅನುವಾದಿಸಿದ ರವಿ ಬೆಳಗೆರೆಯವರೇ ದಶಕಗಳ ನಂತರ ಅದೇ ಲೇಖಕರ ಕಂಪೆನಿ ಆಫ್ ವಿಮೆನ್ ಅನ್ನು ಅನುವಾದಿಸಿದರು. ವೀರಪ್ಪ ಮೊಯ್ಲಿಯವರ ರಾಮಾಯಣ ಮಹಾನ್ವೇಷಣಂ ಅನ್ನು ಸಿ.ಎನ್.ರಾಮಚಂದ್ರನ್ ಅವರು ಇಂಗ್ಲಿಷಿಗೆ ಅನುವಾದಿಸಿದರು. ಸುಜ್ಞಾನಮೂರ್ತಿಯವರು ತೆಲಂಗಾಣ ಹೋರಾಟವೆಂಬ ಹೆಬ್ಬೊತ್ತಿಗೆಯನ್ನು ಕನ್ನಡಕ್ಕೆ ತಂದರೆ, ಸೃಜನ್ ರಾಮಗೋಪಾಲ್ ವರ್ಮರ ನಾ ಇಷ್ಟಂ ಕೃತಿಯನ್ನು ಕನ್ನಡಕ್ಕೆ

ತಂದರು. ಮಾರ್ಕಂಡಪುರಂ ಶ್ರೀನಿವಾಸ್ ಅವರು ಸಮಗ್ರವಾಗಿ ಸಿ.ನಾರಾಯಣ ರೆಡ್ಡಿಯವರ ಕೃತಿಗಳನ್ನು ಕನ್ನಡಕ್ಕೆ ತಂದರು. ರಾಜಾ ಚೆಂಡೂರ್ ಯಂಡಮೂರಿ ವೀರೇಂದ್ರನಾಥರ ಬರೆಹಗಳನ್ನು ಕನ್ನಡಕ್ಕೆ ತಂದರು. ಹೀಗೆ ಅನುವಾದದ ಆಯ್ಕೆಯಲ್ಲಿ ಒಬ್ಬರು ಲೇಖಕನಿಗೆ, ಮತ್ತೊಬ್ಬರು ಪ್ರಕಾರಕ್ಕೆ, ಮಗದೊಬ್ಬರು ಸಿದ್ಧಾಂತಕ್ಕೆ, ಬೇರೊಬ್ಬರು ಸತ್ವಕ್ಕೆ, ಇನ್ನೊಬ್ಬರು ಜನಪ್ರಿಯತೆಗೆ ಆದ್ಯತೆ ನೀಡಿರುವುದು ಕಂಡುಬರುತ್ತದೆ.

ರಸಾನುಭವಕ್ಕಾಗಿನ ಓದಿಗೂ, ಅನುವಾದಕ್ಕಾಗಿನ ಓದಿಗೂ ತುಂಬಾ ವ್ಯತ್ಯಾಸಗಳಿವೆ. ಒಂದು ಕೃತಿಯನ್ನು ರೀಡರ್ ಸಂತೋಷಕ್ಕಾಗಿ ಓದಿದರೆ, ಪ್ರೂಫ್ ರೀಡರ್ ಮುದ್ರಣದೋಷಗಳಿಗಾಗಿ ಓದುತ್ತಾನೆ. ಅದೇ ಟ್ರಾನ್ಸ್‌ಲೇಟರ್ ಅದರ ಅಷ್ಟೂ ಚೆಲುವನ್ನು ಸೂಕ್ಷ್ಮಮಟ್ಟದಲ್ಲಿ ಗ್ರಹಿಸಿ, ಮತ್ತೊಂದು ಭಾಷೆಯ ಓದುಗನಿಗೆ ಅದನ್ನು ಹಾಗೇ ತಲುಪಿಸುವ ಸಂತೋಷದ ಸವಾಲಿಗಾಗಿ ಓದುತ್ತಾನೆ. ಹೀಗೆ ಓದುತ್ತಿರುವಾಗ ಅವನೊಳಗಿನ ಭಾಷಾಶಾಸ್ತ್ರಜ್ಞ, ವಿಮರ್ಶಕ ಮತ್ತು ಸಹೃದಯಿ ಮೂವರೂ ಜಾಗೃತ ಸ್ಥಿತಿಯಲ್ಲಿರುತ್ತಾರೆ. ಒಂದರ್ಥದಲ್ಲಿ ಇದು ರೀಡಿಂಗ್ ಬಿಟ್ವೀನ್ ದ ಲೈನ್ಸ್ ಇದ್ದ ಹಾಗೆ. ನಲ್ಲ ಎಂಬ ಒಂದೇ ಪದ ಕನ್ನಡದಲ್ಲಿ ಇನಿಯನೆಂದೂ, ತೆಲುಗಿನಲ್ಲಿ ಕಪ್ಪು ಎಂದೂ, ತಮಿಳಿನಲ್ಲಿ ಒಳ್ಳೆಯ ಎಂದೂ ಅರ್ಥಗಳನ್ನು ಹೊಂದಿದೆ. ತೆಲುಗಿನ ಸಮಾಧಾನವೆಂದರೆ ಕನ್ನಡದಲ್ಲಿ ಉತ್ತರ. ತೆಲುಗಿನ ಅವಸರ ಎಂದರೆ ಕನ್ನಡದಲ್ಲಿ ಅಗತ್ಯ. ಹೀಗೆ ಎರಡೂ ಭಾಷೆಯಲ್ಲಿ ಬೇರೆ ಬೇರೆ ಅರ್ಥಗಳಿರುವ ಪದಗಳು ಬಂದಾಗ, ಸಹಜವಾಗಿ ದ್ವಿಭಾಷಿಕನಾಗಿರುವ ಅನುವಾದಕನಿಗೆ ಗೊಂದಲವೆನ್ನಿಸುವುದೇ ಇಲ್ಲ. ಇಂಥಲ್ಲಿ ಅವನೊಳಗಿನ ಸಹೃದಯನ ಬದಲಿಗೆ ಭಾಷಾಶಾಸ್ತ್ರಜ್ಞ ಜಾಗೃತಗೊಳ್ಳಬೇಕಾಗುತ್ತದೆ. ಇಲ್ಲದಿದ್ದರೆ 'ಈ ಪ್ರಶ್ನೆಗೆ ನನ್ನಲ್ಲಿ ಸಮಾಧಾನವಿಲ್ಲ', 'ಈಗನಾನಲ್ಲಿಗೆಹೋಗುವ ಅವಸರವಿಲ್ಲ' ಎಂಬವಾಕ್ಯಗಳು ಅವನಿಗೆಸರಿಯಾಗಿ ಕೇಳಿಸುತ್ತವೆ. ಹಾಗಾಗಿ ಅನುವಾದಮುಗಿದಮೇಲೆ ಕೇವಲ ಉದ್ದೇಶಿತಭಾಷೆಯಲ್ಲಿ ಮಾತ್ರ ಪ್ರಭುತ್ವವಿರುವ ಒಬ್ಬ ವಿಮರ್ಶಾಪ್ರಜ್ಞೆಯ ಸಹೃದಯರಿಗೆ ಓದಲು ಕೊಡಬೇಕು. ಆಗ ಈ ವಾಕ್ಯಗಳು ಕ್ರಮವಾಗಿ 'ಈ ಪ್ರಶ್ನೆಗೆ ನನ್ನಲ್ಲಿ ಉತ್ತರವಿಲ್ಲ', 'ಈಗನಾನಲ್ಲಿಗೆಹೋಗುವ ಅಗತ್ಯವಿಲ್ಲ' ಎಂದುಪರಿಷ್ಕರಣೆಗೊಳಗಾಗುತ್ತವೆ.

ಎಷ್ಟೋ ಸಲ ಒಂದು ಕೃತಿಯ ಆಶಯ ಮತ್ತು ಧೋರಣೆಗಳು ತುಂಬಾ ಎತ್ತರದವಿದ್ದು ಅದನ್ನು ವಿವರಿಸಲು ಲೇಖಕ ಬಳಸಿದ ಭಾಷೆ ಸಂಕೀರ್ಣವಾಗಿದ್ದು ಉದ್ದೇಶಿತ ಅರ್ಥವನ್ನು ಓದುಗನಿಗೆ ದಾಟಿಸುವಲ್ಲಿ ಭಾಷೆಯೇ ಒಂದು ತೊಡಕಾಗಿರುತ್ತದೆ. ಇಂಥಲ್ಲಿ ಅನುವಾದಕನು ಮೂಲ ಕೃತಿಯ ಭಾಷೆಯ ವಿಚಾರದಲ್ಲಿ ಹದ ಮೀರದ ಸ್ವಾತಂತ್ರ್ಯವನ್ನು ವಹಿಸಿಕೊಂಡು ಬ್ಯೂಟಿಫಿಕೇಶನ್ ಮಾಡಬೇಕಾಗುತ್ತದೆ. ಅನಗತ್ಯವಾಗಿ ಲಂಬಿಸಿ ಹೇಳಿದ್ದನ್ನು ಸಾಂದ್ರಗೊಳಿಸಿ ಹೇಳಬೇಕಾಗುತ್ತದೆ. ಇಷ್ಟೆಲ್ಲ

ಮಾಡಿದರೂ ಅನುವಾದಕನಿಗೆ ತಾನು ಮೂಲ ಲೇಖಕನಿಗಿಂತ ದೊಡ್ಡವನಲ್ಲ ಎಂಬ ಸೌಜನ್ಯ ಅಗತ್ಯವಾದುದು. ಅನುವಾದದ ಸಾಫಲ್ಯದ ಪರಿಶೀಲನೆಯ ವಿಚಾರಕ್ಕೆ ಬಂದಾಗಲೂ ಒಂದು ಗೊಂದಲ ನಮ್ಮಲ್ಲಿ ಉಳಿದಿದೆ. ಅದೇನೆಂದರೆ ಮೂಲ ಭಾಷೆಯಲ್ಲಿ ದೊಡ್ಡ ಹೆಸರು ಮಾಡಿರುವ ಖ್ಯಾತ ಲೇಖಕರ ಕೃತಿಯು ಅನುವಾದವಾಗಿದ್ದರೆ ಅದು ಉತ್ತಮ ಅನುವಾದವೆಂದು ಪತ್ರಿಕಾ ವಿಮರ್ಶಕರು ಮುಂಗಾಲುಪುಟಿಗಿಯಲ್ಲಿ ಷರಾ ಬರೆಯುವುದೂ, ಟಾಪ್‌ಟೆನ್ ಪಟ್ಟಿಯಲ್ಲಿ ಸ್ಥಾನ ಪಡೆಯುವುದೂ ನಡೆದಿರುತ್ತದೆ. ಒಂದು ಉತ್ತಮ ಅನುವಾದ ಕೃತಿಯು ಮೂಲ ಕೃತಿಗೆ ಅದು ತೋರಿರುವ ಅನುಸಾರಿಕೆ, ಮೂಲ ಲೇಖಕರ ಆಶಯ, ಧೋರಣೆ, ಶೈಲಿಗಳನ್ನು ತರುವಲ್ಲಿ ಅನುವಾದಕನು ತೋರಿರುವ ಸೂಕ್ಷ್ಮತೆ, ಮೂಲಭಾಷೆಯ ಸಂದರ್ಭದಲ್ಲಿಟ್ಟು ಅದರ ಸ್ಥಾನ ನಿಷ್ಕರ್ಷೆ ಮಾಡಿರುವಂಥ ಅಧ್ಯಯನಪೂರ್ಣ ಟಿಪ್ಪಣಿ, ಆಯ್ಕೆಯ ಸಮಂಜಸತೆ ಮತ್ತು ಉದ್ದೇಶಿತ ಭಾಷೆಯಲ್ಲಿ ಅದು ತರಲು ಸಾಧ್ಯವಾಗಿರುವ ಮೂಲ ಕೃತಿಯ ಬೆಡಗು ಮುಂತಾದವುಗಳ ಮೂಲಕ ಪರಿಶೀಲಿಸುವ ವಿಮರ್ಶೆಯ ಅಗತ್ಯವಿದೆ.

ಮೂಲಾನುಸಾರಿಯಾಗಿದೆಯೆಂಬ ಕಾರಣಕ್ಕೆ ಫೋರ್ಜರಿ ಸಹಿ ಮಾಡುವವರನ್ನು, ಎರಡು ಭಾಷೆಯಲ್ಲಿ ಅಸ್ಖಲಿತವಾಗಿ ಮಾತಾಡುತ್ತಾರೆಂಬ ಕಾರಣಕ್ಕಾಗಿ ಪ್ರವಾಸೀ ತಾಣಗಳಲ್ಲಿನ ಗೈಡು ಮತ್ತು ವ್ಯಾಪಾರಿಗಳನ್ನು ಅನುವಾದಕರೆನ್ನಲಾಗದು. ಅನುವಾದವೆನ್ನುವುದು ಇವೆರಡನ್ನೂ ಮೀರಿದ ಪರ ಭಾಷಾ ಗೌರವದ ಒಂದು ಶ್ರೇಷ್ಠ ಮನೋಧರ್ಮ. ಶ್ರೇಷ್ಠವೇಕೆಂದರೆ ಬೇರೊಂದು ಭಾಷೆಯಲ್ಲಿ ತಾನು ಓದಿ ಅನುಭವಿಸಿದ ಅತ್ಯುತ್ತಮವಾದ ವಿಚಾರವೊಂದು ತನ್ನ ಭಾಷಿಕರಿಗೂ ಸಿಗಲಿ ಎಂಬ ವಿಶಾಲ ಮನೋಭಾವದಲ್ಲಿ ಮೂಡಿದ ಅನುಸೃಷ್ಟಿಯ ಕೆಲಸವಿದು. ಇದರ ಲಾಭ ಎಲ್ಲರಿಗೆ ಬೇಕು. ಆದರೆ ಅದನ್ನು ಮಾಡುವ ಕಷ್ಟ ಯಾರಿಗೂ ಬೇಡ. ನೆರೂಡ, ರೂಮಿ, ಬ್ಲೂಮ್, ದಾಸ್ತೋವ್‌ಸ್ಕಿ ನಮಗೆ ಬೇಕು, ಅದೂ ನಮ್ಮ ಭಾಷೆಯಲ್ಲೇ. ಆದರೆ ಅವರನ್ನು ಉಲ್ಲೇಖಿಸುವಾಗ ಅವರ ಹೆಸರನ್ನಷ್ಟೇ ಹೇಳುತ್ತೇವೆಯೇ ಹೊರತು ಸೌಜನ್ಯಕ್ಕೂ ಅನುವಾದಕನ ಹೆಸರು ತೆಗೆದುಕೊಳ್ಳುವುದಿಲ್ಲ. ಮೇಲಿಂದ ಅನುವಾದಕರಿಗೆ ಸಲಹೆ ಬೇರೆ ಕೊಡ್ತೇವೆ– 'ಏನಾದರೂ ಸ್ವಂತದ್ದು ಬರೀರಿ. ಇವೆಲ್ಲ ನಿಲ್ಲಲ್ಲ'! ಈ ಭಾರತೀಯ ಮನಃಸ್ಥಿತಿ ಮೊದಲು ಬದಲಾಗಬೇಕು. ಇಲ್ಲಿ ಇಂದಿಗೂ ಅನುವಾದವು ಎರಡನೆ ದರ್ಜೆಯ ಕೆಲಸವಾಗಿ ಪರಿಗಣಿತವಾಗಿರುವುದು ದುರಂತ. ಭಾರತದ ದೊಡ್ಡ ಸಾಹಿತ್ಯಿಕ ಸಂಸ್ಥೆಯಾದ ಕೇಂದ್ರ ಸಾಹಿತ್ಯ ಅಕಾಡೆಮಿಯು ಸೃಜನಶೀಲ ಕೃತಿಗೆ ಕೊಡಮಾಡುವ ವಾರ್ಷಿಕ ಪ್ರಶಸ್ತಿಯ ಮೊತ್ತ ಒಂದು ಲಕ್ಷ ರೂಪಾಯಿಯಾದರೆ ಭಾಷಾಂತರಕ್ಕಾಗಿ ಕೊಡಮಾಡುವ ವಾರ್ಷಿಕ ಪ್ರಶಸ್ತಿಯ ಮೊತ್ತ ಐವತ್ತು ಸಾವಿರ

ರೂಪಾಯಿಗಳು ಮಾತ್ರ. ಸರಿ ಸುಮಾರು ಎಂಬತ್ತು ಅಖಿಲ ಭಾರತ ಸಮ್ಮೇಳನಗಳಾಗಿವೆ ಒಬ್ಬೇ ಒಬ್ಬ ಗಂಭೀರ ಅನುವಾದಕನಿಗೆ ಅಧ್ಯಕ್ಷತೆಯ ಭಾಗ್ಯವಿಲ್ಲ. ಪತ್ರಕರ್ತರು, ಸಂಘಟಕರು ಕೂಡ ಆ ಸ್ಥಾನ ಅಲಂಕರಿಸಿಯಾಗಿದೆ. ಹೋಗಲಿ ಎಂದರೆ ಯಾವ ಸಮ್ಮೇಳನದಲ್ಲೂ ಅದಕ್ಕೆಂದೇ ಒಂದು ಪ್ರತ್ಯೇಕ ಗೋಷ್ಠಿಯಿಲ್ಲ. ನಮ್ಮ ಕನ್ನಡ ವಿಮರ್ಶೆಯು ಕೂಡ ಅನುವಾದದ ವಿಮರ್ಶೆಗಾಗಿ ಬೇಕಾದ ವಿಮರ್ಶಾ ಪರಿಕರಗಳನ್ನು ರೂಪಿಸಲೇ ಇಲ್ಲ. ಮೈಸೂರು ವಿ. ಸುಬ್ರಹ್ಮಣ್ಯರಂಥ ಬೆರಳೆಣಿಕೆಯ ಜನರನ್ನು ಬಿಟ್ಟರೆ ಸಂಗೀತ ವಿಮರ್ಶೆಯು ಹೇಗೆ 'ಗಾನಸುಧೆಯಲ್ಲಿ ತೇಲಿಸಿದರು, ನಾದಪ್ರವಾಹದಲ್ಲಿ ಮುಳುಗಿಸಿದರು' ಎಂಬ ಪದಗಳಾಚೆಗೆ ಒಂದು ಪ್ರತ್ಯೇಕ ಜ್ಞಾನಶಿಸ್ತಾಗಿ ಬೆಳೆಯಲಿಲ್ಲವೋ ಹಾಗೆ ಅನುವಾದದ ವಿಮರ್ಶೆಯೂ ಒಂದು ಪ್ರತ್ಯೇಕ ಜ್ಞಾನಶಿಸ್ತಾಗಿ ಬೆಳೆಯಲಿಲ್ಲ. ಅದೇನಿದ್ದರೂ ಮೂಲ ಕೃತಿಯ ಸಾರವನ್ನಿಟ್ಟುಕೊಂಡು ವಸ್ತುವಿಮರ್ಶೆಯನ್ನು ಮಾಡಿ, ಕೊನೆಯಲ್ಲಿ ಒಂದು ಸಾಲು 'ಅನುವಾದ ಉತ್ತಮವಾಗಿ ಮೂಡಿ ಬಂದಿದೆ, ಅನುವಾದವು ಸಫಲವಾಗಿದೆ, ಕನ್ನಡದ್ದೇ ಎನಿಸುವಷ್ಟು ಸಹಜವಾಗಿದೆ' ಇತ್ಯಾದಿ ಷರಾ ಬರೆದು ಕೈ ತೊಳೆದುಕೊಳ್ಳುವಷ್ಟಕ್ಕೇ ಸೀಮಿತವಾಗಿದೆ. ವಿಮರ್ಶೆಯ ಮಾತು ಹಾಗಿರಲಿ, ಸಹೃದಯಿ ಓದುಗರು, ಮಾಧ್ಯಮಗಳು ಮತ್ತು ಸಮಕಾಲೀನ ಲೇಖಕರು ಕೂಡ ಮೂಲ ಲೇಖಕ ಹೀಗೆ ಬರೆದಿದ್ದಾನೆ, ಹಾಗೆ ಬರೆದಿದ್ದಾನೆ ಅಂತ ಕೋಟ್‌ಗಳನ್ನು ಉದುರಿಸುತ್ತಾರೆಯಾಗಲಿ ಅದನ್ನು ಅನುವಾದಿಸಿದ ಅನುವಾದಕನ ಪ್ರಸ್ತಾಪವನ್ನೂ ಮಾಡುವುದಿಲ್ಲ. ಉದಾಹರಣೆಗೆ ಹೇಳುವುದಾದರೆ ಒರ್ಹಾನ್ ಪಾಮುಕ್ ಹೀಗಂತಾನೆ ಅನ್ನುವಾಗ ನಮಗೆ ಓಎಲ್‌ಎನ್ ಅವರ ನೆನಪಾಗುವುದಿಲ್ಲ. ಬೋದಿಲೇರ್ ಬಗ್ಗೆ ಮಾತಾಡುವಾಗ ಲಂಕೇಶ್‌ರನ್ನು ಹೇಳುವುದಿಲ್ಲ, ಟ್ಯಾಗೋರರ ಗೀತಾಂಜಲಿಯನ್ನು ಉದ್ಧರಿಸುವಾಗ ನವೀನ್ ಹಳೆಮನೆಯ ಹೆಸರೇ ತೆಗೆಯುವುದಿಲ್ಲ. ಇಂಥ ನೋವುಗಳು ಹಲವು ಇರುವ ಕಾರಣಕ್ಕೇ ಮಲಯಾಳಮ್ಮಿನಿಂದ ಕನ್ನಡಕ್ಕೆ ಸಾಕಷ್ಟು ಅನುವಾದಿಸಿದ ಕೆ.ಕೆ. ಗಂಗಾಧರನ್ ಇನ್ನು ಅನುವಾದದ ಸಹವಾಸ ಸಾಕು ಎಂದು ನೊಂದು ನುಡಿಯುತ್ತಾರೆ (ನೋಡಿ: ಮಯೂರ, ಜನವರಿ, 2018). ತಿಳಿವಳಿಕೆ ಇರುವ ಕಡೆ ಅನುವಾದಕನೂ ಲೇಖಕನಷ್ಟೇ ಪ್ರಾಮುಖ್ಯ ಪಡೆಯುತ್ತಾನೆ. ಭಾರತೀಯ ಮನಃಸ್ಥಿತಿ ಮಾತ್ರ ಈ ವಿಚಾರವಾಗಿ ಬದಲಾಗಬೇಕಾದುದು ತುಂಬಾ ಅಗತ್ಯ ಇದೆ.

❑

– **ಚಿದಾನಂದ ಸಾಲಿ**
ಪ್ಲಾಟ್ ಸಂ: 5, ಬಾಲಾಜಿ ನಗರ
ರಾಜಮಾತಾ ದೇವಾಲಯದ ಬಳಿ
ಆಶಾಪುರ ರಸ್ತೆ, ರಾಯಚೂರು – 584101

# ಅನುವಾದ ಕ್ಷೇತ್ರದ ಅನುಭವ

*- ಡಾ. ಜಯಂತಿ ಮನೋಹರ್*

**ಒಂ**ದು ಭಾಷೆಯಿಂದ ಇನ್ನೊಂದು ಭಾಷೆಗೆ ತರುವುದು ಭಾಷಾಂತರವಾದರೆ ಅನುವಾದವನ್ನು ಮೂಲ ಪಠ್ಯವನ್ನು ಅನುಸರಿಸಿಕೊಂಡು ಹೋಗುವುದು ಎನ್ನಬಹುದು. ಈ ಎರಡೂ ಪದಗಳನ್ನು ಒಂದೇ ಅರ್ಥದಲ್ಲಿ ಉಪಯೋಗಿಸುತ್ತಿದ್ದೇವಾದರೂ, ಅನುವಾದ ಎನ್ನುವಾಗ ಪದಶಃ ಅರ್ಥಕ್ಕಿಂತಲೂ ಮೂಲದ ಆಶಯ ಪ್ರಧಾನವಾಗಿರುತ್ತದೆ. ಇದನ್ನು ಆಂಗ್ಲ ಭಾಷೆಯಲ್ಲಿ rendering ಎಂದು ಹೇಳುವುದನ್ನು ಕಾಣುತ್ತೇವೆ. ಮೂಲಕ್ಕೆ ನಿಷ್ಠವಾಗಿರಬೇಕೆಂದುಕೊಂಡು, ಪದಕೋಶದಲ್ಲಿರುವ ಪದಗಳನ್ನೇ ತೆಗೆದು ಹಾಕಿ ಮಾಡಿರುವ ಅನುವಾದಗಳಲ್ಲಿ ಆಭಾಸಗಳು ಸೃಷ್ಟಿಯಾಗಿ ಬಿಡುತ್ತವೆ.

ಪದಶಃ ಅರ್ಥ ತಿಳಿಸುವ ಹಾಗೂ ಮೂಲದ ಆಶಯದೊಂದಿಗೆ ಮಾಡುವ ಅನುವಾದಗಳನ್ನು ಸುಮಾರು ನಾಲಕ್ಕೂವರೆ ದಶಕಗಳಿಂದಲೂ ನಾನು ಮಾಡುತ್ತಿದ್ದೇನೆ. ಇದು ವಯಸ್ಕರಿಗೆ ಕನ್ನಡ ಭಾಷೆಯನ್ನು ಕ್ಷಿಪ್ರ ವಿಧಾನದಲ್ಲಿ ಕಲಿಸುವುದರೊಂದಿಗೆ ಪ್ರಾರಂಭವಾಗಿ ನಾನು ಭಾರತೀಯ ಸ್ಟೇಟ್ ಬ್ಯಾಂಕಿನಲ್ಲಿ ಕೆಲಸ ಮಾಡುವಾಗಲೂ ಮುಂದುವರೆಯಿತು. ನನ್ನ ವಿದ್ಯಾರ್ಥಿಗಳಲ್ಲಿ, ತಮ್ಮ ದೇಶಗಳಲ್ಲಿ ಇಂಡಾಲಜಿ ವಿಭಾಗದಲ್ಲಿ ಅಧ್ಯಯನ ಮಾಡಿ ಭಾರತಕ್ಕೆ ಬರುವ ವಿದೇಶೀಯರು ಸೇರಿದ್ದಾರೆ. ವಿದ್ಯಾರ್ಥಿಗಳಿಗೆ ಅವರವರ ವಿಶೇಷ ಆಸಕ್ತಿಗನುಗುಣವಾಗಿ ಸಿದ್ಧ ಪಡಿಸುವ ಪಾಠಗಳ ಮೂಲಕ ಭಾಷೆಯನ್ನು ಕಲಿಸುವುದರಲ್ಲಿ ಅನುವಾದದ ಅಗತ್ಯವಿರುತ್ತದೆ.

ನನ್ನ ವಿದ್ಯಾರ್ಥಿನಿಯಾಗಿದ್ದ ಜರ್ಮನಿಯ ಪ್ರಸಿದ್ಧ ಸಂಶೋಧಕಿ. ಪ್ರೊ. ಹೈಡ್ರೂನ್ ಬ್ರುಕ್ನರ್ ಮೂಲಕ 1983ರಲ್ಲಿ ಕನ್ನಡ ಜಾನಪದ ಹಾಡುಗಳನ್ನು ಜರ್ಮನಿಯ ಬರ್ಲಿನ್ ನಗರದಲ್ಲಿರುವ 'ಫ್ರೈ ವಿಶ್ವವಿದ್ಯಾಲ'ಯಕ್ಕಾಗಿ ಆಂಗ್ಲ

ಭಾಷೆಗೆ ಅನುವಾದ ಮಾಡುವ ಕಾರ್ಯ ದೊರಕಿತು. ಆ ಸಮಯದಲ್ಲಿ, ಹಾಸನ ಹಾಗೂ ಹೊಸಪೇಟೆಗಳಲ್ಲಿ ಪ್ರಚಲಿತವಿದ್ದ 150 ಹಾಡುಗಳ ಧ್ವನಿ ಮುದ್ರಣವನ್ನು ಅವರು ಮಾಡಿಕೊಂಡಿದ್ದರು. ಆ ಹಾಡುಗಳ ಪದಶಃ ಅರ್ಥ, ಸಾರಾಂಶ ಹಾಗೂ ಅದರ ಹಿನ್ನಲೆಗಳನ್ನು ತಿಳಿಸಬೇಕಿತ್ತು. ಅವರು ಹೇಳಿದಂತೆ, ಪುರಂಧರ ದಾಸರ ಕೃತಿಗಳ ಅಧ್ಯಯನಕ್ಕಾಗಿ ಆ ಪ್ರಾಂತ್ಯದ ಹಾಡುಗಳಲ್ಲಿರುವ ನಾಮಪದ – ಕ್ರಿಯಾಪದಗಳ ವಚನ – ವಿಭಕ್ತಿ ಪ್ರತ್ಯಯಗಳ ಯಥಾವತ್ತಾದ ಪೂರ್ಣ ವಿವರಗಳು ಅಗತ್ಯವಾಗಿತ್ತು. ಅವರಿಗೆ ಸಹಾಯಕರಾಗಿದ್ದ ಸ್ಥಳೀಯರು ಒಪ್ಪಿಕೊಂಡಿದ್ದಂತೆ, ಹಾಡುಗಳನ್ನು ಬರೆದುಕೊಟ್ಟಿರಲಿಲ್ಲ. ಹಾಗಾಗಿ, ಮೊದಲು, ಧ್ವನಿಸುರಳಿಯಲ್ಲಿದ್ದ ಹಾಡನ್ನು ಹಲವು ಬಾರಿ ಹಾಕಿ, ಕೇಳಿ ಬರೆದುಕೊಳ್ಳುವುದರಿಂದ ನನ್ನ ಕೆಲಸ ಪ್ರಾರಂಭವಾಯಿತು. ಅದು ನಿಜಕ್ಕೂ ಶ್ರಮದಾಯಕವಾದ ಮತ್ತು ಬಹಳ ಸಮಯ ತೆಗೆದುಕೊಂಡ ಕಾರ್ಯ.

ಉದಾಹರಣೆಗೆ, ಕಿತ್ತೂರು ಸಂಸ್ಥಾನದ ಅವಸಾನವನ್ನು ಹೇಳುವ ಗೀಗೀ ಪದದ ಮೊದಲ ಚರಣ ನೋಡಬಹುದು.

This poem depicts the sad end of glorious Kittur kingdom (province) due to the conspiracy hatched by wicked Mallappa Shetty. First stanza tells about his letter to British rulers informing them about the adoption of a baby boy by the queen aided by well wishers when the king Shivalinga died without heir.

| | | |
|---|---|---|
| ಕಿತ್ತೂರ | ಸಂಸ್ಥಾನದೋಳು | ರಾಜ್ಯಭಾರ |
| ಮಾಡುವಂಥ | | |
| of Kittur | in province (kingdom) | ruling |
| one who does (king) | | |
| ಶಿವಲಿಂಗ | ರುದ್ರ ಮರಣ | ಹೊಂದಿದನ |
| Shivalinga (king) | death | attained |
| ಒಟ್ಟುಗೂಡಿ | ದತ್ತಕ್ಕೆ | ಮಾಡಿದರ |
| joined together (with queen) | adoption | did (they) |
| ಚೆನ್ನೂರ | ಮಲ್ಲಪ್ಪಶೆಟ್ಟಿ | ಕಂಪನಿ – |
| ಸರ್ಕಾರಕ್ಕೆ | | |

| | | |
|---|---|---|
| of Chennuru (city) | Mallappashetty | to |
| *company government | | |
| ಒಳಗಿಂದೊಳಗೆ | ಮಾಡಿದಾನೆ | ಪಿತೂರ |
| secretely | has done | conspiracy |
| ಬರೆದ | ಪತ್ತರ | |
| wrote | letter | |

ಸಂಸ್ಕೃತ ಭಾಷೆಯಿಂದ ಕನ್ನಡ ಹಾಗೂ ಆಂಗ್ಲ ಭಾಷೆಗೆ ಮತ್ತು ಆಂಗ್ಲ ಭಾಷೆಯಿಂದ ಕನ್ನಡಕ್ಕೆ ವೇದ – ವೇದಾಂತಗಳ ಅನುವಾದ ನಿಜಕ್ಕೂ ಒಂದು ಸವಾಲು. ಭಾರತೀಯ ತತ್ತ್ವ ಶಾಸ್ತ್ರ ಹಾಗೂ ವಿಶಿಷ್ಟ ಸಂಸ್ಕೃತಿಗೆ ಸಂಬಂಧಿಸಿದ ಪದಗಳಿಗೆ ಪೂರ್ಣ ಸಂವಾದಿಯಾಗಿರುವ ಆಂಗ್ಲ ಭಾಷೆಯ ಪದಗಳು ಹಲವು ಬಾರಿ ಸಿಗುವುದಿಲ್ಲ. ಆದಾಗ್ಯೂ ಅತ್ಯಂತ ನಿಕಟವಾದ ಸಂವಾದಿ ಪದಗಳನ್ನು ಹುಡುಕಬೇಕಾಗುತ್ತದೆ. ಕೆಲವೊಮ್ಮೆ ಸಂಸ್ಕೃತ ಅಥವಾ ಕನ್ನಡದ ಅಂತಹ ಒಂದು ಪದಕ್ಕೆ ಆಂಗ್ಲದಲ್ಲಿ ಎರಡು ಪದಗಳನ್ನು ಬಳಸುವುದು ಅನಿವಾರ್ಯವಾಗುತ್ತದೆ. ಅದರಲ್ಲಿಯೂ ಮೂಲ ಪಠ್ಯದ ಹಿನ್ನಲೆಯನ್ನು ಅರಿಯದೆ, ಶಬ್ದಕೋಶದ ಸಹಾಯದಿಂದ ಮೇಲುಸ್ತರದಲ್ಲಿ ಮಾಡುವ ಅನುವಾದ ಅನರ್ಥಕಾರಿಯಾಗಿಬಿಡುತ್ತದೆ. ಈ ದಿಸೆಯಲ್ಲಿ, ಭಾರತೀಯ ತತ್ತ್ವ ಚಿಂತನೆಗಳ ಹರವನ್ನು ಪೂರ್ಣವಾಗಿ ಅರಿಯದೆ, ವಿದೇಶೀಯರು ಮಾಡಿರುವ ವೇದ ಮಂತ್ರಗಳ ಅನುವಾದದಿಂದಾಗಿ ಸಾಂಸ್ಕೃತಿಕವಾಗಿ – ಚಾರಿತ್ರಿಕವಾಗಿ ಆಗಿರುವ ವಿಪರೀತ ಪರಿಣಾಮಗಳನ್ನು ಗಮನಿಸಬಹುದು.

## ಪಾಶ್ಚಿಮಾತ್ಯ ಹಾಗೂ ಯೂರೋಪಿನ ವೇದಾಭ್ಯಾಸಿಗಳು ಮಾಡಿರುವ ಅಪ ವ್ಯಾಖ್ಯಾನಗಳು

'ಸಾಯಣ ಭಾಷ್ಯ' ವನ್ನು ನೆಪಮಾತ್ರಕ್ಕೆ ಆಧರಿಸಿ, 19–20ನೇ ಶತಮಾನಗಳಲ್ಲಿ, ಪಾಶ್ಚಿಮಾತ್ಯ ಹಾಗೂ ಯೂರೋಪಿನ ವೇದಾಭ್ಯಾಸಿಗಳು ತಮಗೆ ತೋರಿದಂತಹ ಅರ್ಥಗಳನ್ನು ಸೇರಿಸಿ ಮಾಡಿರುವ ವೇದ ಮಂತ್ರಗಳ ಭಾಷಾಂತರಗಳು ಹಲವಾರು ಬಾರಿ ವಿಪರೀತವಾದ ಭಾವವನ್ನು ಕೊಡುತ್ತದೆ. ತಮ್ಮ ದೇಶಗಳ ಚರಿತ್ರೆಯಲ್ಲಿ ಕಂಡಂತಹ ಜನಾಂಗೀಯ ದ್ವೇಷವನ್ನು ವೇದಮಂತ್ರಗಳಲ್ಲಿ

* Company government refers to the British government because it entered India as a marketing company. Later gained political power and brought a rule prohibiting the right of adopting a child when a king dies without progeny.

ಹುಡುಕುತ್ತಾ ಹೋದ ಈ ವಿದ್ವಾಂಸರು, ಅಂದು ಪ್ರಚಲಿತವಾಗಿದ್ದ ಅಸಮರ್ಪಕ ಭಾಷಾಶಾಸ್ತ್ರವನ್ನು ಮಾತ್ರ ಆಧರಿಸಿ ಆರ್ಯ – ದ್ರಾವಿಡ ಎಂಬ ಭೇದವನ್ನು ಹುಟ್ಟುಹಾಕಿದರು. ವೇದ ಮಂತ್ರಗಳಲ್ಲಿ ಇಂದ್ರ, ವೃತ್ರನ ವಧೆ ಮಾಡಿದ ಎಂದಿರುವುದನ್ನು ನೋಡಿ. ವೃತ್ರಾಸುರನನ್ನು ದ್ರಾವಿಡ ರಾಜ ಎನ್ನುತ್ತಾ ಆರ್ಯರು ಅವನ ಮೇಲೆ ದೌರ್ಜನ್ಯ ಎಸಗಿದ್ದಾರೆ ಎಂದಿದ್ದಾರೆ. ಆದರೆ, ವೃತ್ರಾಸುರನನ್ನು ಇಂದ್ರ 99 ಬಾರಿ ವಧೆಮಾಡಿದ ಎಂದಿರುವ ಮಂತ್ರಗಳು ಅವರಿಗೆ ಕಂಡಿಲ್ಲ. ಮಾನವ ಶರೀರಿಧಾರಿಯಾದವನನ್ನು ಯಾರೇ ಆಗಲೀ ಅಷ್ಟು ಬಾರಿ ವಧೆ ಮಾಡಲಾಗುವುದೇ? ಅದರೊಂದಿಗೆ ವೃತ್ರಾಸುರನನ್ನು ಸರಸ್ವತಿಯೂ ವಧೆ ಮಾಡುತ್ತಾಳೆ (ವೃತ್ರಘ್ನಿ) ಎಂದಿರುವುದನ್ನು ಅವರಿಗೆ ಅರ್ಥೈಸಿಕೊಳ್ಳಲಾಗಲಿಲ್ಲ. ಭಗವಂತನ ವೈಶ್ವಿಕ ದೈವೀ ಮನಸ್ಸನ್ನು ಪ್ರತಿನಿಧಿಸುವ ಇಂದ್ರ ಹಾಗೂ ಜ್ಞಾನ ದೇವಿಯಾದ ಸರಸ್ವತಿಯರು ಮಾನವರ ಶರೀರದಲ್ಲಿರುವ ವೃತ್ರನನ್ನು ಅಂದರೆ ದುಷ್ಟ ಭಾವಗಳನ್ನು ಜ್ಞಾನದಿಂದ ಹೊಡೆದೋಡಿಸುತ್ತಾರೆ ಎನ್ನುವುದು ಆ ಮಂತ್ರಗಳ ಆಂತರ್ಯ. ಇದು ಮಹಾಭಾರತದಲ್ಲಿಯೂ ಅನುರಣಿಸಿದೆ (ಅಶ್ವಮೇಧ ಪರ್ವ 11–7–20). ಅಷ್ಟೇ ಅಲ್ಲದೆ, ಅವರಲ್ಲಿ ಬಹುತೇಕ ಜನರು ಭಾರತೀಯ ಜ್ಞಾನ ಪರಂಪರೆಯನ್ನು ಕೀಳಾಗಿ ತೋರಿಸಲೆಂದೇ ವೇದಾಧ್ಯಯನಕ್ಕೆ ತೊಡಗಿದ್ದರ ದಾಖಲೆಗಳು ಸಿಗುತ್ತವೆ. ಉದಾಹರಣೆಗಾಗಿ ಕೆಳಗಿನ ಮಂತ್ರಭಾಗವನ್ನು ನೋಡಬಹುದು.

'ಇನ್ದ್ರೋ ... ವಿ ಗೋಭಿರದ್ರಿಮ್ಮೈರಯತ್॥ ಋ.1.7.3.' ಎಂಬ ಮಂತ್ರಭಾಗದಲ್ಲಿ ಮೇಲಿನ ಸ್ತರದಲ್ಲಿ ಕಾಣುವ ಅರ್ಥ – 'ಇಂದ್ರನು, ಹಸುಗಳಿಂದ (ಗೋಭಿಃ) ಬೆಟ್ಟವನ್ನು (ಅದ್ರಿಂ) ಒಡೆದನು (ವಿ+ಐರಯತ್)'. ಈ ಮಂತ್ರಭಾಗವನ್ನು ಶಬ್ದಕೋಶದ ಸಹಾಯದಿಂದ ಭಾಷಾಂತರ ಮಾಡಿರುವ ಗ್ರಿಫಿತ್ ಮುಂತಾದ ಹೆಸರಾಂತ ಪಾಶ್ಚಿಮಾತ್ಯ ವೇದಾಭ್ಯಾಸಿಗಳು, 'ವೇದಕಾಲೀನ ಋಷಿಗಳಿಗೆ ಸರಿಯಾದ ಜ್ಞಾನವಿರಲಿಲ್ಲ, ಕುರುಬರು ಆಡುವ ಅರ್ಥಹೀನ ಮಾತಿನಂತೆ ಅವರ ಮಂತ್ರಗಳಿವೆ' ಎಂದಿದ್ದಾರೆ. ಸಾಂಕೇತಿಕ ಭಾಷೆಯಲ್ಲಿ ವ್ಯಕ್ತವಾಗಿರುವ ಇಂತಹ ಹಲವಾರು ವೇದಮಂತ್ರಗಳ ಆಂತರ್ಯವನ್ನು ಈ ವ್ಯಾಖ್ಯಾನಕಾರರು ತಲುಪಲಾಗಲಿಲ್ಲ.

ಈಗ, ಮೇಲ್ಕಂಡ ಮಂತ್ರಭಾಗದ ಆಂತರ್ಯದಲ್ಲಿರುವ ಸಾಂಕೇತಿಕ ಅರ್ಥವನ್ನು ನೋಡೋಣ. 'ಗೋ' ಶಬ್ದಕ್ಕಿರುವ ಸೂರ್ಯರಶ್ಮಿ ಎನ್ನುವ ಅರ್ಥವನ್ನು ಇಲ್ಲಿ ತೆಗೆದುಕೊಳ್ಳಬೇಕಾಗುತ್ತದೆ. ಸೂರ್ಯರಶ್ಮಿಯು ಜ್ಞಾನವನ್ನು ಹಾಗೂ ಬೆಟ್ಟವು ಅಜ್ಞಾನವನ್ನು ಸಂಕೇತಿಸುತ್ತದೆ. ಹಾಗಾಗಿ, ಇಲ್ಲಿ, 'ಜ್ಞಾನದಿಂದ ಅಜ್ಞಾನವನ್ನು ಹೋಗಲಾಡಿಸಿದನು' ಎನ್ನುವ ಸುಸಂಗತವಾದ ಅರ್ಥ ದೊರಕುತ್ತದೆ. 'ಗೋ' ಶಬ್ದಕ್ಕೆ 'ಜ್ಞಾನ' ಎಂಬ ಅರ್ಥದಲ್ಲಿ, ಜ್ಞಾನ ಸಂವಹನ ನಡೆಯುವ 'ಗೋಷ್ಠಿ'. ಮುಂತಾದ ಪದಗಳನ್ನು ಇಂದು ನಾವು ದೈನಂದಿನ ವ್ಯವಹಾರದಲ್ಲಿ ಬಳಸುತ್ತೇವೆ.

## ಜಾಹೀರಾತುಗಳಲ್ಲಿ ಕಾಣುವ ಭಾಷಾಂತರ

ಸಾಮಾನ್ಯವಾಗಿ ದಿನನಿತ್ಯ ಟಿ ವಿ ವಾಹಿನಿಗಳಲ್ಲಿ ಕಾಣುವ ಜಾಹೀರಾತುಗಳು ಮೊದಲು ಹಿಂದಿ ಅಥವಾ ಆಂಗ್ಲ ಭಾಷೆಯಲ್ಲಿ ನಿರ್ಮಾಣವಾಗಿ ಆನಂತರ ಇತರ ಪ್ರಾದೇಶಿಕ ಭಾಷೆಗಳಿಗೆ ಅನುವಾದವಾಗಿರುತ್ತದೆ. ಬಹುಶಃ ಬಾಂಬೆಯಂತಹ ನಗರಗಳಲ್ಲಿ ಕುಳಿತು ಮಾಡುವ ಅನುವಾದಗಳು ಶಬ್ದಕೋಶವನ್ನು ಅವಲಂಬಿಸಿವೆ ಎಂದು ಮೇಲುನೋಟಕ್ಕೇ ತಿಳಿಯುವಂತಹುದು. ಇದರಲ್ಲಿ ಹಲವು ಆಯಾಮಗಳಿವೆ.

ಇಲ್ಲಿ ಆಂಗ್ಲ ಮೂಲವಾಗಿರುವ ಒಂದು ಅನುವಾದವನ್ನು ನೋಡಬಹುದು. ಜಾಹೀರಾತಿನಲ್ಲಿ ಒಂದು ವಸ್ತುವನ್ನು ತೋರಿಸಿ ಒಬ್ಬ ಮಹಿಳೆ, "ನಾನು ಇದರ ಬೀಸಣಿಗೆ" ಎನ್ನುತ್ತಾಳೆ. ಅಲ್ಲಿ ಆಂಗ್ಲ ಪದ 'ಫ್ಯಾನ್' ಶಬ್ದಕ್ಕೆ 'ಅಭಿಮಾನಿ' ಎನ್ನುವುದಕ್ಕೆ ಬದಲಾಗಿ, ಶಬ್ದಕೋಶದಲ್ಲಿರುವ 'ಬೀಸಣಿಗೆ' ಯೆಂದು ಹೇಳಿರುವುದು ನಿಚ್ಚಳವಾಗಿ ತೋರುತ್ತದೆ.

ಕನ್ನಡದಲ್ಲಿ ಆಂಗ್ಲಭಾಷೆಗೆ ಸಂವಾದಿಯಾಗಿ ವಿಜ್ಞಾನ, ತಂತ್ರಜ್ಞಾನ ಮುಂತಾದ ಕ್ಷೇತ್ರಗಳ ಪದಗಳನ್ನು ಬಳಸುವಲ್ಲಿ ಅತ್ಯಂತ ಎಚ್ಚರಿಕೆ ವಹಿಸಬೇಕಾಗುತ್ತದೆ. ಭಾರತೀಯ ಸ್ಟೇಟ್ ಬ್ಯಾಂಕಿನ ಅಧಿಕೃತ ಭಾಷಾ ವಿಭಾಗದಲ್ಲಿ ಕೆಲಸ ಮಾಡುವಾಗ ನನಗೆ ಈ ದಿಸೆಯಲ್ಲಿ ದೊರೆತ ಅನುಭವ ಅಪಾರ.

ಯಾವುದೇ ಕ್ಷೇತ್ರದ ಸಾಹಿತ್ಯವನ್ನು ಅನುವಾದಿಸುವಾಗ, ಮೂಲಕ್ಕೆ ನಿಷ್ಠವಾಗಿರುವುದರೊಂದಿಗೆ, ಆ ರಚನೆಯಲ್ಲಿರುವ ಸೊಗಸನ್ನು ಅನುವಾದದಲ್ಲಿ ತಂದಲ್ಲಿ ಅದು ಒಂದು ಮರುಸೃಷ್ಟಿಯಾಗುತ್ತದೆ. ಹಲವು ಬಾರಿ ಉತ್ತಮ ಅನುವಾದಗಳನ್ನು ನೋಡುವಾಗ ಇದೇ ಮೂಲವೇನೋ ಎನ್ನುವ ಭಾವ ಬಂದಾಗ ಅದು ಸಾರ್ಥಕವೆನಿಸುತ್ತದೆ. ಈ ದಿಸೆಯಲ್ಲಿ, ಸಂಸ್ಕೃತದಿಂದ ಆಂಗ್ಲಭಾಷೆಗೆ 17 ನೆಯ ಶತಮಾನದಲ್ಲಿ ಸಂಸ್ಕೃತದಲ್ಲಿ ರಚಿಸಿರುವ ರಾಮಾಯಣದ ವ್ಯಾಖ್ಯಾನ ಧರ್ಮಾಕೂತಂ, ಸಂಸ್ಕೃತದಿಂದ ಕನ್ನಡ ಹಾಗೂ ಆಂಗ್ಲ ಭಾಷೆಗೆ ವೇದ – ವೇದಾಂತ, ತತ್ತ್ವಶಾಸ್ತ್ರ ಗ್ರಂಥಗಳು, ರಾಮಾಯಣ – ಮಹಾಭಾರತಗಳ ಸಾರ, ಸಮಕಾಲೀನ ಸಾಹಿತ್ಯ, ಜೈನ ಮಹಾಪುರಾಣ ಹೀಗೆ ಹಲವು ಕ್ಷೇತ್ರಗಳಲ್ಲಿ ನನ್ನ ಅನುವಾದಗಳು ಹರಡಿವೆ.

❑

**ಡಾ. ಜಯಂತಿ ಮನೋಹರ್**
ನಂ: 001, ಸ್ಟರ್ಲಿಂಗ್ ಕೋರ್ಟ್ ಅಪಾರ್ಟ್‌ಮೆಂಟ್
21, ಕನಕಪುರ ರಸ್ತೆ, ಬಸವನಗುಡಿ
ಬೆಂಗಳೂರು – 560004

# ಪ್ರಾರ್ಥನೆ

*– ಮೂಲ ಹಿಂದೀ ಲೇಖಕರು: ಪ್ರೇಮಚಂದ್*
*ಕನ್ನಡಕ್ಕೆ: ಡಾ. ಅರ್. ಲಕ್ಷ್ಮೀನಾರಾಯಣ*

**ಸ**ರ್ಕಾರೀ ಅನಾಥಾಲಯದಿಂದ ಹೊರದೂಡಿ ನನ್ನನ್ನು ಸೇನೆಯಲ್ಲಿ ಸೇರಿಸಲಾಯಿತು. ನನ್ನ ಶರೀರ ದಷ್ಟಪುಷ್ಟವಾಗಿ ಬಲಿಷ್ಠವಾಗಿತ್ತು. ಸಾಧಾರಣ ಮನುಷ್ಯರಿಗಿಂತ ನನ್ನ ಕೈ ಕಾಲುಗಳು ಉದ್ದವಾಗಿ ಮಾಂಸಖಂಡಗಳಿಂದ ಕೂಡಿಕೊಂಡಿದ್ದುವು. ನನ್ನ ಎತ್ತರ ಪೂರಾ ಆರು ಅಡಿ ಒಂಬತ್ತು ಅಂಗುಲ ಇತ್ತು. ಸೇನಾ ದಳದಲ್ಲಿ ನಾನು 'ದೇವ' ಎಂಬ ಹೆಸರಿನಿಂದ ಖ್ಯಾತನಾಗಿದ್ದೆ. ನಾನು ಸೈನ್ಯಕ್ಕೆ ಸೇರಿದಾಗಿನಿಂದ ನನ್ನ ಅದೃಷ್ಟವೂ ಬದಲಾಗತೊಡಗಿತು. ನನ್ನಿಂದ ಅದೆಂಥೆಂಥ ಕೆಲಸಗಳಾದುವೆಂದರೆ ಅವುಗಳಿಂದ ಪ್ರತಿಷ್ಠೆಯೊಂದಿಗೆ ನನ್ನ ಆದಾಯವೂ ಹೆಚ್ಚುತ್ತ ಹೋಯಿತು. ನಮ್ಮ ದಳದ (ಪ್ಲೆಟೂನಿನ) ಸೈನಿಕನಿಗೂ ನಾನು ಯಾರೆಂದು ಗೊತ್ತಿತ್ತು. ಮೇಜರ್ ಸರದಾರ್ ಹಿಮ್ಮತ್ ಸಿಂಹರ ಕೃಪೆ ನನ್ನ ಮೇಲೆ ಬಹಳವಾಗಿತ್ತು. ಕಾರಣ ನಾನು ಒಮ್ಮೆ ಅವರ ಪ್ರಾಣವನ್ನು ರಕ್ಷಿಸಿದ್ದೆ. ಇದರ ಹೊರತಾಗಿಯೂ ಅದೇಕೋ ಏನೋ ಅವರನ್ನು ನೋಡಿದ ಕೂಡಲೇ ನನ್ನ ಹೃದಯುದಲ್ಲಿ ಭಕ್ತಿ ಮತ್ತು ಶ್ರದ್ಧೆ ಉಂಟಾಗುತ್ತಿತ್ತು. ಇವರು ನನಗೆ ಪೂಜ್ಯರು ಎಂದೇ ನಾನು ಯಾವಾಗಲೂ ತಿಳಿಯುತ್ತಿದ್ದೆ. ಸರದಾರ್ ಸಾಹೇಬರೂ ನನ್ನೊಂದಿಗೆ ಸ್ನೇಹದಿಂದ ನಡೆದು ಕೊಳ್ಳುತ್ತಿದ್ದರು.

ನನಗೆ ನನ್ನ ತಂದೆ ತಾಯಿ ಯಾರೆಂದು ತಿಳಿದಿಲ್ಲ. ಅವರ ನೆನಮ ಕೂಡ ನನಗಿಲ್ಲ. ಈ ಬಗ್ಗೆ ಯೋಚಿಸುತ್ತ ಕುಳಿತೆನೆಂದರೆ ಕೆಲವು ಮಸಕು ಮಸಕಾದ ದೃಶ್ಯಗಳು ತೇಲಿ ಬರುತ್ತವೆ. ಅವುಗಳೆಂದರೆ ದೊಡ್ಡ ದೊಡ್ಡ ಪರ್ವತಗಳ ನಡುವೆ ವಾಸಿಸುತ್ತಿದ್ದ ಒಂದು ಕುಟುಂಬ ಮತ್ತು ಮತ್ತು ಬಹುಶಃ ನನ್ನ ತಾಯಿ

ಆಗಿದ್ದಿರಬಹುದಾದ ಒಂದು ಹೆಣ್ಣಿನ ಮುಖ. ಮಲೆಸೀಮೆಯ ನಡುವೆಯೇ ನಾನು ಹುಟ್ಟಿ ಬೆಳೆದೆ. ಪೆಶಾವರದಿಂದ 80 ಮೈಲಿ ದೂರದಲ್ಲಿ 'ಕುಲಾಹಾ' ಎಂಬ ಒಂದು ಹಳ್ಳಿ ಇದೆ. ಅಲ್ಲೇ ಒಂದು ಸರ್ಕಾರೀ ಅನಾಥಾಲಯವಿದೆ. ಇದರಲ್ಲೇ ನಾನು ಬೆಳೆದು ದೊಡ್ಡವನಾದೆ. ಇಲ್ಲಿಂದ ಹೊರಟುಬಂದು ಸೀದಾ ಸೇನೆಗೆ ಸೇರಿಕೊಂಡೆ. ಹಿಮಾಲಯದ ಹವೆಯಲ್ಲಿ ನನ್ನ ದೇಹ ದೃಢಗೊಂಡಿದೆ. ಗಡಿ ಪ್ರಾಂತಗಳಲ್ಲಿ ವಾಸಿಸುವ ಅಫ್ರೀದೀ, ಗಿಲ್ ಜಯೀ, ಮಹಸೂದೀ ಮೊದಲಾದ ಗಿರಿಜನಗಳ ಹಾಗೆಯೇ ನಾನೂ ನಾಗರಿಕತೆಯ ಗಂಧಗಾಳಿ ಇಲ್ಲದೆ ಬೆಳೆದವನು. ಅವರ ಮತ್ತು ನನ್ನ ನಡುವೆ ಕಿಂಚಿತ್ ವ್ಯತ್ಯಾಸವಿರುವುದು ಈ ನಾಗರಿಕತೆಯಲ್ಲಿ. ನಾನು ಸ್ವಲ್ಪ ಮಟ್ಟಿಗೆ ಓದಿ ಬರೆದು ಮಾಡಿದವನು. ಮಾತು ಕತೆ ಆಡುತ್ತೀನಿ, ಶಿಷ್ಟಾಚಾರ ಕಾನೂನು ತಿಳಿವಳಿಕೆ ಇರುವವನು. ಕಿರಿಯರ ಮತ್ತು ಹಿರಿಯರ ವಿಷಯಕ್ಕೆ ಲಕ್ಷ್ಯ ವಹಿಸುತ್ತೇನೆ. ಆದರೆ ನನ್ನ ಆಕಾರ ಮಾತ್ರ ಯಾವುದೇ ಗಡಿನಾಡುಗಳಲ್ಲಿರುವ ಪುರುಷರ ಹಾಗೆಯೇ ಇದೆ.

ಒಮ್ಮೊಮ್ಮೆ ಪರ್ವತ ಪ್ರದೇಶಗಳಲ್ಲಿ ಸ್ವಚ್ಛಂದವಾಗಿ ಸಂಚರಿಸಬೇಕೆಂಬ ಬಲವಾದ ಇಚ್ಛೆ ಉಂಟಾಗುತ್ತದೆ. ಆದರೆ ಬದುಕಿನ ಪ್ರಶ್ನೆ ಎದ್ದು ನಿಂತು ನನ್ನ ಆಸೆಯನ್ನು ಹತ್ತಿಕ್ಕುತ್ತದೆ. ಆ ಒಣ ಪ್ರದೇಶದಲ್ಲಿ ಊಟವೆಂಬುದು ತೀರ ದುಸ್ತರವಾಗಿತ್ತು. ಅಲ್ಲಿಯ ಜನ ಆಹಾರಕ್ಕಾಗಿ ಮನುಷ್ಯನ ಕೊಲೆ ಮಾಡಿಬಿಡುತ್ತಾರೆ. ಮೈಮೇಲೆ ಧರಿಸುವ ಬಟ್ಟೆಗಾಗಿ ಹೆಣದ ಮೇಲಿನ ಬಟ್ಟೆಯನ್ನು ಹರಿದೆಸೆಯುತ್ತಾರೆ. ಒಂದು ಬಂದೂಕಿಗಾಗಿ ಸರ್ಕಾರೀ ಸೇನೆಯ ಮೇಲೆ ದಾಳಿ ಮಾಡುತ್ತಾರೆ. ಅದೂ ಅಲ್ಲದೆ ಅಲ್ಲಿಯ ಗಿರಿಜನ ವರ್ಗಗಳ ಒಬ್ಬೊಬ್ಬ ಮನುಷ್ಯನಿಗೂ ನಾನು ಯಾರೆಂದು ತಿಳಿದಿತ್ತು. ಅವರೆಲ್ಲ ನನ್ನ ರಕ್ತ ಪಿಪಾಸುಗಳಾಗಿದ್ದರು. ನಾನು ಅವರ ಕೈಗೆ ಸಿಕ್ಕಿಬಿಟ್ಟಿದ್ದೇ ಆದರೆ ಪ್ರಪಂಚದಲ್ಲಿ ನನ್ನ ಹೇಳ ಹೆಸರಿಲ್ಲದಂತೆ ಮಾಡಿಬಿಡುತ್ತಾರೆ, ಅದೆಷ್ಟು ಅಫ್ರೀದೀ ಮತ್ತು ಗಿಲಜಇಯಿಗಳನ್ನು ನಾನು ಕೊಂದಿದ್ದೆನೋ ಅದೆಷ್ಟು ಅಫ್ರೀದೀ ಮತ್ತು ಗಿಲಜಇಯಿಗಳನ್ನು ಹಿಡಿದಿಡಿದು ಸರ್ಕಾರೀ ಸೆರೆಮನೆಗೆ ಕಳಿಸಿದ್ದೆನೋ ಲೆಕ್ಕವಿಲ್ಲ. ಅಲ್ಲದೆ ಅವರುಗಳ ಅದೆಷ್ಟು ಹಳ್ಳಿಗಳನ್ನು ಸುಟ್ಟು ಬೂದಿ ಮಾಡಿದ್ದೆನೋ ಗೊತ್ತಿಲ್ಲ! ನಾನೂ ತುಂಬ ಎಚ್ಚರಿಕೆಯಿಂದಿರುತ್ತಿದ್ದೆ. ನಾನು ಸಾಧ್ಯವಾದಷ್ಟೂ ಒಂದು ಜಾಗದಲ್ಲಿ ಎಂದೂ ಒಂದು ವಾರಕ್ಕಿಂತ ಹೆಚ್ಚು ಕಾಲ ಇರುತ್ತಿರಲಿಲ್ಲ.

* * * *

ಒಂದು ದಿನ ನಾನು ಸರದಾರ್ ಹಿಮ್ಮತ್ ಸಿಂಹರ ಮನೆಯ ಕಡೆ ಹೋಗುತ್ತಿದ್ದೆ. ಆಗ ಎರಡು ಗಂಟೆ ಆಗಿತ್ತು. ಈಚಿನ ದಿನಗಳಲ್ಲಿ ರಜಾ ಇದ್ದಂತಿತ್ತು. ಕಾರಣ ಈಚೆಗೆ ತಾನೆ ಕೆಲವು ಹಳ್ಳಗಳನ್ನು ಸುಟ್ಟುಹಾಕಲಾಗಿತ್ತು. ಆದ್ದರಿಂದ ಅವುಗಳಿಂದ ತಕ್ಷಣದಲ್ಲಿ

ಯಾವುದೇ ಹೆದರಿಕೆ ಇರಲಿಲ್ಲ. ನಾವುಗಳು ನಿಶ್ಚಿಂತರಾಗಿ ಹರಟೆ ವಿನೋದಗಳಲ್ಲಿ ದಿನ ಕಳೆಯುತ್ತಿದ್ದೆವು. ಕೂತು ಕೂತು ಮನಸ್ಸಿಗೆ ಗಾಬರಿಯಾಗಿತ್ತು. ಮನಸ್ಸನ್ನು ಪ್ರಫುಲ್ಲಗೊಳಿಸುವ ಸಲುವಾಗಿ ಸರದಾರ್ ಸಾಹೇಬರ ಮನೆ ಕಡೆ ಹೊರಟಿದ್ದೆ. ಆದರೆ ಮಾರ್ಗ ಮಧ್ಯದಲ್ಲಿ ಒಂದು ದುರ್ಘಟನೆ ನಡೆದುಹೋಯಿತು. ಹಿಂದೂಸ್ತಾನದ ಒಬ್ಬ ಸೈನಿಕನ ತಲೆ ಒಡೆದುಹಾಕಬಹುದಾಗಿದ್ದ ಒಬ್ಬ ಮುದಿ ಅಫ್ರೀದಿಯು ಒಬ್ಬ ಸೈನಿಕನೊಂದಿಗೆ ಕಾದಾಟಕ್ಕೆ ನಿಂತಿದ್ದ. ನಾನು ನೋಡು ನೋಡುತ್ತಿದ್ದಂತಯೇ ತನ್ನ ಸೊಂಟದಿಂದ ಒಂದು ಹರಿತವಾದ ಚೂರಿ ಹೊರಸೆಳೆದು ಅವನ ಎದೆಗೆ ಚುಚ್ಚಿಬಿಟ್ಟ. ಈ ಸೈನಿಕನ ಬಳಿ ಒಂದು ಒಂದು ಬಂದೂಕು ಇತ್ತು. ಅದಕ್ಕಾಗಿ ಇಷ್ಟೆಲ್ಲ ಹೋರಾಟ ನಡೆದಿತ್ತು. ರೆಪ್ಪೆ ಮಿಟುಕಿಸುವುದರಲ್ಲಿ ಸೇನಾ ಯೋಧನ ಕತೆ ಮುಗಿದುಹೋಯಿತು. ಮುದಿಯ ಬಂದೂಕು ಎತ್ತಿಕೊಂಡು ಓಡಿದ. ನಾನು ಅವನ ಹಿಂದೆ ಓಡಿದೆ. ಆದರೆ ಓಡುವುದರಲ್ಲಿ ಅವನ ವೇಗ ಅದೆಷ್ಟು ತೀವ್ರವಾಗಿತ್ತೆಂದರೆ ನೋಡ ನೋಡುತ್ತಲೇ ಅವನು ಕಣ್ಣಿಂದ ಮರೆಯಾಗಿಬಿಟ್ಟ. ನಾನು ವಿಚಾರ ಮಾಡದೆ ಅವನ ಬೆನ್ನುಹತ್ತಿದ್ದೆ. ಗಡಿಯ ಸಮೀಪಕ್ಕೆ ಹೋಗುತ್ತ ಹೋಗುತ್ತ ಅವನಿಂದ ಇಪ್ಪತ್ತು ಮೊಳದಷ್ಟು ದೂರ ಮಾತ್ರ ಉಳಿದಿತ್ತು. ಅವನು ಹಿಂದಕ್ಕೆ ತಿರುಗಿ ನೋಡಿದ. ನಾನು ಏಕಾಂಗಿಯಾಗಿ ಅವನ ಬೆನ್ನಟ್ಟಿದ್ದೆ. ಅವನು ಬಂದೂಕಿನ ಗುರಿಯನ್ನು ನನ್ನ ಕಡೆಗೆ ತಿರುಗಿಸಿದ. ನಾನು ತಕ್ಷಣ ನೆಲದ ಮೇಲೆ ಮಲಗಿಬಿಟ್ಟೆ. ಬಂದೂಕಿನ ಗೋಲಿ ನನ್ನ ಎದುರುಗಡೆ ಇದ್ದ ಕಲ್ಲಿಗೆ ತಾಕಿತು. ನಾನು ಗೋಲಿಗೆ ಬಲಿಯಾದೆನೆಂದು ಅವನು ಭಾವಿಸಿದ. ಅವನು ಮೆಲ್ಲ ಮೆಲ್ಲಗೆ ಎಚ್ಚರಿಕೆಯಿಂದ ನನ್ನ ಕಡೆಗೆ ಸಾಗಿಬಂದ. ನಾನು ಉಸಿರುಕಟ್ಟಿ ಮಲಗಿದೆ. ಅವನು ಯಾವಾಗ ಸರಿಯಾಗಿ ನನ್ನ ಬಳಿಯೇ ಬಂದನೋ ಆಗ ನಾನು ಸಿಂಹದ ಹಾಗೆ ನೆಗೆದು ಅವನ ಕುತ್ತಿಗೆ ಹಿಡಿದು ನೆಲದ ಮೇಲೆ ಕೆಡವಿದೆ ಮತ್ತು ಚೂರಿಯನ್ನು ಹೊರಸೆಳೆದು ಅವನ ಎದೆಯಲ್ಲಿ ಚುಚ್ಚಿಬಿಟ್ಟೆ. ಅಫ್ರೀದಿಯ ಕತೆ ಮುಗಿದೇಹೋಯಿತು. ಅದೇ ಹೊತ್ತಿಗೆ ನನ್ನ ದಳದ ಕೆಲವರು ಅಲ್ಲಿಗೆ ಬಂದರು. ಸುತ್ತ ಇದ್ದವರೆಲ್ಲ ನನ್ನನ್ನು ಹೊಗಳತೊಡಗಿದರು. ಇನ್ನೂ ನಾನು ಪೂರ್ತಿ ಎಚ್ಚರದಲ್ಲಿರಲಿಲ್ಲ. ನನಗೆ ಪ್ರಜ್ಞೆ ಪೂರ್ತಿ ಮರಳಿತು. ಆ ಮುದುಕನನ್ನು ನೋಡಿ ನನ್ನ ಮನಸ್ಸಿಗೆ ಗಾಬರಿಯಾಗತೊಡಗಿತು. ಇದುವರೆಗೆ ಅದೆಷ್ಟು ಅಫ್ರೀದಿಗಳನ್ನು ಕೊಂದಿದ್ದೆನೋ ಗೊತ್ತಿಲ್ಲ. ಆದರೆ ಎಂದಿಗೂ ನನ್ನ ಹೃದಯ ಇಷ್ಟೊಂದು ಗಾಬರಿಗೊಂಡಿರಲಿಲ್ಲ. ನಾನು ನೆಲದ ಮೇಲೆ ಕುಳಿತು ಆ ಮುದುಕನತ್ತ ನೋಡತೊಡಗಿದೆ. ನಮ್ಮ ದಳದ ಸೈನಿಕರೂ ಅಲ್ಲಿಗೆ ಬಂದು ಸೇರಿದರು. ನಾನು ಗಾಯಗೊಂಡಿದ್ದೇನೆಂದು ತಿಳಿದು ಅನೇಕ ರೀತಿಯ ಪ್ರಶ್ನೆಗಳನ್ನು ಕೇಳತೊಡಗಿದರು. ನಿಧಾನವಾಗಿ ಎದ್ದು ಮಾತಿಲ್ಲದೆ ನಗರದ ಕಡೆಗೆ ಹೊರಟೆ. ಸಿಪಾಯಿಗಳು ನನ್ನ

ಹಿಂದೆ ಹಿಂದೆ ಆ ಮುದುಕನ ಹೆಣವನ್ನು ಎಳೆದುಕೊಂಡು ಹೊರಟರು. ನಗರದ ಜನ ಒಂದೇ ಸಮನೆ ನನಗೆ ಜಯಕಾರ ಹೇಳತೊಡಗಿದರು. ನಾನು ಮೌನವಾಗಿ ಸರದಾರ ಹಿಮ್ಮತ್ ಸಿಂಹರ ಮನೆಯೊಳಗೆ ನುಗ್ಗಿದೆ.

ಸರದಾರರು ಆ ಹೊತ್ತಿನಲ್ಲಿ ತಮ್ಮ ಖಾಸಗಿ ಕೋಣೆಯಲ್ಲಿ ಕುಳಿತು ಏನೋ ಬರೆಯುತ್ತಿದ್ದರು. ಅವರು ನನ್ನನ್ನು ನೋಡಿ "ಏನು ಆ ಅಫ್ರೀದಿಯನ್ನು ಕೊಂದು ಬಂದೆ ತಾನೆ?" ಎಂದು ಕೇಳಿದರು.

ನಾನು ಕುಳಿತುಕೊಳ್ಳುತ್ತ- "ಹೌದು ಕೊಂದೆ. ಆದರೆ ಸರದಾರ್ ಸಾಹೇಬರೆ ನಾನು ಏಕೋ ಸ್ವಲ್ಪ ಅಂಜುಬುರುಕನಾಗಿಬಿಟ್ಟಿದ್ದೀನಿ" ಎಂದೆ.

ಸರದಾರ್ ಸಾಹೇಬರು ಆಶ್ಚರ್ಯದಿಂದ ಹೇಳಿದರು- "ಅಸದ್ ಖಾನ್ ಮತ್ತು ಅಂಜುಬುರುಕತನ! ಇವು ಎರಡೂ ಒಂದೇ ಜಾಗದಲ್ಲಿ ಇರಲು ಸಾಧ್ಯವಿಲ್ಲ."

ನಾನು ಏಳುತ್ತ ಹೇಳಿದೆ- "ಸರದಾರ್ ಸಾಹೇಬರೆ ಇಲ್ಲಿ ಏಕೋ ಮೈಗೆ ಸ್ವಸ್ಥವಿದ್ದಂತೆ ಅನಿಸುತ್ತಿಲ್ಲ. ಎದ್ದು ಹೊರಗಡೆ ವರಾಂಡಾದಲ್ಲಿ ಕುಳಿತುಕೊಳ್ಳಿ. ಯಾಕೋ ಏನೋ ಗೊತ್ತಾಗುತ್ತ ಇಲ್ಲ, ನನ್ನ ಎದೆಹೊಡೆದುಕೊಳ್ಳುತ್ತಾ ಇದೆ."

ಸರದಾರ್ ಸಾಹೇಬರು ಮೇಲೆದ್ದು ನನ್ನ ಹತ್ತಿರಕ್ಕೆ ಬಂದು ಪ್ರೀತಿಯಿಂದ ನನ್ನ ಬೆನ್ನ ಮೇಲೆ ಕೈಯಾಡಿಸುತ್ತ - "ಅಸದ್ ನೀನು ಓಡಿ ಓಡಿ ದಣಿದಿದ್ದಿ ಅಷ್ಟೆ, ಬೇರೆ ಏನೂ ಇಲ್ಲ. ಆಯಿತು, ವರಂಡಾದಲ್ಲಿ ಕುಳಿತುಕೊಳ್ಳೋಣ ನಡಿ. ಸಂಜೆಯ ತಣ್ಣನೆಯ ಗಾಳಿ ನಿನ್ನನ್ನು ಉಲ್ಲಾಸಗೊಳಿಸುತ್ತೆ." ಎಂದರು.

ಸರದಾರ್ ಸಾಹೇಬರು ಮತ್ತು ನಾನು ಇಬ್ಬರೂ ವರಾಂಡಾದಲ್ಲಿ ಕುರ್ಚಿಗಳ ಮೇಲೆ ಕುಳಿತೆವು. ನಗರದ ನಾಲ್ಕು ರಸ್ತೆಗಳು ಕೂಡುವ ಸ್ಥಳದಲ್ಲಿ ಆ ಮುದುಕನ ಶವವನ್ನು ಇಡಲಾಗಿತ್ತು. ಅದರ ಸುತ್ತಲೂ ಜನರ ಗುಂಪು ಸೇರಿತ್ತು. ವರಾಂಡಾದಲ್ಲಿ ನಾನು ಕುಳಿತಿದ್ದನ್ನು ನೋಡಿ ಜನ ನನ್ನ ಕಡೆಗೆ ಬೊಟ್ಟುಮಾಡಿ ತೋರಿಸತೊಡಗಿದರು. ಸರದಾರ್ ಸಾಹೇಬರು ಈ ದೃಶ್ಯವನ್ನು ನೋಡಿ - "ಅಸದ್‌ಖಾನ್ ನೋಡಿದೆಯಾ ಜನರ ಕಣ್ಣಿನಲ್ಲಿ ನೀನು ಅದೆಷ್ಟು ಎತ್ತರಕ್ಕೆ ಹೋಗಿದ್ದೀ? ನಿನ್ನ ಶೌರ್ಯವನ್ನು ಇಲ್ಲಿಯ ಪ್ರತಿಯೊಬ್ಬ ಹುಡುಗನೂ ಹೊಗಳುತ್ತಾನೆ. ಈಗಲೂ ನಾನು ಅಂಜುಬುರುಕ ಅಂತ ಹೇಳ್ತೀಯಾ?" ಎಂದರು.

ನಾನು ಮುಗುಳ್ನಗುತ್ತ ಹೇಳಿದೆ- "ಈ ಮುದುಕನನ್ನು ಕೊಂದಾಗಿನಿಂದ ನನ್ನ ಹೃದಯ ನನಗೆ ಧಿಕ್ಕಾರ ಹೇಳ್ತಾ ಇದೆ".

ಸರದಾರ್ ಸಾಹೇಬರು ನಗುತ್ತ- "ಏಕೆ ಅಂದರೆ ನೀನು ನಿನಗಿಂತ ಕಡಿಮೆ ಬಲಶಾಲಿಯನ್ನು ಕೊಂದಿದ್ದೀ"

ನಾನು ಧೈರ್ಯ ತಂದುಕೊಂಡು ಹೇಳಿದೆ- "ಇರಬಹುದು. ಇದೇ ಸರಿ."

ಅದೇ ಹೊತ್ತಿಗೆ ಒಬ್ಬ ಅಫ್ರೀದಿ ಮಹಿಳೆ ಸರದಾರ್ ಸಾಹೇಬರ ಮನೆ ಮುಂದೆ ಬಂದು ನಿಂತುಕೊಂಡಳು. ಅವಳ ಮುಖ ನೋಡುತ್ತಿದ್ದ ಹಾಗೆಯೇ ಸರದಾರ್ ಸಾಹೇಬರ ಮುಖ ಬಿಳಿಚಿಕೊಂಡಿತು. ಅವರ ಭಯಭೀತ ದೃಷ್ಟಿ ಅವಳ ಮುಖದ ಕಡೆಯಿಂದ ನನ್ನ ಕಡೆಗೆ ತಿರುಗಿತು. ನಾನೂ ಆಶ್ಚರ್ಯದಿಂದ ಅವರ ಮುಖದ ಕಡೆ ನೋಡತೊಡಗಿದೆ. ಆ ಮಹಿಳೆಯಂಥ ಸುಗಠಿತ ಶರೀರ ಪುರುಷರಿಗೂ ಅಪರೂಪವೆಂದೇ ಹೇಳಬೇಕು. ಕಾಕಿ ಬಣ್ಣದ ದಪ್ಪ ಬಟ್ಟೆಯ ಪೈಜಾಮ ಮತ್ತು ನೀಲಿ ಬಣ್ಣದ ದಪ್ಪನೆಯ ಅಂಗಿ(ಕುರ್ತಾ) ಧರಿಸಿದ್ದಳು. ಬಲೂಚಿಸ್ತಾನದ ಮಹಿಳೆಯರ ಹಾಗೆ ತಲೆಯ ಮೇಲೆ ಕರ್ಚೀಫು ಕಟ್ಟಿಕೊಂಡಿದ್ದಳು. ಹಳದಿ ಬಣ್ಣದ ಆಕೆಯಲ್ಲಿ ಯೌವನದ ಕಾಂತಿ ಎದ್ದು ಕಾಣುತ್ತಿತ್ತು. ಈ ಕ್ಷಣದಲ್ಲಿ ಅವಳ ಕಣ್ಣುಗಳಲ್ಲಿ ಯಾರ ಹೃದಯಲ್ಲಾದರೂ ಭಯ ಹುಟ್ಟಿಸುವಂಥ ಭೀಷಣತೆ ತುಂಬಿತ್ತು. ಆ ಹೆಣ್ಣಿನ ಕಣ್ಣುಗಳು ಸರದಾರ ಸಾಹೇಬರ ಕಡೆಯಿಂದ ನನ್ನ ಕಡೆಗೆ ತಿರುಗಿದವು. ಅವಳು ದಿಟ್ಟಿಸಿ ನೋಡುತ್ತಿದ್ದ ರೀತಿ ನನ್ನನ್ನು ಭಯಭೀತಗೊಳಿಸಿತು. ಆ ಹೆಣ್ಣು ಸರದಾರ ಸಾಹೇಬರ ಕಡೆ ನೋಡಿ ಮತ್ತೆ ನೆಲದ ಮೇಲೆ ಉಗುಳಿಬಿಟ್ಟಳು. ಆ ಮೇಲೆ ನನ್ನನ್ನು ನೋಡುತ್ತ ನಿಧಾನವಾಗಿ ಬೇರೆ ಕಡೆಗೆ ಹೊರಟುಹೋದಳು.

ಆ ಮಹಿಳೆ ಹೋಗುತ್ತಿದ್ದುದನ್ನು ನೋಡಿ ಸರದಾರ ಸಾಹೇಬರಿಗೆ ಜೀವದಲ್ಲಿ ಜೀವ ಬಂದಂತಾಯಿತು. ನನ್ನ ತಲೆಯ ಮೇಲಿಂದಲೂ ಒಂದು ಭಾರ ತೊಲಗಿತು. ನಾನು ಸರದಾರ ಸಾಹೇಬರನ್ನು –"ನಿಮಗೆ ಈಕೆ ಗೊತ್ತೇನು?"–ಅಂತ ಕೇಳಿದೆ.

ಸರದಾರಸಾಹೇಬರು ಒಂದು ನೀಳವಾದ ತಣ್ಣನೆಯ ಉಸಿರೆಳೆಯುತ್ತ– "ಓಹೋ, ಚೆನ್ನಾಗಿ ಗೊತ್ತು. ಈಕೆ ನನಗೋಸ್ಕರ ಪ್ರಾಣವನ್ನೇ ಬೇಕಾದರೂ ಕೊಡುತ್ತಿದ್ದಂಥ ಕಾಲವೊಂದಿತ್ತು. ವಾಸ್ತವದಲ್ಲಿ ಅವಳು ತನ್ನ ಪ್ರಾಣವನ್ನು ಪಣಕ್ಕಿಟ್ಟು ನನ್ನ ಪ್ರಾಣ ರಕ್ಷಣೆ ಕೂಡ ಮಾಡಿದ್ದಳು. ಆದರೆ ಈಗ ಅವಳಿಗೆ ನನ್ನ ಮುಖ ನೋಡಿದರೆ ತಿರಸ್ಕಾರ. ನನ್ನ ಹೆಂಡತಿಯನ್ನು ಸಾಯಿಸಿದವಳು ಇವಳೇ. ಇವಳನ್ನು ನೋಡಿದಾಗಲೆಲ್ಲ ನನ್ನ ಚೈತನ್ಯವೇ ಉಡುಗಿಹೋಗುತ್ತದೆ. ಅದೇ ದೃಶ್ಯ ನನ್ನ ಕಣ್ಣುಗಳ ಮುಂದೆ ನರ್ತಿಸಲು ಪ್ರಾರಂಭಿಸುತ್ತದೆ."

ನಾನು ಭಯ–ವಿಹ್ವಲ ಸ್ವರದಲ್ಲಿ ಹೇಳಿದೆ– "ಅವಳು ನನ್ನ ಕಡೆಗೂ ಅತ್ಯಂತ ಭಯಾನಕ ದೃಷ್ಟಿಯಿಂದ ನೋಡಿದ್ದಳು. ಅದೇಕೋ ಏನೋ ನನ್ನ ರೋಮಗಳೂ ನಿಮಿರಿ ನಿಂತಿದ್ದುವು."

ಸರದಾರ ಸಾಹೇಬರು ತಲೆ ಆಡಿಸುತ್ತ ಬಹಳ ಗಾಂಭೀರ್ಯದಿಂದ ಹೇಳಿದರು– "ಅಸದ್ ಖಾನ್ ನೀನೂ ಎಚ್ಚರದಿಂದ ಇರು. ಬಹುಶಃ ಈ ಮುದಿ ಅಫ್ರೀದಿಗೂ ಇವಳಿಗೂ ಏನೋ ಸಂಬಂಧ ಇರಬೇಕು. ಅವಳ ಸೋದರನೋ

ತಂದೆಯೋ ಆಗಿದ್ದಿರಬಹುದು. ನಿನ್ನ ಕಡೆಗಿನ ಅವಳ ನೋಟಕ್ಕೆ ಏನೋ ಒಂದು ಲೆಕ್ಕಾಚಾರ ಇರಬೇಕು.. ಬಹಳ ಭಯಂಕರ ಹೆಣ್ಣು ಅವಳು."

ಸರದಾರ್ ಸಾಹೇಬರ ಮಾತು ಕೇಳಿ ನನ್ನ ನರನರವೂ ಕಂಪಿಸಿತು. ಮಾತಿನ ಸರಣಿಯನ್ನು ಬೇರೆ ಕಡೆಗೆ ತಿರುಗಿಸುತ್ತ ಹೇಳಿದೆ- "ಸರದಾರ್ ಸಾಹೇಬರೆ ಇವಳನ್ನು ಯಾಕೆ ನೀವು ಪೋಲೀಸರ ವಶಕ್ಕೆ ಒಪ್ಪಿಸಬಾರದು? ಇವಳಿಗೆ ಗಲ್ಲು ಶಿಕ್ಷೆ ಆಗುತ್ತೆ."

ಸರದಾರ್ ಸಾಹೇಬರು ಹೇಳಿದರು- "ಅಯ್ಯಾ ಅಸದ್ ಖಾನ್ ಇವಳು ನನ್ನ ಪ್ರಾಣ ಉಳಿಸಿದ್ದಳು. ಅಲ್ಲದೆ ಬಹುಶಃ ಈಗಲೂ ನನ್ನನ್ನು ಇಷ್ಟಪಡುತ್ತಾಳೆ. ಇವಳ ಕಥೆ ಬಹಳ ದೀರ್ಘವಾದ್ದು. ಯಾವಾಗಲಾದರೂ ಪುರಸತ್ತಿದ್ದಾಗ ಹೇಳ್ತೀನಿ".

ಸರದಾರರ ಮಾತುಗಳಿಂದ ನನಗೂ ಕುತೂಹಲ ಶುರುವಾಗಿತ್ತು. ಆ ವೃತ್ತಾಂತವನ್ನು ತಿಳಿಸಬೇಕೆಂದು ಒತ್ತಾಯಿಸತೊಡಗಿದೆ. ಮೊದಲಿಗೆ ಅದನ್ನು ತಳ್ಳಿಹಾಕಲು ನೋಡಿದರು. ಆದರೆ ನಾನು ತುಂಬಾ ಒತ್ತಾಯ ಮಾಡಿದ ಮೇಲೆ ವಿಧಿಯಿಲ್ಲದೆ -"ಅಸದ್, ನಾನು ನಿನ್ನನ್ನು ನನ್ನ ಸೋದರನೆಂದೇ ಭಾವಿಸಿದ್ದೇನೆ. ಹಾಗಾಗಿ ನಿನ್ನಲ್ಲಿ ಏನೂ ಮುಚ್ಚು-ಮರೆ ಮಾಡಲ್ಲ. ಕೇಳು" ಎಂದು ಹೇಳ ತೊಡಗಿದರು.

* * * *

ಅಸದ್ ಖಾನ್ ಈಗ ಐದು ವರ್ಷದ ಹಿಂದೆ ನಾನು ಈಗ ಕಾಣುವಷ್ಟು ವಯಸ್ಸಾದವನಾಗಿರಲಿಲ್ಲ. ಆಗ ನನ್ನ ವಯಸ್ಸು 40 ವರ್ಷಕ್ಕಿಂತ ಹೆಚ್ಚಿರಲಿಲ್ಲ. ಒಂದೂ ಕೂದಲು ಬೆಳ್ಳಗಾಗಿರಲಿಲ್ಲ. ಆಗ ಇಬ್ಬರು ಯೋಧರೊಂದಿಗೆ ಕಾದಾಡುವಷ್ಟು ಶಕ್ತಿ ನನ್ನಲ್ಲಿತ್ತು. ಜರ್ಮನರೊಂದಿಗೆ ನಾನು ಸೆಣಸಿದ್ದೇನೆ. ಅದೆಷ್ಟು ಜನರನ್ನು ಸಾಯಿಸಿದ್ದೇನೋ ಗೊತ್ತಿಲ್ಲ. ಜರ್ಮನ್ ಯುದ್ಧದ ನಂತರ ನನ್ನನ್ನು ಈ ಗಡಿ ಪ್ರದೇಶದ ಸೇನಾ ದಳದ ಮೇಜರ್ ಮಾಡಿ ಕಳಿಸಲಾಯಿತು. ಮೊತ್ತ ಮೊದಲಬಾರಿಗೆ ಇಲ್ಲಿಗೆ ಬಂದಾಗ ತುಂಬ ಕಷ್ಟಗಳು ಎದುರಾದವು. ಆದರೆ ನಾನು ಅವುಗಳನ್ನು ಲೆಕ್ಕಿಸಲಿಲ್ಲ. ದಿನಕಳೆದಂತೆಯೆ ಅವೆಲ್ಲವುಗಳನ್ನೂ ಗೆದ್ದು ನಿಂತೆ. ಇಲ್ಲಿಗೆ ಬಂದ ಮೇಲೆ ಎಲ್ಲಕ್ಕಿಂತ ಮೊದಲು ಇಲ್ಲಿಯ ಭಾಷೆಯಾದ ಪಶ್ತೋ ಕಲಿಯಲಾರಂಭಿಸಿದೆ. ಅದರ ನಂತರ ಇನ್ನಿತರ ಭಾಷೆಗಳನ್ನು ಕಲಿತೆ. ಎಷ್ಟರ ಮಟ್ಟಿಗೆ ಅಂದರೆ ತುಂಬ ಸಲೀಸಾಗಿ ಅವನ್ನು ಆಡಲು, ನುಡಿಗಟ್ಟುಗಳನ್ನು ಬಳಸಲು ಕಲಿತೆ. ಆ ನಂತರ ಕೆಲವು ಜನರ ತಂಡಗಳನ್ನು ಮಾಡಿಕೊಂಡು ಈ ಪ್ರದೇಶದ ಒಳಭಾಗಗಳಲ್ಲೆಲ್ಲಾ ಅಲೆದಾಡಿದೆ. ಈ ಪರೀಕ್ಷೆಗಳಲ್ಲಿ ಎಷ್ಟೋ ಸಲ ಸತ್ತು ಸತ್ತು ಬದುಕಿದೆ. ಆದರೆ ಎಲ್ಲ ಕಷ್ಟಗಳನ್ನು ಎದುರಿಸುತ್ತ ಇಲ್ಲಿ ಸುಖವಾಗಿ ಇರತೊಡಗಿದೆ. ಆ ಕಾಲದಲ್ಲಿ ನನ್ನಿಂದ

ಎಂಥೆಂಥ ಕೆಲಸಗಳು ಆದುವು ಅಂದರೆ ಅವುಗಳಿಂದ ಸರ್ಕಾರದಲ್ಲಿ ನನ್ನ ಪ್ರಸಿದ್ಧಿ ಮತ್ತು ಪ್ರತಿಷ್ಠೆ ಹೆಚ್ಚಿದವು. ಒಂದು ಸಲ ಕರ್ನಲ್ ಹ್ಯಾಮಿಲ್ಟನ್ ಅವರ ಹೆಂಡತಿಯನ್ನು ನಾನೊಬ್ಬನೇ ಬಿಡಿಸಿಕೊಂಡು ಬಂದಿದ್ದೆ. ಅಷ್ಟೇ ಅಲ್ಲದೆ ಈ ಪ್ರದೇಶದ ಅದೆಷ್ಟೋ ಪುರುಷರು ಮತ್ತು ಮಹಿಳೆಯರ ಪ್ರಾಣ ಉಳಿಸಿದೆ. ಇಲ್ಲಿಗೆ ಬಂದ ಮೂರು ವರ್ಷಗಳ ನಂತರ ನನ್ನ ಕಥೆ ಪ್ರಾರಂಭವಾಗುತ್ತೆ.

ಒಂದು ರಾತ್ರಿಯಲ್ಲಿ ನಾನು ನನ್ನ ಕ್ಯಾಂಪಿನ ಹೊರಗಡೆ ಮಲಗಿದ್ದೆ. ಅಫ್ರೀದಿಗಳೊಂದಿಗೆ ಯುದ್ಧ ನಡೆಯುತ್ತಿತ್ತು. ಹಗಲಿನಲ್ಲಿ ಯುದ್ಧಮಾಡಿ ಆಯಾಸಗೊಂಡ ಸೈನಿಕರು ಎಚ್ಚರವಿಲ್ಲದೆ ಬಿದ್ದುಕೊಂಡಿದ್ದರು. ಕ್ಯಾಂಪಿನಲ್ಲಿ ನಿಶ್ಶಬ್ದ ನೆಲೆಸಿತ್ತು. ಮಲಗಿದ್ದಾಗಲೇ ನನಗೂ ಯಾವಾಗಲೋ ನಿದ್ದೆ ಬಂದಿತ್ತು. ಎಚ್ಚರವಾದಾಗ ನೋಡಿದರೆ ನನ್ನ ಎದೆಯ ಮೇಲೆ ಸುಮಾರು ನನ್ನ ಎರಡರಷ್ಟು ವಯಸ್ಸಿನ ಅಫ್ರೀದಿಯೊಬ್ಬ ಕುಳಿತು ನನ್ನ ಎದೆಗೆ ಚೂರು ಹಾಕಲು ಉದ್ಯುಕ್ತನಾಗಿದ್ದ. ನಾನು ಪೂರ್ತಿಯಾಗಿ ಅವನ ವಶದಲ್ಲಿದ್ದೆ. ಬದುಕುಳಿಯುವ ಯಾವ ಉಪಾಯವೂ ಇರಲಿಲ್ಲ. ಆದರೆ ಆ ಹೊತ್ತಿನಲ್ಲಿ ನಾನು ಬಹಳ ಧೈರ್ಯದಿಂದ ವರ್ತಿಸಿದೆ. ಪಶ್ತೋ ಭಾಷೆಯಲ್ಲಿ –'ನನ್ನನ್ನು ಸಾಯಿಸಬೇಡ. ಸರಕಾರದ ಸೈನ್ಯದಲ್ಲಿ ನಾನು ಆಫೀಸರ್ ಆಗಿದ್ದೇನೆ. ನನ್ನನ್ನು ಹಿಡಿದುಕೊಂಡು ಹೋಗು. ಸರಕಾರ ನಿನಗೆ ಹಣ ಕೊಟ್ಟು ನನ್ನನ್ನು ಬಿಡಿಸಿಕೊಳ್ಳುತ್ತೆ' ಎಂದೆ.

ದೇವರ ದಯದಿಂದ ನನ್ನ ಮಾತು ಅವನ ಮನಸ್ಸಿನಲ್ಲಿ ಕೂತುಬಿಟ್ಟಿತು. ಸೊಂಟದಿಂದ ಹಗ್ಗ ತೆಗೆದು ನನ್ನ ಕೈಕಾಲು ಕಟ್ಟಿ ಹೆಗಲ ಮೇಲೆ ಹೊರೆಯ ಹಾಗೆ ಇಟ್ಟುಕೊಂಡು ಕ್ಯಾಂಪಿನಿಂದ ಹೊರಬಂದ. ಹೊರಗಡೆ ಹೊಡೆದಾಟದ ಬಿಸಿ ಜೋರಾಗಿತ್ತು. ಅವನು ಒಂದು ವಿಚಿತ್ರ ರೀತಿಯಲ್ಲಿ ಜೋರಾಗಿ ಕಿರುಚುತ್ತ ಏನೋ ಹೇಳಿ ನನ್ನನ್ನು ಹೆಗಲ ಮೇಲೆ ಹೊತ್ತುಕೊಂಡು ಕಾಡಿನ ಕಡೆಗೆ ಓಡಿದ. ಅವನಿಗೆ ನನ್ನ ಭಾರ ಕಿಂಚಿತ್ತೂ ಗೊತ್ತಾಗುತ್ತಿರಲಿಲ್ಲ ಮತ್ತು ಬಹಳ ವೇಗವಾಗಿ ಓಡುತ್ತಿದ್ದ ಎಂದಷ್ಟೇ ಹೇಳಬಲ್ಲೆ. ಅವನ ಹಿಂದೆ ಅವನದೇ ಪಂಗಡದ ಕೆಲವರು ಲೂಟಿ ಹೊಡೆದ ಮಾಲನ್ನು ಹೊತ್ತು ಓಡಿ ಬರುತ್ತಿದ್ದರು.

ಬೆಳಿಗ್ಗೆ ನಾವುಗಳು ಒಂದು ಸರೋವರದ ಸಮೀಪಕ್ಕೆ ಹೋದೆವು. ಸರೋವರವು ದೊಡ್ಡ ದೊಡ್ಡ ಬೆಟ್ಟಗಳಿಂದ ಸುತ್ತುವರಿಯಲ್ಪಟ್ಟಿತ್ತು. ಅದರ ನೀರು ಬಹಳ ಸ್ವಚ್ಛವಾಗಿತ್ತು. ಕಾಡಿನ ಮರಗಳು ಆ ಕಡೆ ಈ ಕಡೆ ಬೆಳೆಯುತ್ತಿದ್ದುವು. ಕೆರೆಯನ್ನು ಸಮೀಪಿಸಿದ ನಾವು ಎಲ್ಲರೂ ಅಲ್ಲೇ ನಿಂತೆವು. ಆ ತಂಡದ ಮುಖಂಡನಾದ ಮುದುಕನು ನನ್ನನ್ನು ಒಂದು ಕಲ್ಲಿನ ಮೇಲೆ ಕೆಡವಿದನು. ನನ್ನ ಸೊಂಟಕ್ಕೆ ಭಾರೀ ಏಟು ತಗುಲಿತು. ಯಾವುದೋ ಮೂಳೆ ಮುರಿದು ಹೋಗಿರಬೇಕು ಎನಿಸಿತು.

ಆದರೆ ದೇವರ ದಯದಿಂದ ಮೂಳೆ ಮುರಿದಿರಲಿಲ್ಲ. ನನ್ನನ್ನು ನೆಲಕ್ಕೆ ಕೆಡವಿದ ನಂತರ ಆ ಸರದಾರನು "ಎಷ್ಟು ರೂಪಾಯಿ ಕೊಡಿಸುವೆ" ಎಂದು ಕೇಳಿದ.

ನಾನು ನನ್ನ ನೋವನ್ನು ನುಂಗಿಕೊಂಡು ಹೇಳಿದೆ– "ಐದುನೂರು ರೂಪಾಯಿ".

ಸರದಾರನು ಮುಖ ಗಂಟಿಕ್ಕಿಕೊಂಡು ಹೇಳಿದ– "ಇಲ್ಲ ಇಷ್ಟು ಕಮ್ಮಿ ನಾನು ತೆಗೆದುಕೊಳ್ಳಲ್ಲ. ಎರಡು ಸಾವಿರಕ್ಕೆ ಒಂದು ಪೈಸಾ ಕಡಿಮೆ ಸಿಕ್ಕಿದರೂ ನಿನ್ನ ಪ್ರಾಣ ಉಳಿಯಲ್ಲ."

ನಾನು ಸ್ವಲ್ಪ ಯೋಚಿಸುತ್ತ ಹೇಳಿದೆ– "ಸರಕಾರ ಒಬ್ಬ ಕಪ್ಪು ಮನುಷ್ಯನಿಗೆ ಇಷ್ಟೊಂದು ಹಣ ಖರ್ಚುಮಾಡಲ್ಲ"

ಸರದಾರನು ಚೂರಿ ಹೊರಸೆಳೆಯುತ್ತ –"ಹಾಗಿದ್ದ ಮೇಲೆ ಸರಕಾರ ಇನಾಮು ಕೊಡುತ್ತೆ ಅಂತ ಏಕೆ ಹೇಳಿದೆ? ಹಾಗಾದರೆ ಇಲ್ಲೇ ಸಾಯಿ" ಎಂದನು.

ಸರದಾರನ ಚೂರಿ ನನ್ನತ್ತ ಮುನ್ನುಗ್ಗಿತು.

ನಾನು ಗಾಬರಿಗೊಂಡು ಹೇಳಿದೆ– "ಆಯಿತು ಸರದಾರ ನಾನು ನಿನಗೆ ಎರಡು ಸಾವಿರ ಕೊಡಿಸ್ತೀನಿ"

ಸರದಾರನು ನಿಂತು ಜೋರಾಗಿ ನಕ್ಕನು. ಅವನ ನಗುವಿನ ಪ್ರತಿಧ್ವನಿಯಿಂದ ಆ ಜಡ ಬೆಟ್ಟಗಳೂ ಕಂಪಿಸಿದವು. ನಾನು ಮನಸ್ಸಿನಲ್ಲೇ "ಭಾರೀ ಭಯಂಕರ ವ್ಯಕ್ತಿ ಇವನು" ಎಂದುಕೊಂಡೆ.

ಆ ತಂಡದ ಇತರೆಯವರು ತಾವು ಲೂಟಿಮಾಡಿದ ಮಾಲುಗಳನ್ನು ಸರದಾರನ ಮುಂದೆ ಇಡತೊಡಗಿದರು. ಅದರಲ್ಲಿ ಹಲವು ಬಂದೂಕುಗಳು, ಗುಂಡುಗಳು, ರೊಟ್ಟಿಗಳು ಮತ್ತು ಬಟ್ಟೆಗಳೂ ಇದ್ದವು. ನನ್ನನ್ನೂ ತಲಾಶ್ ಮಾಡಿದರು. ನನ್ನ ಹತ್ತಿರ ಆರು ಗುಂಡುಗಳ ಒಂದು ಪಿಸ್ತೂಲು ಇತ್ತು. ಪಿಸ್ತೂಲು ಕೈಗೆ ಬಂದದ್ದಕ್ಕೆ ಸರದಾರ ಕುಣಿದಾಡಿದನು ಮತ್ತು ಅದನ್ನು ಹಿಂದೆಮುಂದೆ ತಿರುಗಿಸಿ ನೋಡತೊಡಗಿದನು. ಅಲ್ಲೇ ಆಗಲೇ ಮಾಲುಗಳನ್ನು ತಮ್ಮ ತಮ್ಮಲ್ಲಿ ಹಂಚಿಕೊಳ್ಳಲಾರಂಭಿಸಿರು. ಎಲ್ಲರಿಗೂ ಸಮನಾದ ಪಾಲು ದೊರೆಯಿತು. ಆದರೆ ನನ್ನ ರಿವಾಲ್ವರ್ ಅದರಲ್ಲಿ ಸೇರಿರಲಿಲ್ಲ. ಅದು ಸರದಾರ ಸಾಹೇಬನ ಸ್ವಂತ ಆಸ್ತಿಯಾಗಿತ್ತು.

ಸ್ವಲ್ಪ ಹೊತ್ತು ವಿಶ್ರಾಂತಿ ಪಡೆದ ಮೇಲೆ ಮತ್ತೆ ಯಾತ್ರೆ ಶುರುವಾಯಿತು. ಈ ಸಲ ನನ್ನ ಕಾಲಿನ ಕಟ್ಟುಗಳನ್ನು ಬಿಚ್ಚಲಾಯಿತು. ಜೊತೆಯಲ್ಲಿ ನಡೆದುಬರಲು ಹೇಳಿದರು. ದಾರಿ ಗೊತ್ತಾಗಬಾರದೆಂದು ಕಣ್ಣಿಗೆ ಬಟ್ಟೆ ಕಟ್ಟಿದರು. ನನ್ನ ಕೈಗಳನ್ನು ಹಗ್ಗದಿಂದ ಕಟ್ಟಲಾಗಿತ್ತು. ಹಗ್ಗದ ಒಂದು ತುದಿಯನ್ನು ಒಬ್ಬ ಅಫ್ರೀದಿ ಹಿಡಿದಿದ್ದನು.

ನಡೆದು ನಡೆದು ನನ್ನ ಕಾಲು ನೋಯತೊಡಗಿತು. ಆದರೆ ಅವರ ಗಂತವ್ಯ ಸ್ಥಾನ ಇನ್ನೂ ಬಂದಿರಲಿಲ್ಲ. ಮೇಲೆ ಜೇಷ್ಠ ಮಾಸದ ಸೂರ್ಯ ಹೊಳೆಯುತ್ತಿದ್ದನು. ಕಾಲು ಸುಡುತ್ತಿತ್ತು. ಬಾಯಾರಿಕೆಯಿಂದ ಗಂಟಲು ಒಣಗುತ್ತಿತ್ತು. ಆದರೆ ಅವರುಗಳು ಸಲೀಸಾಗಿ ನಡೆದುಹೋಗುತ್ತಿದ್ದರು. ತಮ್ಮತಮ್ಮಲ್ಲಿ ಮಾತಾಡಿಕೊಳ್ಳುತ್ತಿದ್ದರು. ಆದರೆ ಅವರ ಒಂದೂ ಮಾತು ನನಗೆ ಅರ್ಥವಾಗುತ್ತಿರಲಿಲ್ಲ. ಯಾವಾಗಲೋ ಒಂದೋ ಎರಡೋ ಶಬ್ದ ಅರ್ಥವಾಗುತ್ತಿತ್ತು. ಆದರೆ ಬಹಳಷ್ಟು ಏನೂ ಅರ್ಥವಾಗುತ್ತಿರಲಿಲ್ಲ. ಈ ಸಲ ತಮಗೆ ದೊರೆತ ಗೆಲುವಿನಿಂದ ಅವರುಗಳು ಸಂತುಷ್ಟರಾಗಿದ್ದರು. ಒಬ್ಬ ಅಫ್ರೀದಿ ಒಂದು ಹಾಡು ಹೇಳತೊಡಗಿದ. ಅದು ಬಹಳ ಚೆನ್ನಾಗಿತ್ತು.

ಅಸದ್ ಖಾನ್ ಕೇಳಿದ– "ಸರದಾರ ಸಾಹೇಬರೇ ಆ ಹಾಡು ಏನು?"

ಸರದಾರ ಸಾಹೇಬನು ಹೇಳಿದನು– "ಅದರ ಭಾವ ನೆನಪಿದೆ. ಭಾವ ಏನೆಂದರೆ– 'ಒಬ್ಬ ಅಫ್ರೀದಿ ಹೋಗುತ್ತಾ ಇದ್ದಾನೆ. ಅವನ ಹೆಂಡತಿ ಎಲ್ಲಿಗೆ ಹೋಗುತ್ತಿದ್ದೀಯಾ' ಅಂತ ಕೇಳುತ್ತಾಳೆ.

ಯುವಕ – 'ನಿನಗೆ ಆಹಾರ ಮತ್ತು ಬಟ್ಟೆ ತರುವ ಸಲುವಾಗಿ ಹೋಗುತ್ತಿದ್ದೇವೆ.' ಎನ್ನುತ್ತಾನೆ.

ಹೆಂಡತಿ ಕೇಳುತ್ತಾಳೆ– 'ಮಕ್ಕಳಿಗೆ ಏನೂ ತರೋದಿಲ್ಲವೇನು?'

ಯುವಕ ಹೇಳುತ್ತಾನೆ– 'ದೊಡ್ಡವನಾದ ಮೇಲೆ ಯುದ್ಧ ಮಾಡಿ ತನ್ನ ಪ್ರೇಮಿಗೆ ಆಹಾರ ಮತ್ತು ಬಟ್ಟೆ ತರಲೆಂದು ಮಗುವಿಗೆ ಬಂದೂಕು ತರುತ್ತೇನೆ.'

ಹೆಂಡತಿ ಹೇಳುತ್ತಾಳೆ– 'ಯಾವಾಗ ಬರುತ್ತೀ ಹೇಳು?'

ಯುವಕ ಹೇಳುತ್ತಾನೆ– 'ಏನಾದರೂ ಗೆದ್ದಕೊಂಡ ನಂತರದಲ್ಲಷ್ಟೇ ಬರುತ್ತೇನೆ ಇಲ್ಲ ಅಂದರೆ ಸತ್ತು ಹೋಗುತ್ತೀನಿ.'

ಹೆಂಡತಿ ಹೇಳುತ್ತಾಳೆ– 'ಶಹಬ್ಬಾಸ್, ಹೋಗು. ನೀನು ವೀರ. ನೀನು ಖಂಡಿತಾ ಯಶಸ್ವಿಯಾಗುತ್ತೀಯ'

ಆ ಹಾಡು ಕೇಳಿ ನಾನು ಮಂತ್ರಮುಗ್ಧನಾದೆ. ಹಾಡು ಮುಗಿಯುತ್ತಿದ್ದಂತೆ ನಾವುಗಳು ನಿಂತೆವು. ನನ್ನ ಕಣ್ಣ ಪಟ್ಟಿಗಳನ್ನು ಕಳಚಲಾಯಿತು. ಎದುರುಗಡೆ ದೊಡ್ಡ ಮೈದಾನ ಇತ್ತು. ಅವರುಗಳು ಇರಲೆಂದು ಅದರ ಸುತ್ತಲೂ ಗುಹೆಗಳನ್ನು ಮಾಡಿದ್ದರು.

ಮತ್ತೊಮ್ಮೆ ನನ್ನನ್ನು ತಲಾಶ್ ಮಾಡಲಾಯಿತು. ಈ ಸಲ ನನ್ನ ಬಟ್ಟೆಗಳನ್ನು ಕಳಚಲಾಯಿತು. ಮೈ ಮೇಲೆ ಬರೀ ಪೈಜಾಮಾ ಮಾತ್ರ ಉಳಿದಿತ್ತು. ಎದುರುಗಡೆ ಒಂದು ಭಾರೀ ಚಪ್ಪಡಿಯನ್ನು ಇಡಲಾಗಿತ್ತು. ಎಲ್ಲರೂ ಸೇರಿಕೊಂಡು ಅದನ್ನು ಸರಿಸಿದರು. ನನ್ನನ್ನು ಅತ್ತಲೇ ಕರೆದೊಯ್ದರು. ನನ್ನ ಆತ್ಮ ಕಂಪಿಸಿತು. ಇವರಂತೂ ನನ್ನನ್ನು ಜೀವಂತವಾಗಿ ಸಮಾಧಿಗೆ ತಳ್ಳಿಬಿಡುತ್ತಾರೆ. ನಾನು ಬಹಳ ನೋವಿನ

ಮುಖ ಮಾಡಿ ಸರದಾರನ ಕಡೆ ತಿರುಗಿ ಹೇಳಿದೆ– "ಸರದಾರ್ ಸರಕಾರ ನಿಮಗೆ ಹಣ ಕೊಡುತ್ತೆ ನನ್ನನ್ನು ಕೊಲ್ಲಬೇಡಿ"

ಸರದಾರ್ ನಕ್ಕು ಹೇಳಿದ– 'ನಿನ್ನನ್ನು ಯಾರು ಕೊಲ್ಲುತ್ತಾರೆ. ಸೆರೆಯಲ್ಲಿಟ್ಟಿರುತ್ತೀವಿ. ಈ ಮನೆಯಲ್ಲಿ ಬಂದಿಯಾಗಿರುತ್ತೀಯ. ಹಣ ಬಂದ ಮೇಲೆ ನಿನ್ನನ್ನು ಬಿಡಲಾಗುತ್ತದೆ.'

ಸರದಾರನ ಮಾತು ಕೇಳಿ ನನಗೆ ಜೀವದಲ್ಲಿ ಜೀವ ಬಂದ ಹಾಗಾಯಿತು. ಸರದಾರನು ನನ್ನ ಪಾಕೆಟ್ ಬುಕ್ ಮತ್ತು ಪೆನ್ಸಿಲ್ ಮುಂದಿಡುತ್ತ– 'ತಗೋ ಇದರಲ್ಲಿ ಬರಿ. ಒಂದು ಪೈಸೆ ಕಮ್ಮಿ ಬಂದರೂ ನಿನ್ನ ಪ್ರಾಣಕ್ಕೆ ರಕ್ಷಣೆ ಇಲ್ಲ' ಎಂದನು.

ನಾನು ಕಮೀಶನರ್ ಹೆಸರಿಗೆ ಒಂದು ಪತ್ರ ಬರೆದೆ. ಆ ಜನರು ನನ್ನನ್ನು ಅದೇ ಕತ್ತಲೆ ಕೋಣೆಯಲ್ಲಿ ಕೂಡಿಹಾಕಿ ಹಗ್ಗ ಎಳೆದರು.

*        *        *        *

ಸರದಾರ್ ಸಾಹೇಬರು ಒಂದು ದೀರ್ಘ ನಿಟ್ಟುಸಿರು ಬಿಟ್ಟು ಹೇಳತೊಡಗಿದರು. –"ಅಸದ್ ಖಾನ್ ಆ ಬಾವಿಯಲ್ಲಿ ನನ್ನನ್ನು ನೇತುಹಾಕಿದ ಕ್ಷಣದಲ್ಲಿ ನನ್ನ ಅಂತರಾತ್ಮವು ಕಂಪಿಸುತ್ತಿತ್ತು . ಕೆಳಗೆ ಕತ್ತಲೆಯಿದ್ದ ಜಾಗದಲ್ಲಿ ಬೆಳುದಿಂಗಳು ಹರಡಿತ್ತು. ಒಳಗಿನಿಂದ ತೀರ ಚಿಕ್ಕದೂ ಆಗಿರಲಿಲ್ಲ ದೊಡ್ಡದೂ ಆಗಿರಲಿಲ್ಲ. ನೆಲ ತರಕಲು ತರಕಲಾಗಿತ್ತು. ವರ್ಷಗಟ್ಟಲೆ ಇಲ್ಲಿ ನೀರಿನ ಧಾರೆಯು ಹರಿದಿದ್ದಿರಬೇಕು ಮತ್ತು ಅದರಿಂದಲೇ ಈ ಹಳ್ಳ(ತಗ್ಗು) ಉಂಟಾಗಿರಬೇಕು ಎನಿಸುತ್ತಿತ್ತು. ಕಲ್ಲಿನ ದಪ್ಪ ಗೋಡೆಯಿಂದ ಆ ಹಳ್ಳ ಸುತ್ತುವರಿಯಲ್ಪಟ್ಟಿತ್ತು. ಎಲ್ಲೆಲ್ಲಿ ಅಲ್ಲಿ ರಂಧ್ರಗಳಿದ್ದುವೋ ಅವುಗಳಿಂದ ಬೆಳಕು ಮತ್ತು ಗಾಳಿ ಬರುತ್ತಿತ್ತು. ಕೆಳಕ್ಕೆ ಹೋಗಿ ನಾನು ನನ್ನ ಸ್ಥಿತಿ–ಗತಿಯ ಬಗ್ಗೆ ಚಿಂತಿಸತೊಡಗಿದೆ. ಮನಸ್ಸು ತುಂಬ ಗಾಬರಿಗೊಳ್ಳುತ್ತಿತ್ತು. ಯಮನ ಕೋಣೆಯ ವೇದನೆಯನ್ನು ಅನುಭವಿಸುವುದೂ ನನ್ನ ಹಣೆಯಲ್ಲಿ ಬರೆದಿತ್ತು.

ಮೆಲ್ಲ ಮೆಲ್ಲಗೆ ಸಂಜೆ ಕಾಲಿಟ್ಟಿತು. ಅವರುಗಳು ಇದುವರೆಗೆ ನನ್ನನ್ನೇನೂ ವಿಚಾರಿಸಿರಲಿಲ್ಲ. ಹಸಿವಿನಿಂದ ಜೀವ ಕಂಗಾಲಾಗಿತ್ತು. ಮತ್ತೆ ಮತ್ತೆ ನನ್ನನ್ನೂ ವಿಧಿಯನ್ನೂ ನಿಂದಿಸುತ್ತಿದ್ದೆ. ಮನುಷ್ಯ ಅಸಹಾಯಕನಾದಾಗ ದೈವವನ್ನು ನಿಂದಿಸುತ್ತಾನೆ.

ಅಂತೂ ಕೊನೆಗೆ ಯಾರೋ ಒಂದು ರಂಧ್ರದಿಂದ ನಾಲ್ಕು ದೊಡ್ಡ ದೊಡ್ಡ ರೊಟ್ಟಿಗಳನ್ನು ಹೊರಗಡೆಯಿಂದ ಎಸೆದರು. ರೊಟ್ಟಿಯ ಒಂದು ಚೂರು ಕಂಡ ಕೂಡಲೇ ನಾಯಿ ಅದರತ್ತ ಓಡುವಂತೆ ನಾನೂ ಓಡಿ ಅದನ್ನು ಎತ್ತಿಕೊಂಡು ಆ

ರಂಧ್ರದತ್ತ ನೋಡತೊಡಗಿದೆ. ಆದರೆ ಆ ಮೇಲೆ ಯಾರೂ ಏನನ್ನೂ ಎಸೆಯಲಿಲ್ಲ ಮತ್ತು ಯಾವುದೇ ಅದೇಶ ನೀಡಲೂ ಇಲ್ಲ. ಕುಳಿತುಕೊಂಡು ರೊಟ್ಟಿಗಳನ್ನು ತಿನ್ನತೊಡಗಿದೆ. ಸ್ವಲ್ಪ ಹೊತ್ತಿನ ನಂತರ ಅದೇ ರಂಧ್ರದ ಮೇಲೆ ಯಾರೋ ನೀರು ತುಂಬಿದ ಒಂದು ಬಟ್ಟಲನ್ನು ಇರಿಸಿದ್ದರು. ನಾನು ದೇವರಿಗೆ ವಂದಿಸುತ್ತ ನೀರು ಎತ್ತಿಕೊಂಡು ಕುಡಿದೆ. ಜೀವಕ್ಕೆ ತೃಪ್ತಿಯಾದ ಮೇಲೆ 'ಇನ್ನಷ್ಟು ನೀರು ಬೇಕು' ಎಂದುಹೇಳಿದೆ.

ಇದಕ್ಕೆ ಗೋಡೆಯ ಆ ಕಡೆಯಿಂದ ಒಂದು ಭೀಷಣ ಅಟ್ಟಹಾಸ ಕೇಳಿ ಬಂತು. ಯಾರೋ ಖಣಖಣ ದನಿಯಲ್ಲಿ ಹೇಳಿದರು– 'ನೀರು ಸಿಗುವುದು ಇನ್ನು ನಾಳೆಗೆ. ಬಟ್ಟಲು ಕೊಟ್ಟುಬಿಡು; ಕೊಡದೆ ಇದ್ದರೆ ನಾಳೆನೂ ನೀರು ಸಿಕ್ಕಲ್ಲ.'

ಮಾಡೋದೇನು, ಸೋತು ಬಟ್ಟಲನ್ನು ಅಲ್ಲೇ ಇಟ್ಟುಬಿಟ್ಟೆ.

ಹೀಗೇ ಹಲವು ದಿನಗಳು ಕಳೆದುಹೋದವು. ದಿನವೂ ಎರಡೂ ಹೊತ್ತು ನಾಲ್ಕು ರೊಟ್ಟಿ, ಮತ್ತು ಒಂದು ಲೋಟ ನೀರು ದೊರೆಯುತ್ತಿತ್ತು. ಕ್ರಮೇಣ ನಾನೂ ಈ ನೀರಸ ಜೀವನಕ್ಕೆ ಹೊಂದಿಕೊಂಡೆ. ನಿರ್ಜನತೆ ಈಗ ಅಷ್ಟು ಕೆಟ್ಟನಿಸುತ್ತಿರಲಿಲ್ಲ. ಒಮ್ಮೊಮ್ಮೆ ನನ್ನ ಭಾಷೆಯಲ್ಲಿ ಕೆಲವೊಮ್ಮೆ ಪಶ್ತೋ ಭಾಷೆಯಲ್ಲಿ ಹಾಡುತ್ತಿದ್ದೆ. ಇದರಿಂದ ಆರೋಗ್ಯ ಸ್ವಲ್ಪ ಸುಧಾರಿಸುತ್ತಿತ್ತು ಮತ್ತು ಹೃದಯಕ್ಕೆ ನೆಮ್ಮದಿ ದೊರೆಯುತ್ತಿತ್ತು.

ಒದು ದಿನ ರಾತ್ರಿ ಹೊತ್ತು ನಾನು ಒಂದು ಪಶ್ತೋ ಗೀತೆ ಹಾಡುತ್ತಿದ್ದೆ. ತನ್ನನ್ನು ಸುಡಲಿರುವ ಬಕಗಳೊಂದಿಗೆ ಮಜನೂ ಹೇಳುತ್ತಿದ್ದ– 'ಯಾತ್ರಿಕರನ್ನು ಸುಟ್ಟು ಬೂದಿ ಮಾಡುವ ಆ ತಾಪ ನಿಮ್ಮಲ್ಲಿಲ್ಲವೆ? ಆ ತಾಪ ನನ್ನನ್ನೇಕೆ ಸುಡುತ್ತಿಲ್ಲ? ನನ್ನ ಅಂತರಂಗದಲ್ಲಿಯೇ ಒಂದು ಜ್ವಾಲೆ ಅಡಗಿರುವುದು ಅದಕ್ಕೆ ಕಾರಣವೆ?'

'ನೋಡು ಲೈಲಾ, ನಿನ್ನನ್ನು ಹುಡುಕುತ್ತ ಇಲ್ಲಿಗೆ ಬಂದಾಗ ದೇಹವನ್ನು ಮರಳಿನಿಂದ ಮುಚ್ಚಿಕೊಳ್ಳಬೇಡ. ಹಾಗೆ ಮಾಡಿದರೆ ಲೈಲಾಳ ಹೃದಯ ಗಾಜಿನ ಹಾಗೆ ಒಡೆದು ಹೋಗುತ್ತದೆ.'

ನಾನು ಹಾಡುವುದು ನಿಲ್ಲಿಸಿದೆ. ಅದೇ ಹೊತ್ತಿಗೆ ರಂಧ್ರದ ಮೂಲಕ ಯಾರೋ ಹೇಳಿದರು– 'ಕೈದಿ ಆ ಹಾಡನ್ನು ಇನ್ನೊಂದು ಸಲ ಹಾಡು!' ನಾನು ಬೆಚ್ಚಿಬಿದ್ದೆ. ಸ್ವಲ್ಪ ಸಂತೋಷವೂ ಆಯಿತು; ಆಶ್ಚರ್ಯವೂ ಆಯಿತು. ಕೇಳಿದೆ– 'ನೀನು ಯಾರು?'

ಅದೇ ರಂಧ್ರದಿಂದ ಉತ್ತರ ಸಿಕ್ಕಿತು– 'ನಾನು ತೂರಯಾ. ಸರದಾರನ ಮಗಳು'

'ನಿನಗೆ ಈ ಹಾಡು ಇಷ್ಟವಾಯಿತೆ?'– ನಾನು ಕೇಳಿದೆ.

'ಹೌದು ಇಷ್ಟ ಆಯಿತು ಕೈದಿ. ಹಾಡು ನಾನು ಇನ್ನೊಮ್ಮೆ ಕೇಳಲಿಚ್ಛಿಸುತ್ತೀನಿ. ಹಾಡು ಹಾಡುತ್ತಿರು. ಇದಕ್ಕೆ ಪ್ರತಿಯಾಗಿ ನಾನು ನಿನಗೆ ಇನ್ನೆರಡು ರೊಟ್ಟಿ ಮತ್ತು ಇನ್ನಷ್ಟು ನೀರು ಕೊಡುತ್ತೀನಿ'.

ತೂರಯಾ ಹೊರಟುಹೋದಳು. ಇದರ ನಂತರ ನಾನು ದಿನವೂ ರಾತ್ರಿ ಹೊತ್ತು ಅಗೋ ಹಾಡು ಹಾಡುತ್ತಿದ್ದೆ. ಮತ್ತು ತೂರಯಾ ಆ ಗೋಡೆಯ ಹತ್ತಿರ ಬಂದು ಕೇಳಿಸಿಕೊಳ್ಳುತ್ತಿದ್ದಳು.

ನನ್ನ ಮನೋರಂಜನೆಯ ಒಂದು ದಾರಿ ಹೀಗೆ ತೆರೆದುಕೊಂಡಿತು.

ಕ್ರಮೇಣ ಒಂದು ತಿಂಗಳು ಕಳೆಯಿತು. ಆದರೆ ನನ್ನನ್ನು ಬಿಡಿಕೊಳ್ಳಲು ಇಟಪಿಂಗೆ ಯಾರೂ ಹಣ ಕಳಿಸಲಿಲ್ಲ. ದಿನ ಕಳೆದಂತೆ ನನಗೆ ಜೀವನದ ಬಗ್ಗೆ ನಿರಾಶೆ ಉಂಟಾಗುತ್ತ ಹೋಯಿತು.

ಸರಿಯಾಗಿ ಒಂದು ತಿಂಗಳ ನಂತರ ಸರದಾರ ಬಂದು ಹೇಳಿದ–' ಕೈದಿ ನಾಳೆಯ ಒಳಗೆ ಹಣ ಬರದೆ ಹೋದರೆ ನಿನ್ನನ್ನು ಕೊಲ್ಲಲಾಗುವುದು. ಇನ್ನು ನಿನಗೆ ರೊಟ್ಟಿ ಕೊಡುತ್ತಾ ಇರಕ್ಕಾಗಲ್ಲ.' ನನಗೆ ಬದುಕುವ ಯಾವ ಆಶೆಯೂ ಉಳಿಯಲಿಲ್ಲ. ಆ ದಿನ ನಾನು ಏನನ್ನೂ ತಿನ್ನಲಿಲ್ಲ. ಏನನ್ನೂ ಕುಡಿಯಲೂ ಇಲ್ಲ. ರಾತ್ರಿ ಆಯಿತು. ಮತ್ತೆ ರೊಟ್ಟಿಗಳನ್ನು ಎಸೆಯಲಾಯಿತು. ಆದರೆ ತಿನ್ನಬೇಕೆನಿಸಲಿಲ್ಲ.

ಗೊತ್ತಾದ ವೇಳೆಗೆ ಬಂದ ತೂರಯಾ –'ಕೈದಿ ಹಾಡು ಹೇಳು'–ಎಂದಳು.

ಅಂದು ಯಾವುದೂ ಹಿಡಿಸುತ್ತಿರಲಿಲ್ಲ. ನಾನು ಸುಮ್ಮನಿದ್ದೆ.

ತೂರಯಾ ಮತ್ತೆ ಕೇಳಿದಳು– 'ಕೈದಿ ಏನು ನಿದ್ದೆ ಮಾಡ್ತಿದ್ದೀಯಾ?'

ನಾನು ತೀರ ಕಟ್ಟ ದನಿಯಲ್ಲಿ –'ಇಲ್ಲ ಈ ಹೊತ್ತು ನಿದ್ದೆ ಮಾಡಿ ಏನು ಮಾಡಲಿ. ನಾಳೆ ನಿದ್ದೆ ಮಾಡುತ್ತೀನಿ. ಕಾರಣ ಮತ್ತೆ ಏಳಲೇಬೇಕಾಗಲ್ಲ.'

'ಯಾಕೆ ಸರ್ಕಾರ ಹಣ ಕಳಿಸಲಿಲ್ಲವೇನು?'– ತೂರಯಾ ಕೇಳಿದಳು.

ನಾನು ಹೇಳಿದೆ– 'ಕಳಿಸಬಹುದೇನೋ. ಆದರೆ ನಾಳೆ ನನ್ನನ್ನು ಸಾಯಿಸಲಾಗುತ್ತದೆ. ನಾನು ಸತ್ತ ಮೇಲೆ ಹಣ ಬಂದರೂ ಅದರಿಂದ ನನಗೇನು ಪ್ರಯೋಜನ?'

ತೂರಯಾ ಸಾಂತ್ವನದ ದನಿಯಿಂದ ಹೇಳಿದಳು– 'ಆಯಿತು. ನೀನು ಹಾಡು. ನಾಳೆ ನೀನು ಸಾಯಲು ನಾನು ಬಿಡುವುದಿಲ್ಲ.'

ನಾನು ಹಾಡಲು ಶುರು ಮಾಡಿದೆ. ಹೋಗುವಾಗ ತೂರಯಾ– 'ಕೈದಿ ನಿನಗೆ ಮರದ ಸೆರೆಮನೆಯಲ್ಲಿ ಇರುವುದು ಇಷ್ಟವಾಗುತ್ತದೆಯೆ?' ಎಂದು ಕೇಳಿದಳು.

ನಾನು ಸಂತೋಷದಿಂದ 'ಆಗಬಹುದು' ಎಂದೆ.

ಮರುದಿನವೇ ಆ ಕತ್ತಲೆಯ ಕೂಪದಿಂದ ನನಗೆ ಬಿಡುಗಡೆಯಾಯಿತು.

ನನ್ನ ಎರಡೂ ಕಾಲುಗಳನ್ನು ದಪ್ಪನಾದ ಬಡಿಗೆಗಳಂಥ ರಂಧ್ರಗಳಲ್ಲಿ ಬಂಧಿಸಲಾಯಿತು. ಮರದಿಂದ ಮಾಡಿದ ಕೀಲುಗಳಿಂದ ನೆಲದ ತಗ್ಗುಗಳಲ್ಲಿ ಅವುಗಳನ್ನು ಕಟ್ಟಲಾಯಿತು.

ಸರದಾರನು ನನ್ನ ಬಳಿ ಬಂದು – 'ಅಯ್ಯಾ ಕೈದಿ ನಿನಗೆ ಇನ್ನೂ ಹದಿನೈದು ದಿನಗಳ ಅವಧಿಯನ್ನು ಹೆಚ್ಚಾಗಿ ನೀಡಲಾಗುವುದು. ಇದರ ನಂತರ ನಿನ್ನ ರುಂಡವನ್ನು ಮುಂಡದಿಂದ ಬೇರ್ಪಡಿಸಲಾಗುವುದು. ಇಂದು ನಿನ್ನ ಮನೆಗೆ ಎರಡನೇ ಪತ್ರ ಬರಿ. ಅವಧಿಯೊಳಗೆ ಹಣ ಬರಲಿಲ್ಲವಾದರೆ ನಿನ್ನನ್ನೇ ಹಲಾಲ್ ಮಾಡಿಬಿಡಲಾಗುವುದು.' ಎಂದನು.

ನಾನು ಎರಡನೇ ಪತ್ರ ಬರೆದು ಅವನ ಕೈಗೆ ಕೊಟ್ಟೆ.

ಸರದಾರ ಅತ್ತ ಹೋದ ಮೇಲೆ ತೂರಯಾ ಬಂದಳು. ಈಗ ತಾನೆ ಹೋದಳಲ್ಲ ಅವಳೇ ತೂರಯಾ. ಇವಳೇ ಆ ಸರದಾರನ ಮಗಳು. ನನ್ನ ಹಾಡು ಕೇಳುತ್ತಿದ್ದವಳು ಇವಳೇ. ಸರದಾರನಿಗೆ ಶಿಫಾರಸ್ ಮಾಡಿ ನನ್ನ ಪ್ರಾಣ ಉಳಿಸಿದವಳು ಇವಳೇ.

ತೂರಯಾ ಬಂದು ನನ್ನನ್ನು ನೋಡತೊಡಗಿದಳು. ನಾನು ಅವಳತ್ತ ನೋಡತೊಡಗಿದೆ.

ತೂರಯಾ ಕೇಳಿದಳು– 'ಕೈದಿ ಮನೆಯಲ್ಲಿ ನಿನ್ನವರು ಯಾರ್‍ಯಾರು ಇದ್ದಾರೆ?'

ನಾನು ಅತ್ಯಂತ ವ್ಯಾಕುಲ ಸ್ವರದಲ್ಲಿ ಹೇಳಿದೆ– 'ಇಬ್ಬರು ಚಿಕ್ಕ ಚಿಕ್ಕಹುಡುಗರು; ಬೇರೆ ಯಾರೂ ಇಲ್ಲ.'

ಅಫ್ರೀದಿಗಳು ಮಕ್ಕಳನ್ನು ತುಂಬ ಪ್ರೀತಿಸುತ್ತಾರೆಂದು ನನಗೆ ತಿಳಿದಿತ್ತು.

ತೂರಯಾ ಕೇಳಿದಳು– 'ಅವರ ತಾಯಿ ಇಲ್ಲವೆ?'

ನಾನು ಕೇವಲ ಕರುಣೆ ಹುಟ್ಟಿಸುವ ಸಲುವಾಗಿ ಹೇಳಿದೆ– 'ಇಲ್ಲ, ಅವರ ತಾಯಿ ಸತ್ತು ಹೋಗಿದ್ದಾಳೆ. ಅವು ಒಂಟಿಯಾಗಿವೆ. ಬದುಕಿವೆಯೋ ಸತ್ತಿವೆಯೋ ಗೊತ್ತಿಲ್ಲ, ಕಾರಣ ನನ್ನ ಹೊರತು ಅವರನ್ನು ನೋಡಿಕೊಳ್ಳುವವರು ಬೇರೆ ಯಾರೂ ಇರಲಿಲ್ಲ.'

ಹಾಗೆ ಹೇಳುತ್ತ ಹೇಳುತ್ತ ನನ್ನ ಕಣ್ಣು ತುಂಬಿಬಂದುವು. ತೂರಯಾಳ ಕಣ್ಣುಗಳೂ ಒದ್ದೆಯಾದವು. ತೂರಯಾ ತನ್ನ ಭಾವಾವೇಶವನ್ನು ಹತೋಟಿಗೆ ತಂದುಕೊಂಡು ಹೇಳಿದಳು– 'ಹಾಗಾದರೆ ನಿನ್ನವರು ಯಾರೂ ಇಲ್ಲವಾ? ಮಕ್ಕಳು ಒಂಟಿಯಾಗಿವೆಯಾ? ಅವು ತುಂಬ ಅಳುತ್ತಿರಬಹುದು'.

ನಾನು ಮನಸ್ಸಿನಲ್ಲೇ ಸಂತಸ ತಾಳುತ್ತ ಹೇಳಿದೆ– 'ಹೌದು, ಖಂಡಿತಾ ಅಳುತ್ತಾ ಇರುತ್ತಾರೆ. ಬಹುಶಃ ಸತ್ತು ಹೋಗಿರಲೂಬಹುದು. ಯಾರಿಗೆ ಗೊತ್ತು?'

ತೂರಯಾ ನನ್ನ ಮಾತನ್ನು ಮಧ್ಯದಲ್ಲೇ ತುಂಡರಿಸಿ ಹೇಳಿದಳು- 'ಇಲ್ಲ, ಇನ್ನೂ ಸತ್ತಿರಲ್ಲ. ನೀನು ವಾಸ ಮಾಡುವುದು ಎಲ್ಲಿ. ನಾನು ಹೋಗಿ ಪತ್ತೆ ಮಾಡಿಸ್ತೀನಿ'.

ನಾನು ಮನೆಯ ವಿಳಾಸ ನೀಡಿದೆ. 'ಆ ಜಾಗದಲ್ಲಿ ನಾನು ಹಲವಾರು ಸಲ ಹೋಗಿ ಬಂದಿದ್ದೀನಿ. ಪೇಟೆಯಲ್ಲಿ ವ್ಯಾಪಾರ ಮಾಡಿಕೊಂಡು ಬರಲು ಹೋಗುತ್ತೇನೆ. ಈ ಸಲ ಹೋದರೆ ನಿನ್ನ ಮಕ್ಕಳ ಸಮಾಚಾರ ತರುತ್ತೀನಿ' ಎಂದಳು.

ನಾನು ಸಂದೇಹದಿಂದ ಕೇಳಿದೆ- 'ಯಾವಾಗ ಹೋಗುತ್ತೀಯಾ?'

ಅವಳು ಸ್ವಲ್ಪ ಯೋಚಿಸಿ- 'ಈ ಗುರುವಾರ ಹೋಗುತ್ತೀನಿ. ಆಯಿತು. ನೀನು ಅದೇ ಹಾಡು ಹೇಳು'

ನಾನು ಇಂದು ಭಾರಿ ಸಂತೋಷ ಮತ್ತು ಹುರುಪಿನಿಂದ ಹಾಡಲಾರಂಭಿಸಿದೆ. ತೂರಯಾಳ ಮೇಲೆ ಇದರ ಪ್ರಭಾವ ಎಷ್ಟರ ಮಟ್ಟಿಗೆ ಆಗುತ್ತೆ ಅಂತ ನೋಡಿದೆ. ಅವಳ ದೇಹ ಕಂಪಿಸತೊಡಗಿತು. ಕಣ್ಣುಗಳಲ್ಲಿ ನೀರು ಹೊರಹೊಮ್ಮಿತು. ಕೆನ್ನೆಗಳು ಬಿಳಿಚಿಕೊಂಡವು. ಅವಳು ನಡುಗುತ್ತಾ ಕುಳಿತುಬಿಟ್ಟಳು. ಅವಳ ಸ್ಥಿತಿ ನೋಡಿ ನಾನು ಎರಡರಷ್ಟು ಉತ್ಸಾಹದಿಂದ ಹಾಡಲಾರಂಭಿಸಿದೆ. ಕೊನೆಯಲ್ಲಿ -'ತೂರಯಾ ಒಂದು ವೇಳೆ ನನ್ನನ್ನು ಸಾಯಿಸಿದರೆ ನನ್ನ ಸಾವಿನ ಸುದ್ದಿಯನ್ನು ಮಕ್ಕಳಿಗೆ ಮುಟ್ಟಿಸು.'

ನನ್ನ ಮಾತಿನ ಪ್ರಭಾವ ಅವಳ ಮೇಲೆ ಪೂರಾ ಆಯಿತು. ಗದ್ಗದಿತ ಕಂಠದಿಂದ ತೂರಯಾ ಹೇಳಿದಳು- 'ಕೈದಿ ನೀನು ಸಾಯುವುದಿಲ್ಲ. ನಿನ್ನ ಮಕ್ಕಳ ಸಲುವಾಗಿ ನಿನ್ನನ್ನು ಬಿಟ್ಟು ಬಿಡುತ್ತೇನೆ'

ನಾನು ನಿರಾಶನಾಗಿ ಹೇಳಿದೆ- 'ತೂರಯಾ, ನೀನು ಬಿಟ್ಟರೂ ನಾನು ಉಳಿಯುವುದಿಲ್ಲ. ಈ ಕಾಡಿನಲ್ಲಿ ಅಲೆದೂ ಅಲೆದೂ ಸತ್ತು ಹೋಗುತ್ತೇನೆ. ಇನ್ನು ನಿನಗೂ ತೊಂದರೆ ಉಂಟಾಗಬಹುದು. ನನ್ನ ಪ್ರಾಣದ ಸಲುವಾಗಿ ನಿನ್ನನ್ನು ನಾನು ಕಷ್ಟಕ್ಕೆ ಸಿಲುಕಿಸುವುದಿಲ್ಲ.'

ತೂರಯಾ ಹೇಳಿದಳು- 'ನನ್ನ ಬಗ್ಗೆ ನೀನು ಯೋಚನೆ ಮಾಡುವುದು ಬೇಡ. ನನ್ನ ಮೇಲೆ ಯಾರೂ ಸಂದೇಹಪಡಲ್ಲ. ನಾನು ಸರದಾರನ ಮಗಳು. ನಾನು ಏನು ಹೇಳುತ್ತೀನಿ ಅದನ್ನು ಎಲ್ಲರೂ ಒಪ್ಪಿಕೊಳ್ತಾರೆ. ಆದರೆ ನೀನು ಹೋಗಿ ಹಣ ಕಳುಹಿಸುತ್ತೀಯಾ ತಾನೆ?'

ನಾನು ಸಂತುಷ್ಟನಾಗಿ ಹೇಳಿದೆ- 'ಹೌದು ತೂರಯಾ ಹಣ ಕಳಿಸುತ್ತೀನಿ'

ಹೋಗುತ್ತ ತೂರಯಾ ಹೇಳಿದಳು- 'ಹಾಗಿದ್ದರೆ ನಾನು ನಿನ್ನನ್ನು ಬಿಡುಗಡೆ ಮಾಡಿಸುತ್ತೀನಿ'

ಈ ಘಟನೆಯ ನಂತರ ತೂರಯಾ ಯಾವಾಗಲೂ ನನ್ನ ಮಕ್ಕಳ ವಿಚಾರ ಮಾತಾಡ್ತಾ ಇದ್ದಳು. ಅಸದ್‌ಖಾನ್ ನಿಜಕ್ಕೂ ಈ ಅಫ್ರೀದಿಗಳಿಗೆ ಮಕ್ಕಳೆಂದರೆ

ಪಂಚ ಪ್ರಾಣ. ಆ ಬ್ರಹ್ಮ ಅವರನ್ನು ಬರ್ಬರ ಹಿಂಸ್ರ ಪಶುಗಳನ್ನಾಗಿ ಮಾಡಿದ್ದರೂ ಮಾನವ ಸ್ವಭಾವದಿಂದ ವಂಚಿತರನ್ನಾಗಿಯೂ ಮಾಡಿಲ್ಲ. ಆ ಗುರುವಾರ ಬಂತು. ಸರದಾರನಾಗಲಿ ಅವನ ತಂಡವಾಗಲಿ ಇದುವರೆಗೂ ಬರಲಿಲ್ಲ. ಆ ದಿನ ಸಾಯಂಕಾಲ ತೂರಯಾ ಬಂದು ಹೇಳಿದಳು– 'ಕೈದಿ, ಈಗ ನಾನು ಹೋಗಲು ಸಾಧ್ಯವಿಲ್ಲ. ಕಾರಣ ನಮ್ಮ ತಂದೆ ಇನ್ನಿದುವರೆಗೂ ಬರಲಿಲ್ಲ. ನಾಳೆಗೂ ಅವನು ಬರದಿದ್ದರೆ ರಾತ್ರಿಗೆ ನಿನ್ನನ್ನು ಬಿಟ್ಟು ಬಿಡುತ್ತೇನೆ. ನೀನು ನಿನ್ನ ಮಕ್ಕಳ ಬಳಿಗೆ ಹೋಗು. ಆದರೆ ಮಾತ್ರ ಹಣ ಕಳಿಸುವುದನ್ನು ಮರೆಯಬೇಡ. ನಾನು ನಿನ್ನ ಮೇಲೆ ನಂಬಿಕೆ ಇಟ್ಟಿದ್ದೀನಿ.'

ನಾನು ಆ ದಿನ ಬಹಳ ಉತ್ಸಾಹದಿಂದ ಹಾಡು ಹೇಳಿದೆ. ಅರ್ಧ ರಾತ್ರಿಯ ತನಕ ತೂರಯಾ ಕೇಳುತ್ತಿದ್ದಳು. ಆ ನಂತರ ಮಲಗಲು ಹೋದಳು. ನಾಳೆಯೂ ಸರದಾರ ಬರದೆ ಇರಲೆಂದು ನಾನು ಮನಸ್ಸಿನಲ್ಲೇ ದೇವರನ್ನು ಬೇಡುತ್ತಿದ್ದೆ. ಮರದಲ್ಲಿ ಬಂಧಿತವಾದ ನನ್ನ ಕಾಲು ಪೂರ್ತಿ ನಿಷ್ಪ್ರಯೋಜಕವಾಗಿಬಿಟ್ಟಿತ್ತು. ಇಡೀ ಶರೀರ ನೋಯುತ್ತಾ ಇತ್ತು. ಇದಕ್ಕಿಂತಲೂ ಕತ್ತಲೆಯ ಕೂಪದಲ್ಲೇ ಚೆನ್ನಾಗಿತ್ತು. ಕಾರಣ ಅಲ್ಲಿ ಕೈ ಕಾಲು ಆಡಿಸ ಬಹುದಿತ್ತು.

ಮಾರನೇ ದಿವೂ ತಂಡ ಹಿಂತಿರುಗಲಿಲ್ಲ. ಆ ಹೊತ್ತು ತೂರಯಾ ತುಂಬ ಚಿಂತಿತಳಾಗಿದ್ದಳು. ಸಂಜೆಗೆ ಬಂದು ನನ್ನ ಕಾಲುಗಳನ್ನು ಬಂಧನದಿಂದ ಬಿಡಿಸಿ– 'ಕೈದಿ ಈಗ ನೀನು ಹೊರಟುಬಿಡು. ನಡಿ, ನಾನು ನಿನ್ನನ್ನು ಸ್ವಲ್ಪ ದೂರ ಕಳಿಸಿಕೊಡುತ್ತೀನಿ' ಎಂದಳು.

ಸ್ವಲ್ಪ ಹೊತ್ತಿನ ತನಕ ನಾನು ಕೈಕಾಲುಗಳನ್ನು ಚಾಚಿಕೊಂಡು ಮಲಗಿದ್ದೆ. ನಿಧಾನವಾಗಿ ಕಾಲುಗಳು ಸರಿಹೋದವು. ದೇವರಿಗೆ ಧನ್ಯವಾದ ಹೇಳುತ್ತ ತೂರಯಾಳ ಜೊತೆ ಹೊರಟೆ.

ತೂರಯಾಳನ್ನು ಸಂತುಷ್ಟಗೊಳಿಸಲು ನಾನು ದಾರಿಯುದ್ದಕ್ಕೂ ಹಾಡಿಕೊಂಡೇ ಹೋದೆ. ತೂರಯಾ ಮತ್ತೆ ಮತ್ತೆ ಕೇಳಿ ಮತ್ತೆ ಮತ್ತೆ ಅಳುತ್ತಿದ್ದಳು. ಅರ್ಧ ರಾತ್ರಿಯ ಹೊತ್ತಿಗೆ ಒಂದು ಸರೋವರದ ಸಮೀಪಕ್ಕೆ ಹೋದೆವು. ಅಲ್ಲಿಗೆ ಹೋದ ಮೇಲೆ ತೂರಯಾ ಹೇಳಿದಳು–'ನೀನು ಸೀದಾ ಹೋಗಿಬಿಡು. ಪೆಶಾವರ ತಲುಪುತ್ತೀಯಾ. ನೋಡು ಎಚ್ಚರಿಕೆಯಿಂದ ಹೋಗಬೇಕು. ಇಲ್ಲದೆ ಹೋದರೆ ಯಾರಾದರೂ ನಿನ್ನನ್ನು ಬಂದೂಕಿಗೆ ಗುರಿಮಾಡಿಬಿಡುತ್ತಾರೆ. ತಗೋ ನಿನ್ನ ಬಟ್ಟೆಗಳು. ಆದರೆ ಹಣ ಕಳಿಸಬೇಕು. ನಿನಗೆ ನಾನು ಜಾಮೀನಾಗಿರುತ್ತೀನಿ. ಹಣ ಬರಲಿಲ್ಲ ಅಂದರೆ ನನ್ನ ಪ್ರಾಣ ಹೋಗುತ್ತೆ; ಅಷ್ಟೇ ಅಲ್ಲ ನಿನ್ನ ಪ್ರಾಣ ಕೂಡ. ಹಣ ಬಂತೂ ಅಂತ ಆದರೆ ನೀನು ಒಂದು ವೇಳೆ ಯಾರಾದರೂ ಅಫ್ರೀದಿಯನ್ನು ಕೊಂದರೂ ಯಾವ ಅಫ್ರೀದಿಯೂ ನಿನ್ನ ಮೇಲೆ ಕೈ ಮಾಡಲ್ಲ. ಹೋಗು ದೇವರು ನಿನ್ನನ್ನು ಕಾಪಾಡಲಿ ಮತ್ತು ನಿನ್ನ ಮಕ್ಕಳೊಂದಿಗೆ ಸೇರಿಸಲಿ.'

ತೂರಯಾ ಆ ನಂತರ ನಿಲ್ಲಲಿಲ್ಲ. ಹಾಡನ್ನು ಗುನುಗುತ್ತ ಹೊರಟುಹೋದಳು. ರಾತ್ರಿ ಎರಡು ಪ್ರಹರ ಕಳೆದಿತ್ತು. ಸುತ್ತಲೂ ಭಯಂಕರ ನಿಶ್ಶಬ್ದ ಆವರಿಸಿತ್ತು. ಕೇವಲ ಗಾಳಿ ಸುಂಯ್ ಸುಂಯ್ ಎಂದು ಬೀಸುತ್ತಿತ್ತು. ಆಕಾಶದ ಮಧ್ಯದಲ್ಲಿ ಚಂದ್ರನು ತನ್ನ ಹದಿನಾರೂ ಕಲೆಗಳಿಂದ ಶೋಭಿಸುತ್ತಿದ್ದನು. ಸರೋವರದ ದಡದ ಮೇಲೆ ಹೆಚ್ಚು ಹೊತ್ತು ಇರುವುದು ಸುರಕ್ಷಿತವಾಗಿರಲಿಲ್ಲ. ನಾನು ನಿಧಾನವಾಗಿ ದಕ್ಷಿಣದತ್ತ ನಡೆದೆ. ಸಲಸಲಕ್ಕೂ ಸುತ್ತಲೂ ನೋಡುತ್ತ ಹೋಗುತ್ತಿದ್ದೆ. ದೇವರ ದಯೆಯಿಂದ ಬೆಳಕು ಹರಿಯುವ ಹೊತ್ತಿಗೆ ಪೆಶಾವರದ ಗಡಿಯನ್ನು ತಲುಪಿದೆ.

ಗಡಿಯಲ್ಲಿ ಸಿಪಾಹಿಗಳ ಪಹರೆ ಇತ್ತು. ನನ್ನನ್ನು ನೋಡಿದ ಕೂಡಲೆ ಇಡೀ ಸೇನೆಯಲ್ಲಿ ಗುಜುಗುಜು ಶುರುವಾಯಿತು. ಎಲ್ಲರೂ ನಾನು ಸತ್ತೆನೆಂದೇ ತಿಳಿದಿದ್ದರು. ಜೀವಂತವಾಗಿ ಹಿಂತಿರುಗಿದ್ದು ನೋಡಿ ಎಲ್ಲರೂ ತುಂಬಾ ಸಂತೋಷಪಟ್ಟರು.

ಕರ್ನಲ್ ಹ್ಯಾಮಿಲ್ಟನ್ ಸಾಹೇಬರೂ ಸುದ್ದಿ ತಿಳಿಯುತ್ತಿದ್ದಂತೆ ನನ್ನನ್ನು ಭೇಟಿ ಮಾಡಲು ಬಂದರು. ಎಲ್ಲ ಸಮಾಚಾರ ಕೇಳಿ ಹೇಳಿದರು- 'ಮೇಜರ್ ಸಾಹೇಬರೆ, ನೀವು ಸತ್ತುಹೋಗಿದ್ದೀರಿ ಎಂದು ನಾನು ತಿಳಿದಿದ್ದೆ. ನಿಮ್ಮ ಎರಡು ಪತ್ರಗಳು ಬಂದಿದ್ದವು. ಆದರೆ ನೀವು ಅವನ್ನು ಬರೆದ್ದು ಅಂತ ನನಗೆ ಕನಸಿನಲ್ಲೂ ನಂಬಿಕೆ ಬರಲಿಲ್ಲ. ನಾನಂತೂ ಅವುಗಳನ್ನು ನಕಲಿ ಎಂದೇ ತಿಳಿದಿದ್ದೆ. ನೀವು ಜೀವ ಸಹಿತ ಉಳಿದು ಬಂದದ್ದಕ್ಕೆ ದೇವರಿಗೆ ಧನ್ಯವಾದಗಳನ್ನು ಹೇಳಬೇಕು.'

ನಾನು ಕರ್ನಲ್ ಸಾಹೇಬರಿಗೆ ಧನ್ಯವಾದಗಳನ್ನು ಹೇಳಿದೆ. ಮನಸ್ಸಿನಲ್ಲೇ ಅಂದುಕೊಂಡೆ: ಕಪ್ಪು ಮನುಷ್ಯ ಬರೆದದ್ದು ನಕಲಿ, ಆದರೆ ಅದೇ ಬಿಳಿ ಮನುಷ್ಯ ಬರೆದಿದ್ದಾಗಿದ್ದರೆ ಆಗ ಎರಡು ಯಾಕೆ ನಾಲ್ಕು ಸಾವಿರವನ್ನೇ ಕಳಿಸಿರುತ್ತಿದ್ದರು. ಅದೆಷ್ಟೊಂದು ಹಳ್ಳಿಗಳನ್ನು ಸುಟ್ಟುಹಾಕಲಾಗುತ್ತಿತ್ತೋ, ಇನ್ನು ಏನೇನೆಲ್ಲಾ ಆಗುತ್ತಿತ್ತೋ ಯಾರಿಗೆ ಗೊತ್ತು!

ನಾನು ಮಾತಿಲ್ಲದೆ ಮನೆಗೆ ಬಂದೆ. ಮಕ್ಕಳನ್ನು ನೋಡಿ ಮನಸ್ಸಿಗೆ ಅತೀವ ಸಂತೋಷವಾಯಿತು. ಅದೇ ದಿನ ಒಬ್ಬ ನಂಬಿಕಸ್ಥನಾದ ಆಳಿನ ಮೂಲಕ ಎರಡು ಸಾವಿರ ರೂಪಾಯಿಗಳನ್ನು ತೂರಯಾಳಿಗೆ ಕಳಿಸಿಕೊಟ್ಟೆ.

* * * *

ಸರದಾರನು ಒಂದು ತಣ್ಣನೆಯ ಉಸಿರು ತೆಗೆದುಕೊಂಡು ಹೇಳಿದ- 'ಅಸದ್ಖಾನ್ ನನ್ನ ಕಥೆ ಇನ್ನೂ ಮುಗಿದಿಲ್ಲ. ಅದರ ದುಃಖಾಂತ ಭಾಗ ಇನ್ನೂ ಉಳಿದಿದೆ. ಇಲ್ಲಿಗೆ ಬಂದ ಮೇಲೆ ನಿಧಾನವಾಗಿ ನನ್ನೆಲ್ಲ ಕಷ್ಟಗಳನ್ನುಮರೆತುಬಿಟ್ಟೆ. ಆದರೆ ತೂರಯಾಳನ್ನು ಮರೆಯಲು ಸಾಧ್ಯವಾಗಲಿಲ್ಲ. ತೂರಯಾಳ

ಕೃಪೆಯಿಂದಾಗಿಯೇ ನಾನು ನನ್ನ ಹೆಂಡತಿ ಮಕ್ಕಳೊಂದಿಗೆ ಒಂದುಗೂಡಲು ಸಾಧ್ಯವಾಯಿತು. ಅಷ್ಟೇ ಅಲ್ಲ, ಬದುಕೂ ದೊರೆತಿತ್ತು. ಅಂದ ಮೇಲೆ ಅವಳನ್ನು ನಾನು ಮರೆಯುವುದೆಂತು!'

ತಿಂಗಳುಗಳು ಮತ್ತು ವರ್ಷಗಳು ಕಳೆದುಹೋದವು. ತೂರಯಾಳನ್ನಾಗಲಿ ಅವಳ ತಂದೆಯನ್ನಾಗಲಿ ನೋಡಲಿಲ್ಲ. ತೂರಯಾ ಬರಲು ಹೇಳಿದ್ದಳು . ಆದರೆ ಅವಳು ಬರಲಿಲ್ಲ. ಒಂದು ವೇಳೆ ತೂರಯಾ ಬಂದುಬಿಟ್ಟರೆ ನಾನು ಸುಳ್ಳನೆಂದಾಗಿ ಬಿಡುತ್ತೇನೆಂಬ ಯೋಚನೆಯಿಂದ ಅಲ್ಲಿಂದ ಬಂದ ಮೇಲೆ ನನ್ನ ಹೆಂಡತಿಯನ್ನು ಅವಳ ತೌರಿಗೆ ಕಳುಹಿಸಿದ್ದೆ. ಆದರೆ ಮೂರು ವರ್ಷಗಳೇ ಕಳೆದು ಹೋದರೂ ತೂರಯಾ ಬರದೆ ಇದ್ದಾಗ ನಾನು ನಿಶ್ಚಿಂತನಾಗಿ ನನ್ನ ಹೆಂಡತಿಯನ್ನು ತವರಿನಿಂದ ಕರೆಸಿಕೊಂಡೆ. ನಾವು ಸುಖದಿಂದ ದಿನ ಕಳೆಯುತ್ತಿದ್ದಾಗ ಇದ್ದಕ್ಕಿದ್ದಂತೆ ದುರದೃಷ್ಟದ ಆ ಕ್ಷಣ ಬಂದೇ ಬಿಟ್ಟಿತು.

ಒಂದು ದಿನ ಸಾಯಂಕಾಲದ ಹೊತ್ತು ನಾನು ಮನೆಯ ಅಂಗಳದಲ್ಲಿ ಕುಳಿತುಕೊಂಡು ನನ್ನ ಹೆಂಡತಿಯೊಂದಿಗೆ ಮಾತು–ಕತೆ ಆಡುತ್ತಿದ್ದೆ. ಆಗ ಯಾರೋ ಮನೆಯ ಬಾಗಿಲನ್ನು ತಟ್ಟಿದ ಸದ್ದು ಕೇಳಿಸಿತು. ಮನೆಯ ಆಳು ಬಾಗಿಲು ತೆಗೆದ. ಒಬ್ಬ ಕಾಬೂಲಿ ಹೆಂಗಸು ನಿರ್ಭಯವಾಗಿ ಮೆಟ್ಟಿಲುಗಳನ್ನು ಹತ್ತಿಕೊಂಡು ಮೇಲೆ ಬಂದಳು. ಅವಳು ಅಂಗಳಕ್ಕೆ ಬಂದು ಶುದ್ಧ ಪಶ್ತೋ ಭಾಷೆಯಲ್ಲಿ 'ಸರದಾರರು ಎಲ್ಲಿದ್ದಾರೆ' ಎಂದು ಕೇಳಿದಳು. ನಾನು ಕೊಠಡಿಯೊಳಕ್ಕೆಬಂದು– 'ನೀನು ಯಾರು, ಏನು ಬೇಕು' ಎಂದು ಕೇಳಿದೆ.

ಆ ಹೆಂಗಸು ಕೆಲವು ಹವಳಗಳನ್ನು ಹೊರ ತೆಗೆಯುತ್ತ – 'ಈ ಹವಳಗಳನ್ನು ಮಾರಲು ಬಂದಿದ್ದೇನೆ. ಕೊಳ್ಳುತ್ತೀರಾ?' ಎಂದು ಕೇಳಿದಳು.

ನನ್ನ ಹೆಂಡತಿಯೂ ನನ್ನೊಂದಿಗೆ ಕೊಠಡಿಯೊಳಕ್ಕೆ ಬಂದಿದ್ದಳು. ಅವಳು ಹವಳಗಳನ್ನು ಕೈಗೆತ್ತಿಕೊಂಡು ನೋಡತೊಡಗಿದಳು. ಅದೇ ಕಾಬೂಲಿ ಹೆಂಗಸು – 'ಸರದಾರರೆ ಈ ಹೆಂಗಸು ಯಾರು, ನಿಮ್ಮವರೆ?' ಎಂದು ಕೇಳಿದಳು.

'ನನ್ನ ಹೆಂಡತೀನೆ, ಬೇರೆ ಇನ್ಯಾರು?' ಎಂದು ಉತ್ತರಿಸಿದೆ.

ಕಾಬೂಲಿ ಹೆಂಗಸು– 'ನಿಮ್ಮ ಹೆಂಡತಿ ಸತ್ತು ಹೋಗಿದ್ದಳಲ್ಲವೆ? ಏನು ನೀವು ಎರಡನೇ ಮದುವೆ ಮಾಡಿಕೊಂಡಿರಾ?' ಎಂದು ಕೇಳಿದಳು.

ನಾನು ರೋಷದಿಂದ ಹೇಳಿದೆ– 'ಬಾಯಿಮುಚ್ಚು. ಎಲ್ಲಿಯ ಮೂರ್ಖ ಹೆಂಗಸು ನೀನು. ನೀನು ಸತ್ತು ಹೋಗಿರಬಹುದು ಅಷ್ಟೆ.'

ಆದರೆ ನನ್ನ ಮಾತು ಕೇಳಿ ಅದು ಯಾಕೋ ಏನೋ ಆ ಕಾಬೂಲಿ ಹೆಂಗಸಿನ ಕಣ್ಣುಗಳು ಮಿನುಗತೊಡಗಿದವು. ಅವಳು ತುಂಬಾ ತೀಕ್ಷ್ಣ ಸ್ವರದಲ್ಲಿ

ಹೇಳಿದಳು- 'ನಿಜ, ನಾನು ಮೂರ್ಖಳಲ್ಲದೆ ಹೋಗಿದ್ದರೆ ನಿನ್ನನ್ನು ಅದು ಹೇಗೆ ತಾನೆ ಬಿಟ್ಟುಬಿಡುತ್ತಿದ್ದೆ? ಏ ನರಕದ ಕುನ್ನಿ ನನ್ನ ಹತ್ತಿರ ಸುಳ್ಳ ಹೇಳಿದೆಯಾ! ನೋಡುತ್ತಾ ಇರು, ನಿನ್ನ ಹೆಂಡತಿ ಸತ್ತಿರದಿದ್ದರೆ ಈಗ ಸತ್ತಳು!'

ಹೀಗೆಂದು ಹೇಳುತ್ತ ಹೇಳುತ್ತ ಸಿಂಹಿಣಿಯ ಹಾಗೆ ಮುಗಿಬಿದ್ದು ಅವಳು ಒಂದು ಹರಿತವಾದ ಚೂರಿಯನ್ನು ಹೊರತೆಗೆದು ನನ್ನ ಹೆಂಡತಿಯ ಎದೆಗೆ ತಿವಿದುಬಿಟ್ಟಳು. ಅವಳನ್ನು ತಡೆಯಲೆಂದು ನಾನು ಮುನ್ನುಗ್ಗಿದೆ. ಆದರೆ ಅವಳು ಹಾರಿ ಅಂಗಳಕ್ಕೆ ಹೋಗಿ ಹೇಳಿದಳು-' ಈಗ ಗುರುತಿಟ್ಟುಕೋ ನಾನೇ ತೂರಯಾ. ನಾನು ಇವತ್ತು ನಿನ್ನ ಮನೆಯಲ್ಲಿರೋದಕ್ಕೋಸ್ಕರ ಬಂದಿದ್ದೆ. ನಿನ್ನನ್ನು ಮದುವೆಯಾಗಿ ನಿನ್ನವಳಾಗಿ ಇರುತ್ತಾ ಇದ್ದೆ. ನಿನಗೋಸ್ಕರ ನಾನು ಅಪ್ಪ, ಮನೆ, ಎಲ್ಲ ಬಿಟ್ಟುಬಂದಿದ್ದೆ. ಆದರೆ ನೀನು ಸುಳ್ಳುಗಾರ, ಮೋಸಗಾರ. ಈಗ ನೀನು ನಿನ್ನ ಹೆಂಡತಿಯ ಹೆಸರು ಹೇಳಿ ಅಳು. ನಾನು ಇವತ್ತಿನಿಂದ ನಿನ್ನ ಹೆಸರು ಹೇಳಿಕೊಡು ಅಳುತ್ತಿರುತ್ತೀನಿ.' ಹೀಗೆ ಹೇಳುತ್ತ ಅವಳು ವೇಗವಾಗಿ ಕೆಳಗೆ ಹೋಗಿಬಿಟ್ಟಳು.

ಈಗ ನಾನು ನನ್ನ ಹೆಂಡತಿಯ ಸಮೀಪಕ್ಕೆ ಹೋದೆ. ಅವಳು ಹಾಕಿದ ಚೂರಿ ನೇರವಾಗಿ ಹೃದಯಕ್ಕೆ ತಾಕಿತ್ತು. ಒಂದೇ ಏಟಿಗೆ ಅವಳ ಕತೆ ಮುಗಿದಿತ್ತು. ಡಾಕ್ಟರನ್ನು ಕರೆಸಿದೆ. ಆದರೆ ಅವಳು ಸತ್ತುಹೋಗಿದ್ದಳು.

ಹಾಗೆ ಹೇಳುತ್ತ ಸರದಾರ್ ಸಾಹೇಬರ ಕಣ್ಣು ತುಂಬಿಬಂದುವು. ತಮ್ಮ ಒದ್ದೆ ಕಣ್ಣುಗಳನ್ನು ಒರೆಸಿಕೊಂಡು ಹೇಳಿದರು- 'ಅಸದ್ ಖಾನ್ ತೂರಯಾ ಇಂಥ ಪಿಶಾಚ ಹೃದಯದವಳಾಗಿರುತ್ತಾಳೆಂದು ನಾನು ಕನಸು ಮನಸಿನಲ್ಲೂ ಎಣಿಸಿರಲಿಲ್ಲ. ನಾನು ಅವಳನ್ನು ಮುಂಚೇನೆ ಗುರುತು ಹಿಡಿದಿದ್ದರೆ ಈ ಆಪತ್ತು ಆಗೋದಕ್ಕೆ ಬಿಡುತ್ತಿರಲಿಲ್ಲ. ಆದರೆ ಕೋಣೆಯಲ್ಲಿ ಕತ್ತಲೆ ಕವಿದಿತ್ತು. ಅದೂ ಅಲ್ಲದೆ ನಾನು ಅವಳ ಕಡೆಯಿಂದ ಬಹಳ ನಿರಾಶನಾಗಿ ಬಿಟ್ಟಿದ್ದೆ. ಆ ನಂತರ ತೂರಯಾ ಮತ್ತೆಂದೂ ಬರಲಿಲ್ಲ. ಈಗ ಯಾವಾಗ ನನ್ನನ್ನು ನೋಡಿದರೂ ನನ್ನ ಕಡೆ ನೋಡುತ್ತ ಸರ್ಪಿಣಿಯ ಹಾಗೆ ಬುಸುಗುಡುತ್ತ ಹೋಗಿಬಿಡುತ್ತಾಳೆ. ಇವಳನ್ನು ನೋಡಿ ನನ್ನ ಹೃದಯ ಕಂಪಿಸತೊಡಗುತ್ತದೆ ಮತ್ತು ನನ್ನ ಮೇಲೆ ಹತೋಟಿ ಕಳೆದುಕೊಂಡು ಬಿಡುತ್ತೇನೆ. ಇವಳನ್ನು ಹಿಡಿಸಿಕೊಡಲೆ ಎಂದು ಹಲವು ಸಲ ಯತ್ನಿಸಿದೆ. ಆದರೆ ಅವಳನ್ನು ನೋಡುತ್ತಲೇ ನಾನು ಪೂರಾ ನಿಷ್ಪ್ರಯೋಜಕನಾಗಿ ಬಿಡುತ್ತೇನೆ. ಕೈಕಾಲುಗಳು ನನ್ನ ಹತೋಟಿಗೆ ಸಿಗುವುದೇ ಇಲ್ಲ. ನನ್ನೆಲ್ಲ ಪೌರುಷ ಮಾಯವಾಗಿ ಬಿಡುತ್ತೆ.

ಇಷ್ಟೇ ಅಲ್ಲ. ತೂರಯಾಳಿಗೆ ಈಗಲೂ ನನ್ನ ಮೇಲೆ ವ್ಯಾಮೋಹವಿದೆ. ನನ್ನ ಮಕ್ಕಳಿಗೆ ಒಂದಿಲ್ಲೊಂದು ಬಹಳ ಬೆಲೆ ಬಾಳುವ ವಸ್ತುಗಳನ್ನು ಕೊಟ್ಟು

ಹೋಗುತ್ತಾಳೆ. ಮಕ್ಕಳು ಸಿಗದೆ ಇದ್ದ ದಿನ ಬಾಗಿಲ ಒಳಗೆ ಎಸೆದು ಹೋಗುತ್ತಾಳೆ. ಅದರಲ್ಲಿ– 'ಸರದಾರ ಸಾಹೇಬರ ಮಕ್ಕಳಿಗೆ' ಎಂಬ ಬರಹವಿರುವ ಕಾಗದದ ಚೂರು ಇರುತ್ತದೆ.

ಈಗಲೂ ನನಗೆ ಈ ಹೆಂಗಸನ್ನು ಅರ್ಥಮಾಡಿಕೊಳ್ಳಲಾಗಿಲ್ಲ. ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಿದಷ್ಟೂ ನೆನಪು ಕಠಿಣವಾಗುತ್ತದೆ. ಇವಳೇನು ಮಾನವಳೋ ಇಲ್ಲ ದಾನವಳೋ ಎಂಬುದು ಅರ್ಥವಾಗುವುದಿಲ್ಲ!

ಅದೇ ಹೊತ್ತಿಗೆ ಸರದಾರ ಸಾಹೇಬರ ಮಗ ಬಂದು– 'ನೋಡಿ ಈಗ ಅದೇ ಹೆಂಗಸು ಚಿನ್ನದ ತಾಯಿತ ಕೊಟ್ಟುಹೋಗಿದ್ದಾಳೆ' ಎಂದುಹೇಳಿದ.

ಸರದಾರರು ನನ್ನ ಕಡೆ ನೋಡಿ ಹೇಳಿದರು– 'ನೋಡಿದೆಯಲ್ಲ ಅಸದ್ ಖಾನ್, ನಾನು ನಿನಗೆ ಹೇಳಿರಲಿಲ್ಲವಾ? ನೋಡು ಇವತ್ತೂ ಈ ತಾಯಿತ ಕೊಟ್ಟು ಹೋಗಿದ್ದಾಳೆ. ಅದೆಷ್ಟು ತಾಯಿತಗಳು ಮತ್ತು ಅದೆಷ್ಟು ಇತರೆ ವಸ್ತುಗಳನ್ನು ಅರ್ಜುನ್ ಮತ್ತು ನಿಹಾಲ್‌ರಿಗೆ ಕೊಟ್ಟುಹೋಗಿರಬಹುದೋ ಗೊತ್ತಿಲ್ಲ. ತೂರಯಾ ತುಂಬ ವಿಚಿತ್ರ ಹೆಂಗಸು ಎಂದಷ್ಟೇ ಹೇಳಬಲ್ಲೆ.'

* * * *

ಸರದಾರ ಸಾಹೇಬರಿಂದ ಬೀಳ್ಕೊಂಡು ನಾನು ಮನೆಯ ಕಡೆ ಹೊರಟೆ. ನಾಲ್ಕು ರಸ್ತೆಗಳು ಕೂಡುವ ಆ ಸ್ಥಳದಿಂದ ಮುದುಕನ ಶವವನ್ನು ತೆಗೆಯಲಾಗಿತ್ತು ಆದರೆ ಅಲ್ಲಿಗೆ ಹೋದಾಗ ನನ್ನ ರೋಮಗಳು ನಿಮಿರಿ ನಿಂತವು. ನನಗೇ ಅರಿವಿಲ್ಲದಂತೆ ಒಂದು ನಿಮಿಷ ಅಲ್ಲಿ ನಿಂತುಕೊಂಡೆ. ಒಮ್ಮೆಲೇ ಹಿಂದೆ ನೋಡಿದೆ. ನೆರಳಿನ ಹಾಗೆ ಒಬ್ಬ ಹೆಂಗಸು ನನ್ನ ಹಿಂದೆ ಹಿಂದೆಯೇ ಬರುತ್ತಿದ್ದಳು. ನಾನು ನಿಂತದ್ದು ನೋಡಿ ಆ ಹೆಂಗಸು ನಿಂತು ಒಂದು ಅಂಗಡಿಯಲ್ಲಿ ಕೆಲವು ಸಾಮಾನುಗಳನ್ನು ವ್ಯಾಪಾರ ಮಾಡತೊಡಗಿದಳು.

'ಅವಳು ತೂರಯಾಳೆ?– ಎಂದು ನನ್ನ ಹೃದಯವನ್ನು ಪ್ರಶ್ನಿಸಿದೆ.

'ಹೌದು, ಬಹುಶಃ ಅವಳೇ' ಎಂದುಹೃದಯ ಉತ್ತರಿಸಿತು.

ತೂರಯಾ ನನ್ನನ್ನು ಏಕೆ ಹಿಂಬಾಲಿಸುತ್ತಿದ್ದಾಳೆ? ಎಂದು ಯೋಚಿಸುತ್ತ ನಾನು ಮನೆ ತಲುಪಿದೆ. ಊಟ ಮಾಡಿ ಮಲಗಿದೆ. ಆದರೆ ಏನು ಮಾಡಿದರೂ ನಿದ್ರೆ ಹತ್ತದಷ್ಟು ಮಟ್ಟಿಗೆ ಇಂದಿನ ಘಟನೆಗಳ ಪ್ರಭಾವ ನನ್ನ ಮೇಲೆ ಆಗಿತ್ತು . ನಿದ್ರೆ ಮಾಡಲು ಯತ್ನಿಸಿದಷ್ಟೂ ನಿದ್ರೆ ನನ್ನಿಂದ ದೂರ ಓಡುತ್ತಿತ್ತು.

ಸೇನೆಯ ಗಡಿಯಾರ ಹನ್ನೆರಡು ಬಾರಿಸಿತು, ಒಂದು ಗಂಟೆ ಬಾರಿಸಿತು, ಎರಡು ಗಂಟೆ ಬಾರಿಸಿತು. ಆದರೆ ನಿದ್ರೆ ಮಾತ್ರ ಹತ್ತಿರ ಸುಳಿಯುತ್ತಿಲ್ಲ. ನಾನು

ಮಗ್ಗುಲು ಬದಲಾಯಿಸುತ್ತ ಮಲಗಲು ಪ್ರಾರಂಭಿಸಿದ್ದೆ. ಇದೇ ಚಿಂತೆಯಲ್ಲಿ ಯಾವಾಗ ನಿದ್ರೆ ನನ್ನನ್ನು ಆವರಿಸಿತೋ ನನಗೆ ಕಿಂಚಿತ್ತೂ ನೆನಪಿಲ್ಲ.

ನಾನು ನಿದ್ರೆ ಮಾಡುತ್ತಿದ್ದರೂ ನನ್ನ ಅರಿವು ಎಚ್ಚತ್ತಿತ್ತು. ತೂರಯಾಳನ್ನು ಬಹುಮಟ್ಟಿಗೆ ಹೋಲುತ್ತಿದ್ದ, ಆದರೆ ಅವಳಿಗಿಂತಲೂ ಹೆಚ್ಚು ಭಯಾನಕವಾದ ಆಕೃತಿಯ ಹೆಂಗಸೊಬ್ಬಳು ಗೋಡೆ ಒಡೆದು ಮನೆಯ ಒಳಗೆ ನುಗ್ಗಿ ಬಂದಿದ್ದಾಳೆಂದು ಭಾಸವಾಯಿತು. ಅವಳ ಕೈಯಲ್ಲಿ ಒಂದು ಹರಿತವಾದ ಚೂರಿ ಇದೆ. ಲಾಟೀನಿನ ಬೆಳಕಿನಲ್ಲಿ ಅದು ಹೊಳೆಯುತ್ತಿದೆ. ಅವಳು ಹೆಜ್ಜೆಯ ಮೇಲೆ ಹೆಜ್ಜೆ ಇಡುತ್ತ ಎಚ್ಚರಿಕೆಯ ಕಣ್ಣುಗಳಿಂದ ನೋಡುತ್ತ ನಿಧಾನವಾಗಿ ನನ್ನ ಕಡೆಗೆ ಮುಂದುವರಿಯುತ್ತಿದ್ದಾಳೆ. ಅವಳನ್ನು ನೋಡಿ ನಾನು ಏಳಲಿಚ್ಛಿಸುತ್ತೇನೆ. ಆದರೆ ಕಾಲುಗಳು ಅವುಗಳಲ್ಲಿ ಜೀವವೇ ಇಲ್ಲವೇನೋ ಎಂಬಂತೆ ನನ್ನ ಹತೋಟಿಯಲ್ಲೇ ಇಲ್ಲ. ಆ ಹೆಂಗಸು ನನ್ನ ಹತ್ತಿರಕ್ಕೆ ಬಂದುಬಿಟ್ಟಳು. ಸ್ವಲ್ಪ ಹೊತ್ತು ನನ್ನ ಕಡೆ ನೋಡಿ ಅನಂತರ ಚೂರಿ ಹಿಡಿದಿದ್ದ ತನ್ನ ಕೈಯನ್ನು ಮೇಲಕ್ಕೆ ಎತ್ತಿದಳು. ನಾನು ಕಿರುಚಲು ಯತ್ನಿಸಿದೆ. ಆದರೆ ನನ್ನ ಗಂಟಲು ಕೂತುಹೋಯಿತು. ಶಬ್ದಗಳು ಕಂಠದಿಂದ ಹೊರಡಲೇ ಇಲ್ಲ. ಅವಳು ನನ್ನ ಎರಡೂ ಕೈಗಳನ್ನು ತನ್ನ ಮೊಳಕಾಲ ಕೆಳಗೆ ಒತ್ತಿಹಿಡಿದು ನನ್ನ ಎದೆಯ ಮೇಲೆ ಕುಳಿತುಬಿಟ್ಟಳು. ನಾನು ಒದ್ದಾಡತೊಡಗಿದೆ. ನನ್ನ ಕಣ್ಣುಗಳು ತೆರೆದುಕೊಂಡವು. ನಿಜಕ್ಕೂ ಒಬ್ಬ ಕಾಬೂಲಿ ಹೆಂಗಸು ನನ್ನ ಎದೆಯ ಮೇಲೆ ಹತ್ತಿ ಕೂತಿದ್ದಳು. ಅವಳ ಕೈಯಲ್ಲಿ ಚೂರಿ ಇತ್ತು. ಅವಳು ಚೂರಿ ಹಾಕಬೇಕೆಂದೇ ಬಯಸಿದ್ದಳು.

ನಾನು ಹೇಳಿದೆ– 'ಯಾರು ತೂರಯಾಳೇನು?'

ಇವಳು ನಿಜಕ್ಕೂ ತೂರಯಾಳೇ ಆಗಿದ್ದಳು. ಅವಳು ನನ್ನನ್ನು ಬಲವಾಗಿ ಅಮುಕುತ್ತ ಹೇಳಿದಳು– 'ಹೌದು, ನಾನು ತೂರಯಾಳೇ. ಈ ಹೊತ್ತು ನೀನು ನನ್ನ ತಂದೆಯನ್ನು ಕೊಂದಿದ್ದೀಯಾ. ಅದಕ್ಕೆ ಪ್ರತಿಯಾಗಿ ನಿನ್ನ ಪ್ರಾಣ ಹೋಗಲಿದೆ.'

ಹೀಗೆ ಹೇಳಿ ಅವಳು ತಾನು ಹಿಡಿದಿದ್ದ ಚೂರಿಯನ್ನು ಮೇಲಕ್ಕೆ ಎತ್ತಿದಳು. ಅದು ನನ್ನ ಜೀವನ್ಮರಣದ ಪ್ರಶ್ನೆಯ ಕ್ಷಣ. ನಾನು ಸಾಯಲು ಸಿದ್ಧನಿರಲಿಲ್ಲ. ಬದುಕಬೇಕೆಂಬ ಆಸೆ ನನ್ನಲ್ಲಿ ಸಾಹಸವನ್ನು ಜಾಗೃತಗೊಳಿಸಿತು. ನನ್ನ ಆಸೆಗಳು ಮತ್ತು ಹುರುಪು ಇನ್ನೂ ಉಳಿದಿದ್ದುವು. ನಾನು ನನ್ನ ಬಲಗೈಯನ್ನು ಬಿಡಿಸಿಕೊಳ್ಳಲು ಬಲವಾಗಿ ಯತ್ನಿಸಿದೆ. ಒಂದೇ ಎಳೆತಕ್ಕೆ ನನ್ನ ಕೈ ಬಿಡಿಸಿಕೊಂಡೆ. ಪೂರ್ಣ ಸಾಮರ್ಥ್ಯವನ್ನು ಬಳಸಿ ಚೂರಿ ಹಿಡಿದಿದ್ದ ತೂರಯಾಳ ಕೈಯನ್ನು ಹಿಡಿದುಕೊಂಡುಬಿಟ್ಟೆ. ಏಕೋ ಏನೋ ತೂರಯಾ ಕಿಂಚಿತ್ತೂ ವಿರೋಧಿಸಲಿಲ್ಲ. ನನ್ನ ಕೈಯನ್ನು ನೋಡುತ್ತ ನನ್ನ ಎದೆಯ ಮೇಲಿನಿಂದ ಕೆಳಗಿಳಿದಳು. ಅವಳ ಕಣ್ಣುಗಳು ನಿಸ್ತಬ್ಧವಾಗಿ ಒಂದೇ ಸಮನೆ ನನ್ನ ಕೈಯನ್ನೇ ನೋಡುತ್ತಿದ್ದವು.

ನಾನು ನಕ್ಕು ಹೇಳಿದೆ– 'ಪಗಡೆ ಆಟದಲ್ಲಿ ಸೋಲು-ಗೆಲುವು ಉಲ್ಟಾ ಆಯಿತು. ಈಗ ಸಾಯುವ ಸರದಿ ನಿನ್ನದು. ನಿಮ್ಮ ತಂದೆಯನ್ನು ಸಾಯಿಸಿದೆ. ಈಗ ನಿನ್ನನ್ನೂ ಸಾಯಿಸುತ್ತೇನೆ.'

ತೂರಯಾ ನೆಟ್ಟ ನೋಟದಿಂದ ನನ್ನ ಕೈಯಿನ ಕಡೆಯೇ ನೋಡುತ್ತಿದ್ದಳು. ಅವಳು ಪ್ರತಿಯಾಗಿ ಏನೂ ಹೇಳಲಿಲ್ಲ.

ನಾನು ಅವಳ ಕೈಹಿಡಿದು ಜೋರಾಗಿ ಅಲ್ಲಾಡಿಸುತ್ತ ಹೇಳಿದೆ– 'ಯಾಕೆ ಏನೂ ಮಾತಾಡ್ತಾ ಇಲ್ಲ? ಈಗಂತೂ ನಿನ್ನ ಪ್ರಾಣ ನನ್ನ ಮುಷ್ಟಿಯಲ್ಲಿದೆ'

ತೂರಯಾ ಮೌನ ಮುರಿದು ಗಂಭೀರವಾದ ಮತ್ತು ದೃಢವಾದ ಕಂಠದಿಂದ ಹೇಳಿದಳು– 'ನೀನು ನನ್ನ ಸೋದರ! ಈ ಹೊತ್ತು ನೀನು ನಿನ್ನ ತಂದೆಯನ್ನು ಕೊಂದಿದ್ದೀ!'

ತೂರಯಾಳ ಮಾತು ಕೇಳಿ ಆ ಕ್ಷಣದಲ್ಲೂ ನನಗೆ ನಗು ಬಂತು

ನಗುತ್ತ ಹೇಳಿದೆ–' ಅಫ್ರೀದಿಗಳು ಕಪಟಿಗಳೂ ಆಗಿರುತ್ತಾರೆ ಅಂತ ಇವತ್ತೇ ನನಗೆ ಗೊತ್ತಾದ್ದು'

ತೂರಯಾ ಶಾಂತ ದನಿಯಲ್ಲಿ ಹೇಳಿದಳು– 'ನೀನು ನನ್ನ ಕಳೆದುಹೋದ ಸೋದರ ನಾಜಿರ್. ನಿನ್ನ ಕೈಯಲ್ಲಿದೆಯಲ್ಲಾ ಆ ಗುರುತು ಅದೇ ಹೇಳ್ತಾ ಇದೆ ನೀನು ನನ್ನ ಕಳೆದುಹೋದ ಸೋದರ ಅಂತ'.

ಚಿಕ್ಕಂದಿನಿಂದಲೂ ನನ್ನ ಕೈಯಲ್ಲಿ ಒಂದು ಸರ್ಪದ ಹಚ್ಚೆ ಇತ್ತು. ಸೈನ್ಯದ ರಿಜಿಸ್ಟರ್‌ನಲ್ಲಿ ಇದೇ ಗುರುತನ್ನು ನನ್ನ ಗುರುತೆಂದು ನಮೂದಿಸಿದೆ.

ನಾನು ನಕ್ಕು ಹೇಳಿದೆ– 'ತೂರಯಾ ನೀನು ನನಗೆ ಮೋಸ ಮಾಡಕ್ಕಾಗಲ್ಲ. ನಾನು ಈಗ ಯಾವ ಥರದಲ್ಲೂ ನಿನ್ನನ್ನು ಬಿಡಲ್ಲ'

ತೂರಯಾ ತನ್ನ ಕೈಯಲ್ಲಿದ್ದ ಚೂರಿಯನ್ನು ಅತ್ತ ಎಸೆದು ಹೇಳಿದಳು– 'ನಿಜಕ್ಕೂ ನೀನು ನನ್ನ ಸೋದರನೇ. ನಿನಗೆ ನಂಬಿಕೆ ಆಗ್ತಾ ಇಲ್ಲ ಅಂದರೆ ನೋಡು ನನ್ನ ಬಲಗೈಯಲ್ಲಿ ಇಂಥದೇ ಹಾವಿನಹಚ್ಚೆ ಹಾಕಲಾಗಿದೆ.'

ನಾನು ತೂರಯಾಳ ಕೈನತ್ತ ದೃಷ್ಟಿ ಹಾಯಿಸಿ ನೋಡಿದರೆ ಥೇಟ್ ನನ್ನ ಕೈಯಲ್ಲಿದ್ದಂಥ ಹಾವಿನ ಹಚ್ಚೆಯನ್ನು ಅಲ್ಲೂ ಹಾಕಲಾಗಿತ್ತು.

'ತೂರಯಾ ನಾನು ನಿನ್ನನ್ನು ನಂಬಲ್ಲ. ಇದೊಂದು ಆಕಸ್ಮಿಕ ಅಷ್ಟೆ'– ಎಂದು ನಾನು ಯೋಚಿಸಿ ಹೇಳಿದೆ.

ತೂರಯಾ ಹೇಳಿದಳು– 'ನನ್ನ ಕೈಬಿಡು. ನಾನು ನಿನ್ನ ಮೇಲೆ ಆಕ್ರಮಣ ಮಾಡಲ್ಲ. ಅಫ್ರೀದಿಗಳು ಸುಳ್ಳು ಹೇಳಲ್ಲ'

ನಾನು ಅವಳ ಕೈ ಬಿಟ್ಟೆ. ಅವಳು ನೆಲದ ಮೇಲೆ ಕುಳಿತು ನನ್ನತ್ತ ನೋಡತೊಡಗಿದಳು. ಸ್ವಲ್ಪ ಹೊತ್ತಿನ ನಂತರ ಹೇಳಿದಳು– 'ಆಯಿತು. ನಿನಗೆ ನಿನ್ನ

ತಂದೆ ತಾಯಿಗಳ ವಿಳಾಸ ಗೊತ್ತಿದೆಯಾ?' ನಾನು ತಲೆ ಅಲ್ಲಾಡಿಸುತ್ತ ಹೇಳಿದೆ- 'ಇಲ್ಲ, ನಾನು ಸರ್ಕಾರೀ ಅನಾಥಾಲಯದಲ್ಲಿ ಬೆಳೆದು ದೊಡ್ಡವನಾದೆ'

ತೂರಯಾ ನನ್ನ ಮಾತು ಕೇಳಿ ಎದ್ದು ನಿಂತು ಹೇಳಿದಳು- 'ಹಾಗಿದ್ದ ಮೇಲೆ ನೀನು ನನ್ನ ಕಳೆದು ಹೋದ ಅಣ್ಣ ನಾಜಿರನೇ. ನಾನು ಹುಟ್ಟುವ ಒಂದು ವರ್ಷದ ಮುಂಚೆ ನೀನು ಕಳೆದುಹೋಗಿದ್ದೆ. ನನ್ನ ತಂದೆ ತಾಯಿಗಳು ಆಗ ಸರ್ಕಾರೀ ಸೇನೆಯಮೇಲೆ ಆಕ್ರಮಣ ಮಾಡಲು ಬಂದಿದ್ದರು. ಆಗ ನೀನೂ ಜೊತೆಯಲ್ಲಿದ್ದೆ. ನನ್ನ ತಾಯಿ ಯುದ್ಧ ಮಾಡುವುದರಲ್ಲಿ ಬಹಳ ಚತುರಳಾಗಿದ್ದಳು. ನಿನ್ನನ್ನು ತನ್ನ ಬೆನ್ನಿಗೆ ಕಟ್ಟಿಕೊಂಡೇ ಸೆಣಸುತ್ತಿದ್ದಳು. ಅದೇ ಸಮಯಕ್ಕೆ ಒಂದು ಗುಂಡು ಬಂದು ಅವಳ ಕಾಲಿಗೆ ಹೊಕ್ಕಿತು. ಆಕೆ ಕೆಳಗೆ ಬಿದ್ದು ಮೂರ್ಛೆಹೋದಳು. ಸರಿ ನಿನ್ನನ್ನು ಯಾರೋ ಬೆನ್ನ ಮೇಲಿನಿಂದ ಬಿಚ್ಚಿಕೊಂಡು ಒಯ್ದರು. ನನ್ನ ತಾಯಿಯನ್ನು ಅಪ್ಪ ತನ್ನ ಹೆಗಲ ಮೇಲೆ ಹೊತ್ತುಕೊಂಡನು. ಆದರೆ ನಿನ್ನನ್ನು ಹುಡುಕಲಾಗಲಿಲ್ಲ. ಆಮೇಲೆ ನಿನಗಾಗಿ ಬಹಳ ಹುಡುಕಾಡಿದರು. ಆದರೆ ಎಲ್ಲೂ ನಿನ್ನ ಸುಳಿವು ಸಿಗಲಿಲ್ಲ. ಅಮ್ಮ ಆಗಾಗ್ಗೆ ನಿನ್ನ ವಿಚಾರ ಎತ್ತುತ್ತಾ ಇದ್ದಳು. ಅವಳ ಕೈಯಲ್ಲೂ ಗುರುತು ಇತ್ತು.

ಹಾಗೆ ಹೇಳಿ ಅವಳು ಅದೇ ಕೈಯನ್ನು ನನಗೆ ತೋರಿಸಿದಳು. ನಾನು ಅವಳ ಕೈಮೇಲಿದ್ದ ಹಾವಿನ ಗುರುತನ್ನು ನನ್ನ ಕೈಮೇಲಿದ್ದ ಹಾವಿನ ಗುರುತಿನೊಂದಿಗೆ ತಾಳೆನೋಡಿದೆ. ವಾಸ್ತವದಲ್ಲಿ ಎರಡೂ ಹಾವುಗಳು ತದ್ರೂಪಿಗಳಾಗಿದ್ದುವು. ಒಂದು ಕೂದಲೆಳೆಯಷ್ಟೂ ವ್ಯತ್ಯಾಸವಿರಲಿಲ್ಲ. ನಾನು ಹತಾಶನಂತೆ ಚಿಕ್ಕ ಮಂಚದ ಮೇಲೆ ಬಿದ್ದುಬಿಟ್ಟೆ.

ತೂರಯಾ ನನ್ನ ಪಕ್ಕ ಕುಳಿತು ಸ್ನೇಹದಿಂದ ನನ್ನ ಹಣೆಯ ಬೆವರು ಒರೆಸತೊಡಗಿದಳು, ಅವಳು ಹೇಳಿದಳು- 'ನಾಜಿರ್ – ನೀನು ಸತ್ತಿಲ್ಲ, ಬದುಕಿದ್ದೀ ಎಂದು ಅಮ್ಮ ಹೇಳ್ತಾ ಇದ್ದಳು. ಒಂದು ದಿನ ನೀನು ಖಂಡಿತವಾಗಿಯೂ ನಮ್ಮನ್ನು ಕೂಡಿಕೊಳ್ಳುವೆ ಎಂದು ಹೇಳುತ್ತಿದ್ದಳು.'

ತೂರಯಾಳ ಮಾತಿನ ಮೇಲೆ ಈಗ ನನಗೆ ನಂಬಿಕೆ ಉಂಟಾಗಿತ್ತು. ತೂರಯಾ ಹೇಳುತ್ತಾ ಇರುವುದು ಸರಿಯಾಗಿದೆ ಎಂದು ಅದು ಯಾರು ನನ್ನ ಹೃದಯದಲ್ಲಿ ಕುಳಿತುಕೊಂಡು ಹೇಳುತ್ತಾ ಇದ್ದರೋ ಗೊತ್ತಿಲ್ಲ. ನಾನೊಂದು ದೀರ್ಘವಾದ ಉಸಿರೆಳೆದುಕೊಂಡು ಹೇಳಿದೆ – 'ಏನು ತೂರಯಾ ಈ ಹೊತ್ತು ನಾನು ಯಾರನ್ನು ಕೊಂದೆನೋ ಆತ ನಮ್ಮ ತಂದೆ ಆಗಿದ್ದನೆ?'

ತೂರಯಾಳ ಮುಖದ ಮೇಲೆ ದುಃಖದ ಒಂದು ಸಣ್ಣ ಮೋಡ ಕವಿಯಿತು. ಅವಳು ಅತ್ಯಂತ ಶೋಕಭರಿತ ಸ್ವರದಲ್ಲಿ ಹೇಳಿದಳು- 'ಹೌದು ನಾಜಿರ್. ಆ

ಭಾಗ್ಯಹೀನ ನಮ್ಮ ತಂದೆಯೇ ಆಗಿದ್ದ. ತನ್ನ ಪ್ರೀತಿಪಾತ್ರನಾದ ಮಗನಿಂದಲೇ ಹತ್ಯೆಗೀಡಾಗುತ್ತಾನೆ ಅಂತ ಯಾರು ತಾನೆ ತಿಳಿದಿದ್ದರು?' ನಂತರ ಸಮಾಧಾನ ಮಾಡುವ ರೀತಿಯಲ್ಲಿ ಹೇಳಿದಳು– 'ಆದರೆ ನಾಜಿರ್ ನೀನು ಗೊತ್ತಿಲ್ಲದೆ ಈ ಕೆಲಸ ಮಾಡಿದ್ದೀ. ತಂದೆಯ ಸಾವಿನಿಂದ ನಾನು ನಿಜಕ್ಕೂ ಏಕಾಂಗಿಯಾಗಿಬಿಟ್ಟಿದ್ದೆ. ಈಗ ನಿನ್ನನ್ನು ಪಡೆದುಕೊಂಡು ತಂದೆಯ ಸಾವಿನ ದುಃಖವನ್ನು ಮರೆಯುತ್ತೀನಿ. ನಾಜಿರ್ ನೀನು ದುಃಖಿಸಬೇಡ. ನಿನ್ನ ತಂದೆ ಯಾರು, ತಾಯಿ ಯಾರು ಅಂತ ನಿನಗೆ ತಾನೆ ಎಲ್ಲಿ ಗೊತ್ತಿತ್ತು ಹೇಳು? ನೋಡು ನಾನೇ ನಿನ್ನನ್ನು ಕೊಲ್ಲಬೇಕು ಅಂತ ಬಂದಿದ್ದೆ. ನಿನ್ನನ್ನು ಕೊಂದುಬಿಡುತ್ತಾ ಇದ್ದೆ. ಆದರೆ ದೇವರ ದಯದಿಂದ ನಾನು ನಮ್ಮ ಮನೆತನದ ಗುರುತನ್ನು ನೋಡಿಬಿಟ್ಟೆ. ದೇವರ ಇಚ್ಛೆ ಇದೇ ಆಗಿತ್ತು.' ನನ್ನ ತಂದೆಯ ಹೆಸರು ಹೈದರ್ ಎಂದು ತೂರಯಾಳಿಂದ ಗೊತ್ತಾಯಿತು. ಅವನು ಅಫ್ರೀದಿಗಳ ಒಂದು ಗುಂಪಿನ ಸರದಾರನಾಗಿದ್ದ. ಸರದಾರ್ ಹಿಮ್ಮತ್ ಸಿಂಹರ ವಿಚಾರವಾಗಿ ತೂರಯಾಳೊಂದಿಗೆ ಮಾತನಾಡಿದಾಗ ಅವಳು ಸರದಾರ ಸಾಹೇಬರನ್ನು ಬಹಳವಾಗಿ ಪ್ರೀತಿಸುತ್ತಿದ್ದಳೆಂದು ತಿಳಿಯಿತು. ಅವಳು ನಮ್ಮ ತಂದೆಯೊಂದಿಗೆ ಜಗಳಾಡಿಕೊಂಡು ಸರದಾರ ಸಾಹೇಬರನ್ನು ಮದುವೆಯಾಗಲೆಂದು ಬಂದಿದ್ದಳು. ಆದರೆ ಅಲ್ಲಿ ಅವರ ಹೆಂಡತಿ ಇದ್ದದ್ದು ನೋಡಿ ಅವಳು ಅಸೂಯೆ ಮತ್ತು ಕೋಪದಿಂದ ಹುಚ್ಚಳಾಗಿ ಸರದಾರರ ಹೆಂಡತಿಯನ್ನು ಕೊಂದುಬಿಟ್ಟಳು. ಕಾಬೂಲಿ ಹೆಣ್ಣಿನ ವೇಷದಲ್ಲಿ ಹೋಗಿ ಸ್ವಲ್ಪ ತಮಾಷೆ ಮಾಡಬೇಕೆಂದಿದ್ದಳು. ಆದರೆ ಘಟನಾ ಚಕ್ರ ಅವಳನ್ನು ಇನ್ನೊಂದೇ ಕಡೆಗೆ ಒಯ್ದಿತು.

ನಾನು ಸರದಾರ ಸಾಹೇಬರ ಪರಿಸ್ಥಿತಿಯನ್ನು ವಿವರಿಸಿ ಹೇಳಿದೆ. ಅದನ್ನು ಕೇಳಿ ಸ್ವಲ್ಪ ಹೊತ್ತು ಯೋಚಿಸುತ್ತಿದ್ದು ಅನಂತರ ಹೇಳಿದಳು–'ಇಲ್ಲ, ಆ ಮನುಷ್ಯ ಸುಳ್ಳುಗಾರ ಮತ್ತು ಮೋಸಗಾರ. ನಾನು ಅವನನ್ನು ಮದುವೆ ಆಗಲ್ಲ. ಆದರೆ ನಿನ್ನ ಸಲುವಾಗಿ ಈಗ ಎಲ್ಲ ಮರೆತು ಬಿಡುತ್ತೀನಿ. ನಾಳೆ ಅವರ ಮಕ್ಕಳನ್ನು ಕರೆದುಕೊಂಡು ಬಾ. ನಾನು ಅವರನ್ನು ಮುದ್ದಾಡುತ್ತೀನಿ'.

ಬೆಳಿಗ್ಗೆ ತೂರಯಾಳನ್ನು ನೋಡಿ ನನ್ನ ಆಳಿಗೆ ಆಶ್ಚರ್ಯವಾಯಿತು. ನಾನು ಅವನಿಗೆ – 'ಈಕೆ ನನ್ನ ತಂಗಿ' ಎಂದೆ.

ನನ್ನ ನೌಕರನಿಗೆ ನನ್ನ ಮಾತಿನ ಮೇಲೆ ನಂಬಿಕೆ ಬರಲಿಲ್ಲ. ಆಗ ನಾನು ಎಲ್ಲವನ್ನೂ ವಿಶದವಾಗಿ ಹೇಳಿದೆ. ಆಗಲೇ ತಂದೆಯ ಶವದ ವಿಷಯ ಏನಾಯಿತೆಂದು ತಿಳಿದುಕೊಂಡು ಬರಲು ಕಳಿಸಿದೆ. ಅವನು ಹಿಂತಿರುಗಿ ಬಂದು 'ಶವವನ್ನು ಇನ್ನೂ ಠಾಣೆಯಲ್ಲೇ ಇರಿಸಲಾಗಿದೆ' ಎಂದುಹೇಳಿದ.

ನಾನು ದೊಡ್ಡ ಸಾಹೇಬರ ಹೆಸರಿಗೆ ಒಂದು ಪತ್ರ ಬರೆದು ಎಲ್ಲ ವಿಷಯನ್ನೂ ತಿಳಿಸಿದೆ. ಶವವನ್ನು ಪಡೆದುಕೊಳ್ಳಲು ಕೋರಿಕೆ ಸಲ್ಲಿಸಿದೆ. ಆ ಕೂಡಲೇ ಅವರ ಒಪ್ಪಿಗೆ ಬಂದಿತು.

ಒಂದು ಪತ್ರ ಬರೆದು ಮೇಜರ್ ಸಾಹೇಬರನ್ನೂ ಕರೆಸಿದೆ.

ಮೇಜರ್ ಸಾಹೇಬರು ಬಂದು– 'ಏನು ವಿಷಯ ಅಸದ್? ಇಷ್ಟುಬೇಗ ಏಕೆ ಬರಲು ತಿಳಿಸಿದೆ?' ಎಂದು ಕೇಳಿದರು.

ನಾನು ನಗುತ್ತ ಹೇಳಿದೆ–'ಮೇಜರ್ ಸಾಹೇಬರೆ ನನ್ನ ಹೆಸರು ಅಸದ್ ಎಂದು ಈಗ ಉಳಿದಿಲ್ಲ. ನನ್ನ ಅಸಲಿ ಹೆಸರು ನಾಜಿರ್ ಎಂದು'

ಮೇಜರ್ ಸಾಹೇಬರು ಆಶ್ಚರ್ಯದಿಂದ ನನ್ನ ಕಡೆ ನೋಡುತ್ತ ಹೇಳಿದರು– 'ಒಂದು ರಾತ್ರಿ ಒಳಗೆ ನೀನು ಹುಚ್ಚನಾಗಿ ಬಿಡಲಿಲ್ಲ ತಾನೆ?'

ನಾನು ನಗುತ್ತ ಹೇಳಿದೆ–'ಇಲ್ಲ ಸರದಾರ್ ಸಾಹೇಬರೆ. ಈಗ ಇನ್ನೂ ಇದೆ ಕೇಳಿ. ತೂರಯಾ ನನ್ನ ಒಡಹುಟ್ಟಿದ ತಂಗಿ. ನಿನ್ನೆ ದಿನ ನಾನು ಯಾರನ್ನು ಕೊಂದೆನೋ ಅವನು ನನ್ನ ತಂದೆಯಾಗಿದ್ದ.'

ಸರದಾರ್ ಸಾಹೇಬರು ನನ್ನ ಮಾತು ಕೇಳಿ ಆಕಾಶದಿಂದ ಬಿದ್ದವರಂತಾಗಿ ಬಿಟ್ಟರು. ಅವರ ಕಣ್ಣು ಆಶ್ಚರ್ಯದಿಂದ ಕಪಾಲದತ್ತ ಸರಿಯಿತು. ಕೇಳಿದರು– 'ಏನು ಅಸದ್ ನೀನು ನನ್ನನ್ನು ಹುಚ್ಚನನ್ನಾಗಿ ಮಾಡಿಬಿಡುತ್ತೀಯೇನು?'

ನಾನು ಸರದಾರ್ ಸಾಹೇಬರ ಕೈ ಹಿಡಿದುಕೊಂಡು ಹೇಳಿದೆ– 'ಬನ್ನಿ ತೂರಯಾಳ ಬಾಯಿಂದಲೇ ಎಲ್ಲ ವಿಷಯ ಕೇಳಿಕೊಳ್ಳಿ. ತೂರಯಾ ನನ್ನ ಮನೆಯಲ್ಲಿ ಕುಳಿತುಕೊಂಡು ನಿಮ್ಮನ್ನು ನಿರೀಕ್ಷೆಮಾಡುತ್ತಾ ಇದ್ದಾಳೆ.'

ಸರದಾರ್ ಸಾಹೇಬರು ಮಾತಿಲ್ಲದೆ ಮೌನವಾಗಿ ನನ್ನ ಹಿಂದೆ ಹಿಂದೆಯೇ ಬಂದರು. ತೂರಯಾ ಅವರು ಬಂದದ್ದನ್ನು ನೋಡಿ ಎದ್ದು ನಿಂತು ನಗುತ್ತ ಹೇಳಿದಳು– 'ಕೈದಿ ನೀನು ಅದೇ ಹಾಡನ್ನು ಮತ್ತೆ ಹಾಡು'.

ತೂರಯಾಳ ಮಾತು ಕೇಳಿ ನಾನು ಮತ್ತು ಸರದಾರ್ ಸಾಹೇಬರು ನಗಲಾರಂಭಿಸಿದೆವು.

ಸರದಾರ್ ಸಾಹೇಬರನ್ನು ಕೂಡಿಸಿಕೊಂಡು ನಾನು ಎಲ್ಲ ವಿಚಾರಗಳನ್ನೂ ವಿವರ ವಿವರವಾಗಿ ಹೇಳಿದೆ. ಕಥೆ ಕೇಳಿ ಸರದಾರ ಸಾಹೇಬರು ನನ್ನೊಂದಿಗೆ – 'ನಾಜಿರ್ ಈಗ ನಾನು ನಿನ್ನನ್ನು ನಾಜಿರ್ ಎಂದೇ ಕರೆಯುತ್ತೇನೆ. ತೂರಯಾಳನ್ನು ನನಗೆ ಕೊಡು ಎಂದು ನಿನ್ನನ್ನು ಪ್ರಾರ್ಥಿಸುತ್ತೇನೆ!. ನಾನು ಇವಳನ್ನು ಮದುವೆಯಾಗುವೆ.' ಎಂದರು.

ನಾನು ನಗುತ್ತ – 'ಆದರೆ ನೀವು ಹಿಂದೂ. ನಾವುಗಳು ಮುಸಲ್ಮಾನರು. ಸರದಾರ್ ಸಾಹೇಬರು ನಕ್ಕು ಹೇಳಿದರು– 'ಮಿಲಿಟರಿಯವರಿಗೆ ಯಾವುದೂ ಜಾತಿ–ಪಂಥ ಇಲ್ಲ'

ತೂರಯಾ ಕೂಡಲೇ ಹೇಳಿದಳು– 'ಆದರೆ ಸರದಾರ ಸಾಹೇಬರೆ, ನಾನು ನಿಮ್ಮನ್ನು ಮದುವೆ ಆಗಲ್ಲ. ಒಂದು ವೇಳೆ ನೀವು ನಿಮ್ಮ ಎರಡೂ ಮಕ್ಕಳನ್ನು ನನ್ನ ಹತ್ತಿರ ಕಳಿಸಿಕೊಟ್ಟರೆ ನಾನು ಅವರಿಬ್ಬರಿಗೂ ತಾಯಿಯಾಗುತ್ತೇನೆ.'

ಸರದಾರ ಸಾಹೇಬರು ನಗುತ್ತ ನಮ್ಮಿಂದ ಬೀಳ್ಕೊಂಡರು.

ಅದೇ ದಿನ ಸಂಜೆ ನಾವು ಸರದಾರ್ ಸಾಹೇಬರು ತೂರಯಾ ಮತ್ತಿತರೆ ಮಿಲಿಟರಿಯವರೊಂದಿಗೆ ತಂದೆಯ ಶವವನ್ನು ಹೂಳಿದೆವು.

ಸೂರ್ಯ ಮುಳುಗುತ್ತಿದ್ದ. ನಿಧ ನಿಧಾನವಾಗಿ ಕತ್ತಲು ಆವರಿಸುತ್ತಿತ್ತು. ನಾನು ಮತ್ತು ತೂರಯಾ ಇಬ್ಬರೂ ನಮ್ಮ ತಂದೆಯ ಸಮಾಧಿಯ ಬಳಿ ಪ್ರಾರ್ಥನೆಯನ್ನು ಓದುತ್ತಿದ್ದೆವು.



– ಡಾ. ಆರ್. ಲಕ್ಷ್ಮೀನಾರಾಯಣ
ನಂ: 12, ಶ್ರೀನಿಕೇತನ, 2ನೇ ಕ್ರಾಸ್
ಶಿವಾನಂದ ನಗರ, ಮೂಡಲಪಾಳ್ಯ
ಬೆಂಗಳೂರು – 560 072

# ಸೈಕಲ್

*– ಹಿಂದಿ ಮೂಲ: ಉದಯ ಪ್ರಕಾಶ್*
*ಕನ್ನಡಕ್ಕೆ: ಡಿ.ಎಸ್.ಶ್ರೀನಾಥ್*

**ಅ**ವನ ಹೆಸರು ಬಿ.ಜಿ. ರಾಜೋರಿಯಾ. ಪೂರ್ಣ ಹೆಸರು ಬಾಲ ಗೋಪಾಲ ರಾಜೋರಿಯಾ. ನಮ್ಮ ಹಳ್ಳಿಯಲ್ಲಿ ಅವನಿಗೆ ಬಾಲ್ಯದಲ್ಲಿ ಎಲ್ಲರು 'ಬಾಲೂ' ಎನ್ನುತ್ತಿದ್ದರು. ನಾವು ಚಿಕ್ಕವರಿದ್ದಾಗ ಅವನನ್ನು ರೇಗಿಸಲು, ಅವನಿಗೆ ಬಾಲೂ ಎನ್ನದೆ, 'ಭಾಲೂ' [ಅಂದರೆ ಕರಡಿ] ಎನ್ನುತ್ತಿದ್ದೆವು. ಆದರೆ ಅವನೆಂದೂ ಕೋಪಿಸಿಕೊಳ್ಳುತ್ತಿರಲಿಲ್ಲ. ನಾವು ಅವನನ್ನು 'ಭಾಲೂ' ಎಂದಾಗ ಅವನು ಸಹಜವಾಗಿ 'ಹೂಂ' ಎನ್ನುತ್ತಿದ್ದ. ನಂತರ ಪಾರದರ್ಶಕ ಕಣ್ಣುಗಳಿಂದ ನಮ್ಮನ್ನು ನೋಡುತ್ತಿದ್ದ. ನಾವು ಉತ್ತರಿಸಲು ಸಾಧ್ಯವಾಗುತ್ತಿರಲಿಲ್ಲ.

'ಆಲೂ-ಬದನೆಪಲ್ಯ, ಕುಣಿದಳು ಭಾಲೂ ಅವ್ವ, ಬಿಸಿ-ಬಿಸಿ ಕಾಳು ಪಲ್ಯ' ಎಂದು ಹೇಳಿ ನಾವು ರೇಗಿಸುತ್ತಿದ್ದೆವು.

ಅವನೂ ಚಪ್ಪಾಳೆ ತಟ್ಟಿ-ತಟ್ಟಿ ನಮ್ಮೊಂದಿಗೆ ಹಾಡುತ್ತಿದ್ದ- 'ಆಲೂ-ಬದನೆ ಪಲ್ಯ, ಕುಣಿದಳು ಭಾಲೂ ಅವ್ವ, ಬಿಸಿ-ಬಿಸಿ ಕಾಳು ಪಲ್ಯ...' ನಾವು ಸೋಲುತ್ತಿದ್ದೆವು. ಅವನು ಹೀಗೆಯೇ ವರ್ತಿಸುತ್ತಿದ್ದ.

ಹಳ್ಳಿಯಲ್ಲಿ ಜನಾರ್ದನ ಸಿಂಗ್ ಅಪಾಯಕಾರಿ ಮನುಷ್ಯನಾಗಿದ್ದ. ಮೊದಲು ಅವನು ಶಾನುಭೋಗನಾಗಿದ್ದ. ಆದರೆ 'ಶಾನುಭೋಗ' ಶಬ್ದದ ಕೊನೆಯಲ್ಲಿನ 'ಗ' ದಿಂದಾಗಿ ಅವನು ಈ ಹುದ್ದೆಯನ್ನು ಇಷ್ಟಪಡುತ್ತಿರಲಿಲ್ಲ. ಅವನಿಗೆ ಇದರಲ್ಲಿ 'ಹೆಂಗಸು' ಶಬ್ದದ ಸಂಕೇತ ಕಾಣ ಬರುತ್ತಿತ್ತು. ಅವನು ತನ್ನನ್ನು ತಾನು 'ಗಂಡಸು' ಎಂದು ತಿಳಿಯುತ್ತಿದ್ದ. ಹೀಗಾಗಿ ಎಲ್ಲರೂ ಅವನನ್ನು 'ಶಾನುಭೋಗ ಸಾಹೇಬ್ರೆ' ಎಂದು ಕರೆಯುತ್ತಿದ್ದರು. ಅವನ ಮೀಸೆಗಳು ದೊಡ್ಡದಾಗಿದ್ದವು. ಹೋಳಿ ಹಬ್ಬದಲ್ಲಿ ಪಂಚೆ

ಕಳಚಿ ಕುಣಿಯುತ್ತಿದ್ದ, ಅಶ್ಲೀಲ ಹಾಡನ್ನು ಹಾಡುತ್ತಿದ್ದ. ಕಳ್ಳು ಕುಡಿದು ರಾತ್ರಿ ವೇಳೆಯಲ್ಲಿ ಇನ್ನೊಬ್ಬರ ಮನೆಗಳಿಗೆ ನುಗ್ಗಿ, ಅಲ್ಲಿಯೇ ತಿಂದು–ಕುಡಿದು ನಿದ್ರಿಸುತ್ತಿದ್ದ. ಸಸ್ಪೆಂಡ್ ಆದ ನಂತರ ಹೆಚ್ಚು ಕುಡಿಯಲಾರಂಭಿಸಿದ್ದ. ಸಾಮಾನ್ಯವಾಗಿ ಕಲಾರಿಯಿಂದ ರಾತ್ರಿ ಬಾಟ್ಲಿ ಏರಿಸಿ, ಕುರಿಯ ಕರುಳು–ಹೊಟ್ಟೆ ತಿಂದು, ಹಾಡುತ್ತಾ ರಾತ್ರಿಯಲ್ಲಿಯೇ ತನ್ನ ಸೈಕಲ್‌ನಲ್ಲಿ ಹಳ್ಳಿಗೆ ಮರಳಿ ಬರುವಾಗ, ಮಾರ್ಗದಲ್ಲಿಯೇ ಎಲ್ಲೋ ಬಿದ್ದು ಹೊರಳಾಡುತ್ತಿದ್ದ. ಇಂಥ ಅವಸ್ಥೆಯಲ್ಲಿ ನೆಲದ ಮೇಲೆ ಮಲಗಿ, ತನ್ನ ಸೈಕಲ್ಲನ್ನು ಹಳಿಯುತ್ತಿದ್ದ, ಅದಕ್ಕೆ ಕಾಲು–ಚಪ್ಪಲಿಗಳಿಂದ ಒದೆಯುತ್ತಿದ್ದ. ನಂತರ ಬೇರೆಯವರ ಸೈಕಲ್ಲಿನ ಕ್ಯಾರಿಯರ್‌ನಲ್ಲಿ ಕೂತು, ಗಟ್ಟಿಯಾಗಿ ನಿಂದಿಸುತ್ತಾ ಮರಳಿ ಬರುತ್ತಿದ್ದ. ಜನಾರ್ದನ ಸಿಂಗ್‌ನನ್ನು ರಸ್ತೆಯಿಂದ ಎತ್ತಿಕೊಂಡು ತಂದವನಿಗೆ, ಅಂದು ರಾತ್ರಿ ಜನಾರ್ದನ ಸಿಂಗನಿಂದ ತಪ್ಪಿಸಿಕೊಂಡು ಹೋಗುವುದು ಅತ್ಯಂತ ಕಷ್ಟದ ಕೆಲಸವಾಗುತ್ತಿತ್ತು. ನಂತರ ಅವನು, 'ಈ ಸಿಂಗ ಹೊಂಡದಲ್ಲಿ ಸುಖವಾಗಿ ಬಿದ್ದಿದ್ದ, ಈ ಜಿನ್ನನನ್ನು ನಾನೇಕೆ ಸೈಕಲ್ಲಿನಲ್ಲಿ ಕೂರಿಸಿಕೊಂಡು ಬಂದನೋ' ಎಂದು ಪಶ್ಚಾತ್ತಾಪ ಪಡುತ್ತಿದ್ದ. ಆದರೆ ಒಂದೇ ಹಳ್ಳಿಯವನಾದ್ದರಿಂದ ಸಂಬಂಧಗಳನ್ನು ಹೀಗೆಯೇ ನಿರ್ವಸಹಿಸಲಾಗುತ್ತಿತ್ತು. ಜನಾರ್ದನ ಒಮ್ಮೆ ಅವನನ್ನು ಅಪ್ಪಿಕೊಂಡು 'ಅಣ್ಣಾ' ಎಂದು ನಗುತ್ತಿದ್ದ ಅಥವಾ ಅಳುತ್ತಿದ್ದ; ಇನ್ನೊಮ್ಮೆ ಅವನ ಅಂಗಿ ಹಿಡಿದು ಅವನಿಗೇ ಹೊಡೆಯುತ್ತಿದ್ದ.

ಒಮ್ಮೊಮ್ಮೆ ಜನ ಜನಾರ್ದನ ಸಿಂಗನನ್ನು ತಮ್ಮ ಸೈಕಲ್ಲಿನ ಕ್ಯಾರಿಯರ್‌ನಿಂದ ಬೀಳಿಸಿ, ವೇಗವಾಗಿ ಪೆಡಲ್ ತುಳಿಯುತ್ತಾ ಓಡಿ ಹೋಗಲು ಪ್ರಯತ್ನಿಸುತ್ತಿದ್ದರು. ಆದರೆ ಅಂಥ ಸಂದರ್ಭದಲ್ಲಿ ಅವನು ಜಿನ್ನನಂತೆ ಹಾರುತ್ತಿದ್ದ. ಸೈಕಲ್ ಎಷ್ಟೇ ವೇಗದಲ್ಲಿ ಹೋಗುತ್ತಿದ್ದಾಗ್ಯೂ, ಅಂಥ ಕತ್ತಲಿನಲ್ಲೂ ಸೈಕಲ್ಲಿನ ಹಿಂದಿನಿಂದ ಅವನ ಧ್ವನಿ ಕೇಳಿಸುತ್ತಿತ್ತು, "ಏಯ್ ನಿಲ್ಲೋ, ನಿಲ್ಲು. ಬೇವರ್ಸಿ.."

ಬಿ.ಜಿ. ರಾಜೋರಿಯಾ ಅಂದರೆ ನಮ್ಮ 'ಭಾಲೂ' ಸೈಕಲ್ ಚಾಲನೆಯನ್ನು ಅದೇ ಜನಾರ್ದನ ಸಿಂಗನ ಸೈಕಲ್ಲಿನಿಂದ ಕಲಿತಿದ್ದ. ಸಾಮಾನ್ಯವಾಗಿ ರಾತ್ರಿಯ ವೇಳೆಯಲ್ಲಿ ಕಲಾರಿಯಿಂದ ಮರಳಿ ಬರುವಾಗ ಜನಾರ್ದನ ತನ್ನ ಸೈಕಲ್ಲನ್ನು ಒಂದು ಚರಂಡಿಯಲ್ಲೋ ಅಥವಾ ಹೊಂಡದಲ್ಲೋ ಬಿಟ್ಟು ಬರುತ್ತಿದ್ದ. ಎರಡು–ಮೂರನೆಯ ದಿನ, ನೆರೆಹೊರೆಯವರು, ಅವನ ಸೈಕಲ್ಲಿನೊಂದಿಗೆ ಬಂದು ಸಿಂಗನಿಗೆ ಒಪ್ಪಿಸುತ್ತಿದರು. ಒಂದು ವೇಳೆ ಸೈಕಲ್ ತಂದವನಿಗೆ ಸೈಕಲ್ ಚಾಲನೆ ತಿಳಿದಿದ್ದರೆ, ಸೈಕಲ್ ಹತ್ತಿ ಚಾಲನೆ ಮಾಡಿಕೊಂಡು ಬರುತ್ತಿದ್ದ; ಒಂದು ವೇಳೆ ಅವನು 'ಅಡ್ನಾಡಿ' ಯಾಗಿದ್ದರೆ, ಸೈಕಲ್ಲನ್ನು ತಳ್ಳಿಕೊಂಡು ತಂದೊಪ್ಪಿಸುತ್ತಿದ್ದ. ನಮ್ಮ ಹಳ್ಳಿಯಲ್ಲಿ ಸೈಕಲ್ ಚಾಲನೆ ಮಾಡಲು ಬರದಿದ್ದವರನ್ನು 'ಅಡ್ನಾಡಿ' ಎಂದು ಕರೆಯಲಾಗುತ್ತಿತ್ತು.

ಭಾಲೂ 'ಅಡ್ನಾಡಿ' ಯಾಗಿರಬೇಕೆಂದು ಯಾರೂ ಬಯಸುತ್ತಿರಲಿಲ್ಲ. ಭಾಲೂಗೂ ಸಹ ಇದು ನಾಚಿಕೆಗೇಡಿನ ಸಂಗತಿಯಾಗಿತ್ತು.

ಹೀಗಾಗಿ ಭಾಲೂ, ರಾತ್ರಿ ಕಲಾರಿಯಿಂದ ಮರಳಿ ಬರುತ್ತಿದ್ದ ಜನಾರ್ದನ ಸಿಂಗನ ಧ್ವನಿ ಹಳ್ಳಿಯಲ್ಲಿ ಕೇಳಿ ಬರದ ಹೊರತು ನಿದ್ರೆಯನ್ನು ಮಾಡುತ್ತಿರಲಿಲ್ಲ. ಹಳ್ಳಿಯಿಂದ ಒಂದು ಕಿ.ಮೀ. ದೂರದಲ್ಲಿದ್ದ ಸಿವಾನ್‌ನಿಂದಲೇ ಜನಾರ್ದನ ಸಿಂಗನ ಧ್ವನಿ ಕೇಳಿಸುತ್ತಿತ್ತು.

ಹಳ್ಳಿಯಲ್ಲಿ ಎಂಟು ನಾಯಿಗಳಿದ್ದವು. ಎಲ್ಲವೂ ಜನಾರ್ದನನನ್ನು ಚೆನ್ನಾಗಿ ಗುರುತಿಸುತ್ತಿದ್ದವು. ಅವನ ಧ್ವನಿ ಕೇಳುತ್ತಲೇ ಎಲ್ಲವೂ ಬೊಗಳುತ್ತಿದ್ದವು. ಅವುಗಳಲ್ಲಿ ಒಂದು ನಾಯಿ ಹಳ್ಳಿಯಿಂದ ಹೊರ ಹೋಗಿ, ಜನಾರ್ದನನ್ನು ಕರೆತರಲು ಸಿವಾನ್‌ವರೆಗೆ ಹೋಗುತ್ತಿತ್ತು. ಈ ನಾಯಿಯ ಕಪ್ಪು ಶರೀರದ ಮೇಲೆ ಬಿಳಿ ಚುಕ್ಕೆಗಳಿದ್ದವು. ಅದನ್ನು ಎಲ್ಲರೂ 'ಶಾನುಭೋಗ' ಎಂದು ಕರೆಯುತ್ತಿದ್ದರು. ನಮ್ಮ ಹಳ್ಳಿಯ ನಾಯಿಗಳ ಹೆಸರುಗಳು ಹೀಗೆಯೇ ಇರುತ್ತಿದ್ದವು. ಉದಾಹರಣೆಗೆ ಒಂದು ದಢೂತಿ ನಾಯಿಗೆ 'ಮಿನಿಸ್ಟರ್' ಎಂದು, ತುಂಬಾ ಸೋಮಾರಿಯಾಗಿದ್ದು ಸದಾ ನಿದ್ರಿಸುತ್ತಿದ್ದ ನಾಯಿಗೆ 'ಪೊಲೀಸ್ ಇನ್ಸ್‌ಪೆಕ್ಟರ್' ಎಂದು ಕರೆಯಲಾಗುತ್ತಿತ್ತು.

ರಾತ್ರಿ ಕಳ್ಳು ಕುಡಿದ ನಶೆಯಲ್ಲಿ ಜನಾರ್ದನ ಕಡಿಮೆ ತಿನ್ನುತ್ತಿದ್ದ, ಹೆಚ್ಚು ಮಾತನಾಡುತ್ತಿದ್ದ. ನಶೆಯಲ್ಲಿ ಕಪ್ಪು-ಬಿಳಿ ನಾಯಿ ಅಂದರೆ ಶಾನುಭೋಗನನ್ನು ಅಪ್ಪಿಕೊಂಡು ರೋದಿಸುತ್ತಿದ್ದ. ನಂತರ ತನ್ನ ರೊಟ್ಟಿಗಳನ್ನು ಅದಕ್ಕೆ ತಿನ್ನಿಸುತ್ತಿದ್ದ. ಜನಾರ್ದನನ ಹೆಂಡತಿ ಮದುವೆಯಾದ ನಾಲ್ಕು ವರ್ಷಗಳ ನಂತರ ಸಿಡುಬು ರೋಗಕ್ಕೆ ಬಲಿಯಾಗಿ ಸತ್ತಿದ್ದಳು ಎನ್ನಲಾಗುತ್ತದೆ. ಇದ್ದ ಒಬ್ಬ ಮಗನೂ ಸತ್ತಿದ್ದ. ಆಗಿನಿಂದಲೇ ಜನಾರ್ದನ ಇನ್ನೊಬ್ಬರ ಮನೆಗೆ ನುಗ್ಗಿ ಹೋಗುತ್ತಿದ್ದ. ಬಹುಶಃ ಹಳ್ಳಿಯಲ್ಲಿ 'ಶಾನುಭೋಗ' ಮಾತ್ರ ಅವನ ನೋವನ್ನು ಅರಿಯುತ್ತಿದ್ದ.

ಸಿವಾನ್‌ನಿಂದ ಜನಾರ್ದನನ ಧ್ವನಿ ಕೇಳಿದೊಡನೆಯೇ, ನಾಯಿಗಳು ಬೊಗಳಲು ಆರಂಭಿಸುತ್ತಿದ್ದವು; 'ಶಾನುಭೋಗ' ಅವನನ್ನು ಕರೆತರಲು ಸಿವಾನ್ ದಾರಿ ಹಿಡಿಯುತ್ತಿದ್ದ. ಅವನನ್ನು ಹಿಂಬಾಲಿಸಿ ಭಾಲೂ ಸಹ ಹೋಗುತ್ತಿದ್ದ. ನಮ್ಮ ಹಳ್ಳಿಯಿಂದ ಕಸಬಾ ನಾಲ್ಕು ಕಿ.ಮೀ. ದೂರದಲ್ಲಿತ್ತು. ನಡುವೆ ಒಂದು ಕಾಲುವೆಯಿತ್ತು, ಕೆಲವು ಹೊಲಗಳಿದ್ದವು. ಕಾಡಿತ್ತು; ಒಂದು ಬೆಟ್ಟದ ನಡುವಿನಿಂದ ಮಾರ್ಗವೊಂದು ಹಾದು ಹೋಗುತ್ತಿತ್ತು. ಭಾಲೂ ಹೋಗಿ ರಾತ್ರಿಯಲ್ಲೂ ಜನಾರ್ದನನ ಸೈಕಲ್ಲನ್ನು ಎಲ್ಲಿಂದಲಾದರೂ ಹುಡುಕಿ ತರುತ್ತಿದ್ದ. ಎರಡು-ಮೂರು ದಿನ ಸೈಕಲ್ ಚಾಲನೆ ಮಾಡುವುದನ್ನು ಕಲಿಯುತ್ತಿದ್ದ, ನಂತರ ಒಂದು ದಿನ ಸಿವಾನ್‌ನಲ್ಲಿ ಅದನ್ನು ಹೊಲವೊಂದರ ಬದುವಿನ ಮೇಲೆ ಮಲಗಿಸಿ ಮರಳಿ ಬರುತ್ತಿದ್ದ. ಹಳ್ಳಿಯ

ಪ್ರತಿಯೊಬ್ಬನೂ ಅವನು ಸೈಕಲ್ ತುಳಿಯುವುದನ್ನು ನೋಡಿದರೂ, ಈ ವಿಷಯ ಜನಾರ್ದನನಿಗೆ ತಿಳಿಯುತ್ತಿರಲಿಲ್ಲ. ಹೇಗಾದರೂ ಮಾಡಿ ಭಾಲೂ ಸೈಕಲ್ ಚಾಲೂ ಮಾಡುವುದನ್ನು ಕಲಿಯಲಿ, ಅವನು 'ಅಡ್ನಾಡಿ' ಯಾಗದಿರಲಿ ಎಂದು ಬಹುಶಃ ಎಲ್ಲರೂ ಬಯಸುತ್ತಿದ್ದರು.

ಭಾಲೂಗೆ ಸೈಕಲ್ಲಿನ ಹುಚ್ಚಿತ್ತು. ಅವನು ರಾತ್ರಿ ವೇಳೆಯಲ್ಲಿ, ಎಲ್ಲರು ನಿದ್ರಿಸುತ್ತಿರುವಾಗಲೂ ಸೈಕಲ್ ಹೊಡೆಯುತ್ತಿದ್ದ. ಸೈಕಲ್ಲಿನ ಮೃದುವಾದ, ನುಣುಪಾದ ಕಪ್ಪು ಸೀಟಿನಲ್ಲಿ ಕೂರುತ್ತಲೇ ತಾನು ಬೇರೊಂದು ಜಗತ್ತಿನ ಬೆನ್ನಿನ ಮೇಲೆ ಸವಾರಿ ಮಾಡಿದ್ದೇನೆಂದು ಅವನಿಗೆ ಅನ್ನಿಸುತ್ತಿತ್ತು; ಆ ಜಗತ್ತು ಅವನ ಹಿಂದಿನ ಜಗತ್ತಿಗಿಂತ ತುಂಬಾ ಭಿನ್ನವಾಗಿತ್ತು. ಸೈಕಲ್ಲಿನ ಪೆಡಲ್ ಮೇಲೆ ಕಾಲಿನ ಒತ್ತಡ ಬೀಳುತ್ತಲೇ ಅವನು ಹಿಂದಿನ ಜಗತ್ತಿನ ನೆಲದಿಂದ ಮುಕ್ತನಾಗುತ್ತಿದ್ದ. ಇದೊಂದು ಹಾರಾಟವಾಗಿತ್ತು. ಸೈಕಲ್ ಬಳಿಯಿದ್ದರೆ ಭಾಲೂಗೆ ರೆಕ್ಕೆಗಳು ಬಂದಂತಾಗುತ್ತಿತ್ತು. ಅವನು ಸೈಕಲ್ ಏರಿದಾಗ, ಅವನ ಸುತ್ತಮುತ್ತ ಹಿಂದಿನ ಜಗತ್ತಿನ ದೃಶ್ಯವೇ ಇರುತ್ತಿತ್ತು. ಅದೇ ಹೊಲ, ರಸ್ತೆ, ಸೆಮಲಿಯಾ, ಜಗತ್ ಮತ್ತು ರಾಮಾಧಾರನ ಅದೇ ಮನೆ, ಕೋಸಮ್, ಛಿವುಲೆ ಮತ್ತು ಚೆತ್ತದ ಅದೇ ಮರ; ಆದರೆ ಅವೆಲ್ಲವೂ ಈಗ ಬೇರೆ ಜಗತ್ತಿನವು ಎಂದು ಅನ್ನಿಸುತ್ತಿತ್ತು. ಭಾಲೂ, ಜನಾರ್ದನನ ಸೈಕಲ್ ಸೀಟಿನ ಮೇಲೆ ಕೂತು ಹಾರುತ್ತಾ-ಹಾರುತ್ತಾ ಅವುಗಳನ್ನು ನೋಡುತ್ತಿದ್ದ. ಅವು ಹಿಂದಕ್ಕೆ ಮತ್ತು ಕೆಳಭಾಗಕ್ಕೆ ಹೋಗುತ್ತಲೇ ಇದ್ದವು. ಅವೆಲ್ಲವೂ ಅವನನ್ನು ದೂರ, ಕೆಳಗೆ ಮತ್ತು ಹಿಂದಿನಿಂದ ಬೀಳ್ಕೊಡುತ್ತಿವೆ ಎಂದು ಅನ್ನಿಸುತ್ತಿತ್ತು. ಅವನು ಸೈಕಲ್ಲಿನ ತಣ್ಣನೆಯ, ನುಣುಪಾದ ಕಪ್ಪು ಸೀಟಿನ ಮೇಲೆ ಕೂತು ಯಾವುದೋ ಪ್ರವಾಸದಲ್ಲಿರುತ್ತಿದ್ದ. ಬೇರೊಂದು ಜಗತ್ತಿನ ಆಗಸದಲ್ಲಿ ಹಾರುತ್ತಿದ್ದ.

ಹಳ್ಳಿಯಿಂದ ಉತ್ತರದೆಡೆಗೆ ಹೋಗುವ ಮಣ್ಣಿನ ರಸ್ತೆ, ಹೊಲಗಳು ಮತ್ತು ತೋಟಗಳನ್ನು ದಾಟಿದ ನಂತರ ಒಂದು ಮರಳಿನ ತೀರದಿಂದ ಹಾದು ಹೋಗುತ್ತಿತ್ತು. ಅಲ್ಲಿ ಸಣ್ಣ-ಪುಟ್ಟ ಪೊದೆಗಳು ದೂರ-ದೂರದಲ್ಲಿ ಬೆಳೆದಿದ್ದವು. ಅವು ಮುಳ್ಳಿನ ಪೊದೆಗಳಾಗಿದ್ದವು. ಬೂದು ಬಣ್ಣದ ಆಮೆಗಳ ಬೆನ್ನಿನಂತೆ ಅಲ್ಲಲ್ಲಿ ಬಂಡೆಗಳ ತುಂಡುಗಳು ಬಿದ್ದಿರುತ್ತಿದ್ದವು. ಭಾಲೂ ರಾತ್ರಿ ವೇಳೆಯಲ್ಲಿ ಜನಾರ್ದನನ ಸೈಕಲ್ಲಿನಲ್ಲಿ ಏರಿ ಅಲ್ಲಿಂದ ಹಾದು ಹೋಗುವಾಗ ದೂರದವರೆಗೆ ಹಬ್ಬಿದ ನಿಶ್ಶಬ್ದದಲ್ಲಿ ಮುಳುಗಿದ ಮೆಕ್ಕಲು ದಡದ ಮರಳು ಮತ್ತು ಅತ್ತ-ಇತ್ತ ಆಮೆಗಳ ಬೂದು ಬಣ್ಣದ ಬೆನ್ನು ರಹಸ್ಯಮಯ ಲೋಕವೊಂದನ್ನು ಅವನೆದುರು ಸೃಷ್ಟಿಸುತ್ತಿತ್ತು. ಆಗಸದಲ್ಲಿ ಚಂದ್ರನಿರುತ್ತಿದ್ದ; ಚಂದ್ರನ ಅಸ್ಪಷ್ಟ ಹಳದಿ ಬೆಳಕು ಅಂಚಿಲ್ಲದ ರಗ್ಗಿನಂತೆ ಆ ಇಡೀ ದಡದಲ್ಲಿ ಹರಡಿರುತ್ತಿತ್ತು. ಹೆದರಿದ ಚಿಬಕಳಿ ಹಕ್ಕಿಯ ಧ್ವನಿ ಆ ನಿಶ್ಶಬ್ದವನ್ನು ಆಗಾಗ ಭೇದಿಸುತ್ತಿತ್ತು. ಭಾಲೂವಿನ

ಕಣ್ಣುಗಳು ಸೈಕಲ್ಲಿನ ಹ್ಯಾಂಡಲ್ ಮೇಲೆ ಸ್ಥಿರವಾಗುತ್ತಿತ್ತು. ಆಗಸದಲ್ಲಿ ಚಂದಿರ ಸುವರ್ಣದ ದೀರ್ಘ ರೇಖೆಯಾಗಿ ಹ್ಯಾಂಡಲ್ ಮೇಲೆ ಚಮಚಮ ಹೊಳೆಯುತ್ತಿದ್ದ. ಗಾಳಿಯಲ್ಲಿ ಬೆಳದಿಂಗಳ ತೇವಾಂಶವಿರುತ್ತಿತ್ತು; ಇದು ಭಾಲೂವಿನ ಉಸಿರಿನೊಂದಿಗೆ ಅವನ ಶ್ವಾಸಕೋಶಗಳನ್ನು ಪ್ರವೇಶಿಸುತ್ತಿತ್ತು; ಅವನ ಇಡೀ ದೇಹ ಚಳಿಯಿಂದಾಗಿ ಕಂಪಿಸುತ್ತಿತ್ತು. ಅವನಲ್ಲಿ ಉತ್ಸಾಹದ ಸಂಚಾರವಾಗುತ್ತಿತ್ತು. ಬೆಳದಿಂಗಳಿನಲ್ಲಿ ಮಿಂದಂಥ ಉಲ್ಲಾಸ. ಇಂಥ ಸಂದರ್ಭದಲ್ಲಿ ಭಾಲೂ ಸಾಮಾನ್ಯವಾಗಿ ಹಾಡುತ್ತಿದ್ದ:

'ಬೋಲೈ ರೇ ಚಿರೈಯಾಹೋ ಆಧೀ ರಾತ್, ಟಿಟೀ ಹೀಂ...ಟಿಟೀ ಹೀಂ...ಟಿಟೀ ಹೀಂ.......

ಟಿಟೀ, ... ಹೀಂ, ...ಟಿಟೀ, , ಹೀಂ ಈಂ..., ಈಂ, ..., '

ಭಾಲೂ ಧ್ವನಿ ರಾತ್ರಿ ವೇಳೆಯಲ್ಲಿ ದೂರ-ದೂರಕ್ಕೆ, ಮೆಕ್ಕಲು ದಡ, ಸಿವಾನ್ ಹೊಲಗಳ ಬದುಗಳು, ನದಿ ತೀರಗಳು ಮತ್ತು ಮೆಕಲ್‌ನ ತಗ್ಗು ಪ್ರದೇಶದಲ್ಲಿ ಕೇಳಿಸುತ್ತಿತ್ತು. ಹಳ್ಳಿಯಲ್ಲಿ, ರಾತ್ರಿ ವೇಳೆಯಲ್ಲಿ ಅರೆನಿದ್ರೆಯಲ್ಲಿ ಯಾರಾದರು ಇದನ್ನು ಕೇಳಿದರೆ, ಅವನು ತನಗೆ ತಾನೇ ಮುಗುಳ್ನಗುತ್ತಿದ್ದ.

ಭಾಲೂ ಕನಸಿನಲ್ಲೂ ಸೈಕಲ್ ಚಾಲನೆ ಮಾಡುತ್ತಿದ್ದ. ಅವನು ಪೆಡಲ್ ತುಳಿಯುವುದನ್ನು ಬಿಟ್ಟರೂ ಸೈಕಲ್ ಮುಂದಕ್ಕೆ ಹೋಗುತ್ತಿತ್ತು. ಮಾರ್ಗದಲ್ಲಿ ಹೊಂಡವಿದ್ದರೆ, ಸೈಕಲ್ ಅದರ ಮೇಲಿನಿಂದ ಹಾರಿ ಹೋಗುತ್ತಿತ್ತು; ಅದು ತನ್ನಷ್ಟಕ್ಕೆ ತಾನೇ ಹಾರುತ್ತಿತ್ತು. ಅವನು ಒಮ್ಮೆ ಮೆಕಲ್ ಬೆಟ್ಟದ ತುದಿಯಲ್ಲಿ ಸೈಕಲ್ ಚಾಲನೆ ಮಾಡುತ್ತಾ ಮೇಲಿನಿಂದ, ಕೆಳಗೆ ಹೋದ ತನ್ನ ಹಳ್ಳಿ, ಹೊಲ ಮತ್ತು ಮರಗಳನ್ನು ನೋಡಿದರೆ, ಇನ್ನೊಮ್ಮೆ ಅವನು ನದಿಯ ತೀವ್ರ ಧಾರೆಯೊಳಗೆ ಹರಿಯುತ್ತಾ ನೀರಿನ ಕೆಳ ಭಾಗದಲ್ಲಿ ಮೀನುಗಳು, ಪಾಚಿಗಳು ಮತ್ತು ನದಿಯಲ್ಲಿ ಮುಳುಗಿದ ಮಣ್ಣಿನ ಮಡಿಕೆಗಳ ನಡುವೆ ಪೆಡಲ್ ತುಳಿಯುತ್ತಿದ್ದ. ಅಲ್ಲಿ ಅದೆಷ್ಟೋ ಬಾರಿ, ನೀರಿನಲ್ಲಿ ವಾಸಿಸುವ ಹಾವು-ಮೀನು ಸೈಕಲ್ಲಿನ ಹ್ಯಾಂಡಲ್‌ಗೆ ಸುತ್ತಿಕೊಳ್ಳುತ್ತಿತ್ತು.; ಒಮ್ಮೊಮ್ಮೆಯಂತೂ 'ಪನ್‌ಡೋಂಡ' ಹಾವುಗಳು ಅವನನ್ನು ಹಿಂಬಾಲಿಸುತ್ತಿದ್ದವು. ಅವನು ಓಡುತ್ತಿದ್ದ. ರಭಸದಿಂದ ಪೆಡಲ್ ತುಳಿಯುತ್ತಿದ್ದ. ಅವನು ನೀರಿನ ತಳಭಾಗದಿಂದ, ನದಿಯ ಆಳದಿಂದ ಹೊರ ಬಂದು ಗಟ್ಟಿ ನೆಲಕ್ಕೆ ಬರಲು ಬಯಸುತ್ತಿದ್ದ. ಆದರೆ ಅವನ ಕಣ್ಣುಗಳೆದುರು ಅಗಾಧ ಜಲರಾಶಿಯ ಹಸಿನು ಬಣ್ಣ ಕವಿಯುತ್ತಿತ್ತು. ಉಸಿರಿನೊಂದಿಗೆ, ಗಾಳಿಯ ಬದಲು ನೀರು ಅವನ ಶ್ವಾಸಕೋಳಗಳಿಗೆ ಹೋಗಿ ತುಂಬಿಕೊಳ್ಳುತ್ತಿತ್ತು. ಅವನು ಹೆದರಿ ಕಿರುಚುತ್ತಿದ್ದ. ಆಗ ಅವನ ಸೈಕಲ್ ಕಲ್ಲಿಗೋ, ದಿಣ್ಣೆಗೋ ಡಿಕ್ಕಿ ಹೊಡೆಯುತ್ತಿತ್ತು. ಅವನು ಬೀಳುತ್ತಾ ಗಾಬರಿಯಿಂದ ಸುತ್ತಮುತ್ತ ನೋಡುತ್ತಿದ್ದ. ನದಿಯ ಕೆಳಭಾಗ ಎಲ್ಲಿದೆ? ಮೆಕಲ್ ಬೆಟ್ಟದ ತುದಿ ಎಲ್ಲಿಗೆ ಹೋಯಿತು? ಭಯ ಹುಟ್ಟಿಸುವ ನೀರಿನ ಕರಿ ಹಾವುಗಳು ಎಲ್ಲಿಗೆ ಹೋದವು?

ಮನೆ ಮಂದಿ, ಭಾಲೂಗೆ ಹುಚ್ಚು ಹಿಡಿದಿದೆ ಎನ್ನುತ್ತಿದ್ದರು. ರಾತ್ರಿ ವೇಳೆಯಲ್ಲಿ ನಿದ್ರಿಸುತ್ತಲೇ ಅವನು ತನ್ನ ತಮ್ಮನ ಕಾಲುಗಳನ್ನು ಒತ್ತುತ್ತಿದ್ದ ಅಥವಾ ನಿದ್ರೆಯಲ್ಲಿಯೇ ತಡಬಡಿಸುತ್ತಾ ಕೈ-ಕಾಲುಗಳನ್ನು ಬಡಿಯುತ್ತಿದ್ದ. ಆಗ ಭಾಲೂ ವಾಸ್ತವವಾಗಿ, ಆಳ ಕಂದಕದಲ್ಲಿ ಬೀಳುವುದರಿಂದ ಪಾರಾಗಲು, ತನ್ನ ಸೈಕಲ್ಲಿನ ಬ್ರೇಕ್ ಹಾಕಲು ಭಯದಿಂದ ಪ್ರಯತ್ನಿಸುತ್ತಿದ್ದಾನೆ ಎಂಬ ಸತ್ಯವನ್ನು ತಿಳಿಯಲು ಯಾರಿಗೂ ಸಾಧ್ಯವಿರಲಿಲ್ಲ.

ಬಿ.ಜಿ. ರಾಜೋರಿಯಾ ಉರ್ಫ್ ಬಾಲೂ ಉರ್ಫ್ ಭಾಲೂ ಸೈಕಲ್ ಚಾಲನೆ ಮಾಡುವುದನ್ನು ಹೀಗೆಯೇ ಕಲಿತಿದ್ದ. ಎಂಟು, ಹತ್ತು, ಹೈಯರ್ ಸೆಕೆಂಡರಿ ಅಥವಾ ಬಿ.ಎ.ಯಲ್ಲಿ ಅವನು ಮೊದಲ ದರ್ಜೆಯಲ್ಲಿ ತೇರ್ಗಡೆಯಾಗಿದ್ದಕ್ಕೆ ಪ್ರತಿಯಾಗಿ ಸೈಕಲ್ ಖರೀದಿಸಿಕೊಡುವಂಥ ಪರಿಸ್ಥಿತಿ ಅವನ ಮನೆಯವರಿಗಿರಲಿಲ್ಲ. ಹಾಂ, ಬಿ.ಎ. ಮಾಡಿದ ನಂತರ ಅವನ ತಂದೆ ಸಿವಾನ್‌ಗೆ ಸಮೀಪದಲ್ಲಿದ್ದ ತನ್ನ ಆರು ಕಟ್ಟಾ [ಜಮೀನಿನ ಅಳತೆ] ಹೊಲವನ್ನು ಮಾರಿದ್ದ; ಲೋಕಲ್ ಎಂ.ಎಲ್.ಎ. ಬಲರಾಜ್ ತ್ರಿಪಾಠಿಯವರ ಸಹಾಯದಿಂದ ಒಂದು ಲಕ್ಷ ರೂಪಾಯಿ ಲಂಚ ಕೊಟ್ಟು ಸರ್ಕಾರಿ ಡಿಗ್ರಿ ಕಾಲೇಜಿನಲ್ಲಿ ಲೆಕ್ಚರರ್ ಕೆಲಸವನ್ನು ಕೊಡಿಸಿದ್ದ. ಹೊಲಗಳ ರಿಜಿಸ್ಟ್ರೇಶನ್ ಆದ ದಿನ ಭಾಲೂನ ಮನೆಯ ಒಲೆ ಹೊತ್ತಿರಲಿಲ್ಲ. ಅವು ಪಿತ್ರಾರ್ಜಿತ ಹೊಲಗಳಾಗಿದ್ದವು. ಲಂಚದ ಒಂದು ಲಕ್ಷ ರೂಪಾಯಿಗಳಲ್ಲಿ ಐವತ್ತು ಸಾವಿರ ರೂಪಾಯಿಗಳನ್ನು ಎಂ.ಎಲ್.ಎ. ಪಡೆದಿದ್ದ ಎನ್ನಲಾಗುತ್ತದೆ.

ಇದಾದ ನಂತರ ಹದಿನೈದು-ಇಪ್ಪತ್ತು ವರ್ಷಗಳವರೆಗೆ ಭಾಲೂನ ಪತ್ತೆಯೇ ಇರಲಿಲ್ಲ. ಅನೇಕ ಜಿಲ್ಲೆಗಳ ಸರ್ಕಾರಿ ಕಾಲೇಜುಗಳಿಗೆ ಅವನ ವರ್ಗಾವಣೆಯಾಗುತ್ತಿತ್ತು. ಅದೊಂದು ದಿನ ಅಕಸ್ಮಾತ್ ಫೋನ್ ರಿಂಗಾಯಿತು. ಅತ್ತ ಕಡೆಯಿಂದ ಭಾಲೂ ಮಾತನಾಡುತ್ತಿದ್ದ; ಇದೇ ನಗರದ ಕಾಲೇಜೊಂದರಲ್ಲಿ ಲೆಕ್ಚರರ್ ಆಗಿ ಬಂದಿದ್ದೇನೆಂದು ಹೇಳಿದ. ನಾನು ಲಾಂಡ್ರಿ ಅಂಗಡಿ ನಡೆಸುತ್ತಿದ್ದೆ. ನನ್ನ ಅಪ್ಪ ಹೊಲ ಮಾರಿ ಲಂಚ ಕೊಡಲು ಒಪ್ಪಿರಲಿಲ್ಲ, ಹೀಗಾಗಿ ಹಿಂದಿ ಸಾಹಿತ್ಯದಲ್ಲಿ ಮೊದಲ ದರ್ಜೆಯಲ್ಲಿ ಉತ್ತೀರ್ಣನಾಗಿದ್ದು, ಗೋಲ್ಡ್ ಮೆಡಲ್ ಆಗಿದ್ದಾಗ್ಯೂ ನನಗ್ಯಾವುದೇ ನೌಕರಿ ಸಿಕ್ಕಿರಲಿಲ್ಲ. ಈಗ್ಯೆ ಹತ್ತು ವರ್ಷಗಳ ಹಿಂದೆ ಭಾಲೂ ಬೇರೆ ಜಾತಿಯ ಹುಡುಗಿಯನ್ನು 'ಲವ್‌ಮ್ಯಾರೇಜ್' ಆಗಿದ್ದನೆಂಬ ವಿಷಯ ತಿಳಿಯಿತು. ಹುಡುಗಿ ಬೇರೆ ಜಾತಿಯವಳಾದ್ದರಿಂದ ಅವನ ತಂದೆ ಕೋಪಿಸಿಕೊಂಡಿದ್ದರು. ಭಾಲೂಗೆ ನೌಕರಿ ಸಿಕ್ಕ ನಂತರ ವರದಕ್ಷಿಣೆಯಲ್ಲಿ ದೊಡ್ಡ ಗಂಟನ್ನು ಪಡೆಯಬೇಕು; ಅವನಿಗೆ ನೌಕರಿ ಕೊಡಿಸುವಾಗಿನ ಸಮಯದಲ್ಲಿ ಮಾರಿದ ಆರು ಕಟ್ಟಾ ಪಿತ್ರಾರ್ಜಿಸ ಹೊಲದ ಬಾಬ್ತನ್ನು ಈಗ ವರದಕ್ಷಿಣೆ ಹಣ ಪಡೆದು ಅದಕ್ಕಿಂತ ಎರಡು ಪಟ್ಟು ಹೊಲ ಖರೀದಿಸಿ ಹಳ್ಳಿಯವರಿಗೆ ತನ್ನ 'ಪ್ಲಾನಿಂಗ್' ಹೇಗಿರುತ್ತದೆ ಎಂಬುದನ್ನು ತೋರಿಸಬೇಕು

ಎಂದು ಅವನ ತಂದೆ ಯೋಚಿಸಿದ್ದ. ಆದರೆ ಭಾಲೂ ತಂದೆಯ ಎಲ್ಲಾ ಪ್ಲಾನ್‌ಗಳಿಗೂ ನೀರು ಎರಚಿದ್ದ.

ಭಾಲೂ ಬಾಲ್ಯದಲ್ಲಿ ಸೈಕಲ್‌ಗಾಗಿ ಹುಚ್ಚನಾಗಿದ್ದ; ಅಂತೆಯೇ ನಂತರದಲ್ಲಿ ಅವನ ಹೆಂಡತಿಯಾಗಿದ್ದ ಆ ಹುಡುಗಿಗಾಗಿ ಹುಚ್ಚನಾಗಿದ್ದ ಎಂಬುದು ತಿಳಿಯಿತು. ಅವನು ಆ ಹುಡುಗಿಯೊಂದಿಗೆ ರಾತ್ರಿಯ ನಿಶ್ಶಬ್ದತೆಯಲ್ಲಿ ಹಳ್ಳಿಯ ಹೊರಗಿದ್ದ ನಿರ್ಜನ ಹಾಳು ಪ್ರದೇಶದಲ್ಲಿ, ಮರಳಿನ ಬದುವಿನ ಬಳಿ ಅಥವಾ ಮೆಕಲ್ ಬೆಟ್ಟದ ತುದಿಯಲ್ಲಿ ಅಥವಾ ನದಿಯ ಧಾರೆಯ ಕೆಳಗಿನ ತಗ್ಗು ಪ್ರದೇಶದಲ್ಲಿ ಅಡ್ಡಾಡುತ್ತಿರಬಹುದೆಂಬ ಅನುಮಾನ ನನಗಿದೆ. ಆಗಸದಲ್ಲಿ ಹೊಳೆಯುವ ಚಂದಿರನ ಬೆಳದಿಂಗಳಿನಲ್ಲಿ ಆ ಹುಡುಗಿ ಸಹ, ಜನಾರ್ದನ ಸಿಂಗ್ ಶ್ಯಾನುಭೋಗನ ಸೈಕಲ್ ಹ್ಯಾಂಡಲ್ ರಾತ್ರಿ ವೇಳೆಯಲ್ಲಿ ಬಂಗಾರದ ಹ್ಯಾಂಡಲ್ ಆಗಿ ಬದಲಾಗುವಂತೆ, ಬಂಗಾರದ ಹೊಳೆಯುವ ಲೋಹವಾಗಿ ಬದಲಾಗುತ್ತಿರಬಹುದು ಎಂಬ ಅನುಮಾನವೂ ನನಗಿದೆ.

ಕುತೂಹಲದ ವಿಷಯವೆಂದರೆ, ಈಗ ನಮ್ಮ ಭಾಲೂ ಕವನಗಳನ್ನು ಬರೆಯಲಾರಂಭಿಸಿದ್ದು, 'ಕವಿ' ಯಾಗಿ ಹೆಸರುವಾಸಿಯಾಗಿದ್ದ. ಅನೇಕ ಚಿಕ್ಕ-ಪುಟ್ಟಪತ್ರಿಕೆಗಳಲ್ಲಿ ಅವನ ಕವನಗಳು ಪ್ರಕಟಗೊಳ್ಳುತ್ತಿದ್ದವು. ಅವನು ಒಂದೆರಡು ಪುಸ್ತಕಗಳನ್ನೂ ಪ್ರಕಟಿಸಿದ್ದ. ಆದರೆ ಅವನು ನನ್ನನ್ನು ಭೇಟಿಯಗಲು ಬಂದಾಗ, ಈ ಹಿಂದಿನಂತೆಯೇ ಕಂಡು ಬಂದ. ಈಗ ಅವನಿಗೆ 'ಭಾಲೂ' ಎಂದರೆ ಅವನು ರೇಗುತ್ತಾನೆ, 'ನನ್ನನ್ನು ಡಾ.ರಾಜೋರಿಯಾ ಎಂದು ಕರೆ ಅಥವಾ ಬಾಲ ಗೋಪಾಲರೇ ಎಂದು ಕರೆ ಅಥವಾ ಬಿ.ಜಿ. ಎಂದು ಕರೆ' ಎಂದು ಹೇಳುತ್ತಾನೆಂದು ನಾನು ಯೋಚಿಸಿದ್ದೆ. ಆದರೆ ಅವನನ್ನು 'ಭಾಲೂ' ಎಂದು ಕರೆದಾಗ ಅವನು ತುಂಬಾ ಸಹಜವಾಗಿ ನನ್ನೆಡೆಗೆ ನೋಡಿ, "ಹೂಂ" ಎಂದ. ನಾನು ಬಾಲ್ಯದಂತೆ ಮತ್ತೊಮ್ಮೆ ಸೋತಿದ್ದೆ.

ನಾನು ಅವನನ್ನು ರೇಗಿಸಲು ಹಾಡಿದೆ-

'ಆಲೂ-ಬದನೆ ಪಲ್ಯ'

ಭಾಲೂ ತಕ್ಷಣ ನನಗೆ ಸಹಕರಿಸಿದ-

'ಕುಣಿದಳು ಭಾಲೂ ಅವ್ವ, ಬಿಸಿ-ಬಿಸಿ ಕಾಳುಪಲ್ಯ'

ಭಾಲೂ ಈ ಹಿಂದಿನಂತೆಯೇ ನಕ್ಕ.

ಅವನನ್ನು ರೇಗಿಸಲು ಸಾಧ್ಯವಿರಲಿಲ್ಲ. ಅವನು ಅಜಾತಶತ್ರುವಾಗಿದ್ದ. ಅಪರಾಜೇಯನಾಗಿದ್ದ. ನಾವಿಬ್ಬರೂ ನಕ್ಕೆವು. ಎಷ್ಟು ನಕ್ಕೆವೆಂದರೆ, ನಮ್ಮ ಕಣ್ಣುಗಳಿಂದ ಕಣ್ಣೀರು ಹರಿಯಿತು.

ಭಾಲೂ ಲೇಶಮಾತ್ರವೂ ಬದಲಾಗಿರಲಿಲ್ಲ, ಆದರೆ ಈ ನಡುವೆ ಇಡೀ ಜಗತ್ತು ಸಂಪೂರ್ಣವಾಗಿ ಬದಲಾಗಿತ್ತು. ನಮ್ಮ ಹಳ್ಳಿಯೂ ಸಹ ಈ ಹಿಂದಿನಂತೆ, ಮಣ್ಣಿನ ಮನೆಗಳಾಗಿ, ಹೆಂಚಿನ ಮನೆಗಳಾಗಿ ಉಳಿದಿರಲಿಲ್ಲ. ಅಲ್ಲಿ ಸಿಮೆಂಟಿನ ಅನೇಕ ಮನೆಗಳು ನಿರ್ಮಾಣಗೊಂಡಿದ್ದವು. ಐದಾರು ಮನೆಗಳಲ್ಲಿ ಟಿ.ವಿ. ಡಿಶ್ ಎಂಟೆನಾಗಳು ರಾರಾಜಿಸುತ್ತಿದ್ದವು. ಊಳಲು ಟ್ರಾಕ್ಟರ್‌ಗಳು ಬಂದಿದ್ದವು. ನೊಗ-ಎತ್ತುಗಳಿಂದ ಉಳುಮೆ ಮಾಡುವ ಬದಲು ರೈತನ ಬಳಿ ಟ್ರಾಕ್ಟರ್ ಇಲ್ಲದಿದ್ದಲ್ಲಿ, ಅದನ್ನು ಬಾಡಿಗೆಗೆ ತರುತ್ತಿದ್ದ. ಬಿತ್ತನೆ, ಕಳೆ ಕೀಳುವುದು, ಒಕ್ಕಣೆ ಮತ್ತು ಕೊಯಿಲಿನ ಕೆಲಸವನ್ನು ಹೆಂಗಸರು ಮಾಡಲು ಹಿಂಜರಿಯುತ್ತಿದ್ದರು. ಹೊಲಗಳಲ್ಲಿ ಕೆಲಸ ಮಾಡಲು ಕೂಲಿ ಕಾರ್ಮಿಕರು ಸಿದ್ಧರಿರುತ್ತಿರಲಿಲ್ಲ. ಕೆಸರಿನಲ್ಲಿ ಹಗಲಿಡಿ ಯಾಕಿರಬೇಕು ಎಂಬ ಧೋರಣೆ ಅವರಲ್ಲಿತ್ತು. ಭೂಮಿ ಇಲ್ಲದವರು ಅಧಿಕ ಸಂಖ್ಯೆಯಲ್ಲಿ ಹಳ್ಳಿಯನ್ನು ಬಿಟ್ಟು ನಗರಕ್ಕೆ ಹೊರಟು ಹೋಗಿದ್ದರು. ಅಲ್ಲಿ ಅವರು ರಿಕ್ಷಾ ಓಡಿಸುತ್ತಿದ್ದರು ಅಥವಾ ನಿರ್ಮಾಣದ ಹಂತದಲ್ಲಿರುವ ಕೆಲಸಗಳಿಗೆ ಕೂಲಿಯಾಗಿ ದುಡಿಯುತ್ತಿದ್ದರು. ಕೆಲವರು ರಸ್ತೆ ಬದಿಯಲ್ಲಿ ಕೈಗಾಡಿ ಇಟ್ಟುಕೊಂಡು ಜೀವನ ಸಾಗಿಸುತ್ತಿದ್ದರು. ಹಳ್ಳಿಯಲ್ಲಿ ಏನೂ ಉಳಿದಿರಲಿಲ್ಲ. ನಗದು ಹಣವೆಲ್ಲಾ ನರದಲ್ಲಿಯೇ ಮುದುಡಿ ಕೂತಿತ್ತು. ಉದ್ಯೋಗಗಳೂ ಅಲ್ಲಿಯೇ ಇದ್ದವು. ಎಲ್ಲೋ ಫ್ಲೈಓವರ್ ನಿರ್ಮಾಣವಾಗುತ್ತಿದ್ದರೆ, ಇನ್ನೆಲ್ಲೋ ಹೊಟೇಲ್, ಮಗುದೆಲ್ಲೋ ವಸತಿ ಸಮುಚ್ಚಯಗಳು, ಇನ್ನೆಲ್ಲೋ ಮೆಟ್ರೋ ರೈಲು ಸೇತುವೆಗಳು ನಿರ್ಮಾಣಗೊಳ್ಳುತ್ತಿದ್ದವು. ಕಳ್ಳರು ಸಹ ಹಳ್ಳಿಯನ್ನು ಇಣಿಕಿ ನೋಡುತ್ತಿರಲಿಲ್ಲ. ಕನ್ನ ಹಾಕಿದರೆ ಅವರಿಗೆ ಅನ್ನದ ಪಾತ್ರೆ ಮತ್ತು ಕವಳೆಕಾಯಿಯ ದೇಸಿ ಉಪ್ಪಿನಕಾಯಿಯ ಜಾಡಿಗಳನ್ನು ಹೊರತುಪಡಿಸಿ ಬೇರೇನೂ ಸಿಗುತ್ತಿರಲಿಲ್ಲ. ಧವಸ-ಧಾನ್ಯಗಳನ್ನು ಹೊಲಗಳಲ್ಲಿ ಈಗಲೂ ಬೆಳೆಯಲಾಗುತ್ತಿತ್ತು. ಆದರೆ ಅವುಗಳಿಗೆ ಪೇಟೆಯಲ್ಲಿ ಬೆಲೆ ಇರಲಿಲ್ಲ. ಮುಷ್ಕರ-ಧರಣಿ ಮಾಡಿದಾಗ ಅಥವಾ ರೈತನ ಪರಿಸ್ಥಿತಿ ಕಂಡು ಸರ್ಕಾರ ಆಗಾಗ ಅವರ ಬೆಳೆಗಳನ್ನು ಕೊಂಡು ಗೋದಾಮುಗಳಲ್ಲಿ ಕೊಳೆಯಿಸುತ್ತಿತ್ತು.

ಒಟ್ಟಿನಲ್ಲಿ ಪರಿಸ್ಥಿತಿ ಬಿಗಡಾಯಿಸಿತ್ತು. ಆದರೆ ಆಗಲೂ ಅಭಿವೃದ್ಧಿಯಾಗಿತ್ತು. ನಮ್ಮ ಹಳ್ಳಿಯಿಂದ ನಾಲ್ಕು ಕೀ.ಮಿ. ಮಾರ್ಗ ಹೊಲಗಳು, ಕಾಡು ಮತ್ತು ಬೆಟ್ಟಗಳ ನಡುವೆಯಿಂದ ಹಾದು ಹೋಗುತ್ತಿತ್ತು; ಅಲ್ಲಿ ಜನಾರ್ದನ ಸಿಂಗ್ ಕಲಾರಿಯಿಂದ ಕಳ್ಳು ಕುಡಿದು ಮರಳಿ ಬರುವಾಗ ತನ್ನ ಸೈಕಲ್ಲಿನೊಂದಿಗೆ ಹೊಂಡವೊಂದರಲ್ಲಿ ಬಿದ್ದಿರುತ್ತಿದ್ದ; ಈಗ ಆ ಮಾರ್ಗದಲ್ಲಿ ಟಾರ್ ಹಾಕಿ ಸ್ಟೇಟ್ ಹೈವೇಯನ್ನಾಗಿ ಮಾಡಲಾಗಿತ್ತು. ಕಾಡು ಕಡಿದು, ಅಲ್ಲಿ ಕೇಡಿಯಾಜಿ ಅವರ ಒಂದೂವರೆ ಕೋಟಿಯ ಕೋಲ್ಡ್ ಸ್ಟೋರೇಜ್ ನಿರ್ಮಾಣಗೊಂಡಿತ್ತು. ಕಭಾರ್ ಮತ್ತು ಮೆಕಲ್ ಬೆಟ್ಟದ

ತಳಭಾಗದಿಂದ ಮಾರ್ಗವೊಂದು ಹಾದು ಹೋಗುತ್ತಿತ್ತು; ಇಲ್ಲಿ ಈ ಮೊದಲು ನಮ್ಮ ಭಾಲೂ ರಾತ್ರಿ ವೇಳೆಯಲ್ಲಿ ಸೈಕಲ್ ಚಾಲನೆ ಮಾಡುತ್ತಿದ್ದ; ಈಗ ಈ ಮಾರ್ಗ ವಿಶ್ವ ಬ್ಯಾಂಕ್ ಸಹಾಯದಿಂದ ಹೈವೇ ಆಗಿ ರೂಪುಗೊಂಡಿತ್ತು. ಆ ಮಾರ್ಗದಲ್ಲಿ ಹಗಲು-ರಾತ್ರಿ ಟ್ರಕ್ ಮತ್ತು ಇನ್ನಿತರ ವಾಹನಗಳು ಸಾಗುತ್ತಿದ್ದವು. ರಸ್ತೆಯ ಎರಡೂ ಬದಿಗಳಲ್ಲಿ ಢಾಬಾಗಳು ತೆರೆದಿದ್ದವು. ಶಾಹಿ ಪನೀರ್, ಭೋಲೆ ಮಸಾಲಾ, ಮಲಾಯಿ ಕೋಫ್ತಾ, ತಂದೂರಿ ಚಿಕನ್, ದಾಲ್ ಮಖನಿ, ಬಟರ್ ಚಿಕನ್, ದಾಲ್ ಫ್ರೈ, ಬಿರಿಯಾನಿ ಹೀಗೆ ಅಲ್ಲಿ ಇನ್ನೂ ಏನೇನೋ ಕ್ಷಣ ಮಾತ್ರದಲ್ಲಿ ತಯಾರಾಗಿ ಲಭಿಸುತ್ತಿತ್ತು. ರಾತ್ರಿ ವೇಳೆಯಲ್ಲಿ ಬಡ ಮಹಿಳೆಯರು ಕಸುಬಿಗಾಗಿ ನಿಂತಿರುವುದು ಕಾಣ ಬರುತ್ತಿತ್ತು. ಪಕ್ಕದ ಹಳ್ಳಿಯ ಫುಲವಂತಿ ಟ್ರಕ್ ಚಾಲಕರ ನಡುವೆ 'ನೀಲಿ ಚಡ್ಡಿಯವಳು' ಎಂಬ ಹೆಸರಿನಿಂದ ಪ್ರಸಿದ್ಧಿಯಾಗಿದ್ದಳು.

ಅಭಿವೃದ್ಧಿಯಂತೂ ಆಗಿತ್ತು. ಝೂನು, ಸಮನೂ, ರಮೈಯಾ, ಕೋದೂ- ಈ ಎಲ್ಲಾ ಗಂಡು-ಹೆಣ್ಣು ಮಕ್ಕಳ ಹೆಸರು ಅಭಿಷೇಕ್, ರಿತಿಕ್, ಸನಿ, ಸೋನಾಲಿ, ಏಕತಾ, ರಿಂಕೂ ಎಂದಾಗುತ್ತಿದ್ದವು. ಎಂ.ಎಲ್.ಎ. ತ್ರಿಪಾಠಿ ಈಗ ಲೋಕ್ ನಿರ್ಮಣ್ ಮಂತ್ರಿಯಾಗಿದ್ದರು. ಪಂಚಾಯಿತಿ ಅಧ್ಯಕ್ಷ ಗುತ್ತಿಗೆದಾರನಾಗಿದ್ದ. ಅವನ ಮನೆಯಲ್ಲಿ ಟಾಟಾ 407, ಕಮಾಂಡರ್ ಜೀಪ್ ಮತ್ತು ಎಸ್ಕಾರ್ಟ್ ಟ್ರಾಕ್ಟರ್‌ಗಳು ನಿಂತಿದ್ದವು. ಹಾಂ, ಶಾಲೆಯ ಕಟ್ಟಡ ಕುಸಿದಿತ್ತು, ಮಕ್ಕಳು ಮರದ ಕೆಳಗೆ ಕೂತು ಕಲಿಯುತ್ತಿದ್ದರು. ಸರ್ಕಾರಿ ಆಸ್ಪತ್ರೆಗಳಲ್ಲಿ ದನಕರುಗಳು ಮಲಗುತ್ತಿದ್ದವು. ಹಳ್ಳಿಯ ಬಡ ಕುಟುಂಬಗಳಲ್ಲಿನ ಹೊಸ ಪೀಳಿಗೆಯಲ್ಲಿ ಶ್ರೀಮಂತರ ಮಕ್ಕಳ ರೂಪವನ್ನು ಹೋಲುತ್ತಿದ್ದ ಸಂತತಿಗಳು ಇದ್ದಕ್ಕಿದ್ದಂತೆ ಹುಟ್ಟಿದ್ದವು.

ಆದರೆ ಆಶ್ಚರ್ಯದ ಸಂಗತಿ ಎಂದರೆ ಭಾಲೂ ಈಗಲೂ ಈ ಹಿಂದಿನಂತೆಯೇ ಇದ್ದ. ಅದೇ ಮೊದಲಿನ ಭಾಲೂ. ಬಡ್ಡಿ ರಹಿತ ಸಾಲದ ಎಲ್ಲಾ ಯೋಜನೆಗಳಿದ್ದಾಗ್ಯೂ ಅವನು ತನ್ನ ಪಿ.ಎಫ್. ನಿಂದ ಕಾರನ್ನು ಖರೀದಿಸದ ಸಂಗತಿ ತಿಳಿಯಿತು. ಅವನು ಸೈಕಲ್ಲನ್ನೇ ಖರೀದಿಸಿದ. ಪ್ರತಿ ಎರಡು ವರ್ಷಕ್ಕೊಮ್ಮೆ ಅವನು ಹಳೆ ಸೈಕಲ್ಲನ್ನು ಮಾರಿ ಹೊಸದನ್ನು ಖರೀದಿಸುತ್ತಿದ್ದ. ಅವನು ಕಾಲೇಜಿಗೆ ಸೈಕಲ್ಲಿನಲ್ಲಿಯೇ ಹೋಗುತ್ತಿದ್ದ.

ಭಾಲೂ 'ಲವ್ ಮ್ಯಾರೇಜ್' ಆಗಿದ್ದ ಹುಡುಗಿಯ ಹೆಸರು 'ಮಾಲಾ' ಎಂದಾಗಿತ್ತು. ಭಾಲೂಗೆ ಅವಳ ಬಗ್ಗೆ ಪ್ರೀತಿ ಉಕ್ಕಿ ಬಂದಾಗ ಅವನು ಅವಳನ್ನು 'ಮಾಲಾ-ಡಿ ಮಾತ್ರೆ' ಎನ್ನುತ್ತಿದ್ದ, ಆಗ ಅವಳು ಅವನಿಗೆ 'ಭಾಲೂ' [ಕರಡಿ] ಅಥವಾ ಆಗಾಗ 'ಆಲೂಗೆಡ್ಡೆ' ಎನ್ನುತ್ತಿದ್ದಳು. ಬಹುತೇಕ ಅವಳು ಸಾಮಾನ್ಯ ಸ್ಥಿತಿಯಲ್ಲಿ ಅವನಿಗೆ 'ಎಯ್' ಅಥವಾ 'ಓಯ್' ಎನ್ನುತ್ತಿದ್ದಳು. ಭಾಲೂ ಅವಳನ್ನು ಸೈಕಲ್

ಕ್ಯಾರಿಯರ್‌ನಲ್ಲಿ ಕೂರಿಸಿಕೊಂಡು ಸಿನೆಮಾ ತೋರಿಸಲು ಅಥವಾ ಪೇಟೆಯಲ್ಲಿ ವಸ್ತುಗಳನ್ನು ಖರೀದಿಸಲು ಕರೆದೊಯ್ಯುತ್ತಿದ್ದ. ಆದರೆ ನಗರದ ಹೊರಗೆ, ನಿರ್ಜನ ರಸ್ತೆಯಲ್ಲಿ ಅವಳಿಗೆ, 'ಬಾರೇ, ನನ್ನ ಮುಂದಿರುವ ಫ್ರೇಮಿನಲ್ಲಿ ಕೂರು...ಮಾಲಾ-ಡಿ' ಎನ್ನುತ್ತಿದ್ದ.

ಮಾಲಾ ಸೈಕಲ್‌ನಲ್ಲಿ ಅವನ ಮುಂದಿದ್ದ ಫ್ರೇಮಿನ ಮೇಲೆ ಕೂತಾಗ ಭಾಲೂನ ಮೂಗಿನಲ್ಲಿ ಗಾಳಿಯಲ್ಲಿ ಹಾರುತ್ತಿದ್ದ ಅವಳ ತಲೆಕೂದಲುಗಳು ನುಗ್ಗಿ ತುರಿಕೆ ಬರುತ್ತಿತ್ತು. ಅಥವಾ ಸೀನು ಬರುತ್ತಿತ್ತು. ಅವನು ಮಾಲಾಳ ಬೆನ್ನಿಗೆ ಮೂಗನ್ನು ಉಜ್ಜುತ್ತಿದ್ದ; ಇದರಿಂದಾಗಿ ಅವಳಿಗೆ ಕಚಗುಳಿಯಾಗಿ, ಗಟ್ಟಿಯಾಗಿ ನಗುತ್ತಿದ್ದಳು. ಆಗ ಸೈಕಲ್ಲಿನ ಹ್ಯಾಂಡಲ್ ಅತ್ತ-ಇತ್ತ ಓಲಾಡುತ್ತಿತ್ತು. ಒಂದು ವೇಳೆ ಆಗ ಕಾಡು ಸಿಕ್ಕಿದ್ದರೆ, ಭಾಲೂನ ಮೂಗಿನ ಹೊಳ್ಳೆಗೆ ನುಗ್ಗುವ ಗಾಳಿಯಲ್ಲಿ ವನಸ್ಪತಿಯ ಗಂಧ ಮತ್ತು ಕಾಡಿನ ತೇವವಿರುತ್ತಿತ್ತು. ಆದರೆ ಮಾಲಾ ತನ್ನ ತಲೆಕೂದಲುಗಳಿಗೆ 'ಕೆಯೋಕಾರಪಿನ್' ಎಣ್ಣೆಯನ್ನು ಹಾಕಿಕೊಳ್ಳುತ್ತಿದ್ದಳು, ಹೀಗಾಗಿ ಅದು ವನಸ್ಪತಿ ಮತ್ತು 'ಕೆಯೋಕಾರಪಿನ್' ಬೆರತ ವಾಸನೆಯಾಗಿರುತ್ತಿತ್ತು. ಭಾಲೂಗೆ ಈ ಮಿಕ್ಚರ್ ವಾಸನೆ ತುಂಬಾ ಇಷ್ಟವಾಗುತ್ತಿತ್ತು. ಅವನು ಆ ವಾಸನೆಯಲ್ಲಿ ಮಿಂದು ಖುಷಿ ಪಡುತ್ತಿದ್ದ. ವೇಗದ ಗತಿಯಲ್ಲಿ ಸೈಕಲ್ ಓಡಿಸಲು ಪೆಡಲುಗಳನ್ನು ಸರ-ಸರನೆ ತುಳಿಯುತ್ತಿದ್ದ. ಇಂಥ ವಾತಾವರಣದಲ್ಲಿ ಮಾಲಾ ಹಾಡಬೇಕೆಂದು ಬಯಸುತ್ತಿದ್ದ. ಆದರೆ ಮದುವೆಯಾದ ನಂತರ ಮಾಲಾ ಇದುವರೆಗೆ ಹಾಡನ್ನು ಹಾಡಿರಲಿಲ್ಲ. ಅವಳಿಗೆ ಹಾಡು ಬರುತ್ತಲೂ ಇರಲಿಲ್ಲ. ಒಂದೆರಡು ಬಾರಿ ಅವಳು 'ಹೂಂ...ಹೂಂ... ಹೂಂ' ಎಂದು ಹಾಡಲು ಪ್ರಯತ್ನಸಿದ್ದಳು; ಆದರೆ ಅವಳಿಗೇ ನಗು ಬಂದು, ನಂತರ ಕೆಮ್ಮಲಾರಂಭಿಸಿದ್ದಳು. ಅಂಥ ಪರಿಸ್ಥಿತಿಯಲ್ಲಿ ಬಾಲೂ 'ಹೋಗಲಿಬಿಡು, ಆಮೇಲೆ ಹಾಡುವಿಯಂತೆ' ಎಂದು ಮಾಲಾ ಕುತ್ತಿಗೆಗೆ ಮೂಗು ಉಜ್ಜುತ್ತಾ ಅವಳ 'ಕೆಯೋಕಾರಪಿನ್' ವಾಸನೆಯನ್ನು ಮೂಸುತ್ತಿದ್ದ.

ಇಬ್ಬರ ಮದುವೆಯಾಗಿ ಹತ್ತು ವರ್ಷಗಳಾಗಿದ್ದವು. ಆದರೆ ಇದುವರೆಗೆ ಅವರು ತಂದೆ-ತಾಯಿ ಆಗಿರಲಿಲ್ಲ. ಈ ವಿಷಯವನ್ನು ಅವರು ಮರೆತಂತೆ ತೋರುತ್ತಿತ್ತು.

ಭಾಲೂ ಅಂದು ನನಗೆ ಹೇಳಿದ ಘಟನೆ, ಅವನೊಂದಿಗೆ ಈಗ್ಯೆ ನಾಲ್ಕು ತಿಂಗಳ ಹಿಂದೆಯೇ ಘಟಿಸಿತ್ತು. ಭಾಲೂ ಆ ಘಟನೆಯಿಂದ ತುಂಬಾ ಕಳವಳಗೊಂಡಿದ್ದ. ಅವನ ಪ್ರಕಾರ, ಈ ನಗರಕ್ಕೆ ಬಂದ ನಂತರ ಅವನು ಎಂದಿನಂತೆ ತನ್ನ ಹಳೆಯ ಸೈಕಲ್ಲನ್ನು ಮಾರಿ, 'ಮಜೀದ್ ಎಂಡ್ ಸನ್ಸ್ ಎಂಡ್ ಬ್ರದರ್ಸ್' ಎಂಬ ಪ್ರಸಿದ್ಧ ಸೈಕಲ್ ಅಂಗಡಿಯಿಂದ ಹೊಸ ಸೈಕಲ್ಲನ್ನು ಖರೀದಿಸಿದ್ದ. ಆ ಸೈಕಲ್ಲಿನ ಬಣ್ಣ ಕಪ್ಪಗಿತ್ತು, ಆದರೆ ಆ ಕಪ್ಪು ಬಣ್ಣ ಬೇರೆ ಕಪ್ಪು ಬಣ್ಣಗಳಿಗಿಂತ ಭಿನ್ನವಾಗಿದ್ದು, ವಿಚಿತ್ರ

ರೀತಿಯಲ್ಲಿ ಕಪ್ಪಗಿತ್ತು. ಒಂದೇ ದೃಷ್ಟಿಗೆ ಅದು ಸಾಕಷ್ಟು ನುಣುಪಾಗಿದ್ದು, ಹೊಳೆಯುತ್ತಿತ್ತು. ಅದು ಲೋಹವೊಂದರ ಬಣ್ಣದಂತಿದ್ದು, ಮರು ಕ್ಷಣವೇ ಉಜ್ಜಿದ, ಮಣ್ಣಿನಂಥ ಪಚ್ಚೆ ಬಣ್ಣದ ತರಕಲಿನಂತೆ ಕಾಣಿಸುತ್ತಿತ್ತು. ಬಿಸಿಲಿನ ಕೋನ ಅಥವಾ ಬೆಳಕು ಹೆಚ್ಚು-ಕಡಿಮೆಯಾಗುವುದರಿಂದ ಹೀಗಾಗುತ್ತಿರಬಹುದು ಎಂದೂ ಅನ್ನುವಂತಿರಲಿಲ್ಲ. ಹೀಗೆ ಅದು ನೋಡು-ನೋಡುತ್ತಿರುವಂತೆ, ತನ್ನಷ್ಟಕ್ಕೆ ತಾನೇ ಹೀಗಾಗುತ್ತಿತ್ತು.

'ಮಜೀದ್ ಎಂಡ್ ಸನ್ಸ್ ಎಂಡ್ ಬ್ರದರ್ಸ್' ಅಂಗಡಿಯಲ್ಲಿ ಅವನು ಮೊದಲಬಾರಿಗೆ ಈ ಸೈಕಲ್ಲನ್ನು ನೋಡಿದಾಗ ಅವನು ಈ ಕಪ್ಪುಬಣ್ಣದ ಈ ಆಟವನ್ನು ತಕ್ಷಣ ತಿಳಿದ. ನಂತರ ಅವನು ತುಂಬಾಹೊತ್ತು, ತಾನು ಇದರ ನಿಜ ಕಪ್ಪು ಬಣ್ಣವನ್ನು ಪತ್ತೆ ಹಚ್ಚಬೇಕೆಂಬ ಸುಳಿಯಲ್ಲಿ ಸಿಲುಕಿದ್ದ, ಆದರೆ ಅವನು ಪದೇ-ಪದೇ ಮೋಸ ಹೋಗುತ್ತಿದ್ದ. ಆದರೆ ಅವನು ತದನಂತರದಲ್ಲಿ, ಕಪ್ಪು ಬಣ್ಣದ ಈ ಮೋಸದಾಟದ ಹಿಂದೆ ಸೈಕಲ್ಲಿನ ಮುಂಭಾಗದ ರಾಡಿಗೆ ಬಳಿದ ಎರಡು ಸಮಾನಾಂತರ ರೇಖೆಗಳ ಕೈವಾಡಿವಿದೆ; ಆ ಎರಡು ಸಮಾನಾಂತರ ರೇಖೆಗಳಲ್ಲಿ ಒಂದರ ಬಣ್ಣ ನೀಲಿಯಾಗಿದ್ದು, ಇನ್ನೊಂದು ಹೊಂಬಣ್ಣದ್ದಾಗಿದೆ ಎಂಬುದನ್ನು ಅರಿತ.

ಎರಡು ತೆಳು, ಸೂಕ್ಷ್ಮ ನೂಲಿನಂತೆ, ಸೈಕಲ್ಲಿನ ಮೂರು ರಾಡ್‌ಗಳ ಇಡೀ ತ್ರಿಭುಜದ ಮೇಲೆ ಎಳೆದ ಸಮಾನಾಂತರ ರೇಖಗಳಿದ್ದವು. ಈ ಎರಡು ರೇಖೆಗಳು ಒಂದು ಕ್ಷಣ ಮನುಷ್ಯನ ಕಣ್ಣುಗಳನ್ನು ತಮ್ಮೆಡೆಗೆ ಆಕರ್ಷಿಸಿದಾಗ, ಆ ಕ್ಷಣ ಆ ಕಪ್ಪು ತನ್ನ ಬಣ್ಣವನ್ನು ಬದಲಾಯಿಸುತ್ತದೆ ಎಂಬುದನ್ನು ಭಾಲೂ ತಿಳಿದಿದ್ದ. ಭಾಲೂ ತುಂಬಾ ಪ್ರಯತ್ನಿಸಿದ; ಸೈಕಲ್ ರಾಡಿನ ಕಪ್ಪು ಬಣ್ಣವನ್ನು ತಾನು ಎವೆಯಿಕ್ಕದೆ ನೋಡಬೇಕೆಂದು ಉಸಿರು ಬಿಗಿ ಹಿಡಿದು ನೋಡಿದ, ಆದರೆ ಪ್ರತಿ ಬಾರಿಯೂ ಒಂದಲ್ಲ ಒಂದು ವಿಘ್ನ ಎದುರಾಗುತ್ತಿತ್ತು. ಒಮ್ಮೆ ರೆಪ್ಪೆಗಳು ಮುಚ್ಚಿಕೊಂಡರೆ, ಇನ್ನೊಮ್ಮೆ ಎಲ್ಲಿಂದಲೋ ಧ್ವನಿಯೊಂದು ಕೇಳಿ ಬಂದು ಮತ್ತೆ ಗಡಿಬಿಡಿ ಎದುರಾಗುತ್ತಿತ್ತು.

'ಈ ಬೇವರ್ಸಿ ಕಪ್ಪು ಬಣ್ಣವನ್ನು ಆಮೇಲೆ ನೋಡಿಕೊಳ್ಳುತ್ತೇನೆ' ಎಂದು ಯೋಚಿಸಿ ಭಾಲೂ ಆ ಸೈಕಲ್ಲನ್ನು ಖರೀದಿಸಿದ್ದ. ಆದರೆ ಅದಕ್ಕೆ ಬೀಗವಿರಲಿಲ್ಲ. 'ಮಜೀದ್ ಎಂಡ್ ಸನ್ಸ್ ಎಂಡ್ ಬ್ರದರ್ಸ್'ನ ಅಶಫಾಕ್, 'ಮೂರ್‍ನಾಲ್ಕು ದಿನಗಳಲ್ಲಿ ಈ ಸೈಕಲ್ಲಿನ ಒರಿಜಿನಲ್ ಬೀಗ ಸಿಗುತ್ತದೆ. ಡ್ಯೂಪಿಕೇಟ್ ಬೀಗ ಈಗಲೂ ಇದೆ, ಅದರೆ ಡಾ. ಬಿ.ಜಿ. ರಾಜೋರಿಯಾ ಮೂರ್‍ನಾಲ್ಕು ದಿನ ಕಾದರೆ ತುಂಬಾ ಒಳ್ಳೆಯದು. ಈ ನಗರದಲ್ಲಿ ಕಳ್ಳತನವಾಗುವುದಿಲ್ಲ. ಸೈಕಲ್ ಸುರಕ್ಷಿತವಾಗಿರುವುದು' ಎಂದಿದ್ದ.

ಮಾಲಾ ಮೊದಲು ಸೈಕಲ್ಲಿನ ಬಣ್ಣ ನೋಡಿ ಖುಷಿಗೊಳ್ಳಲಿಲ್ಲ. ಅವಳು ನೀಲಿ ಅಥವಾ ಹಸಿರು ಬಣ್ಣದ ಸೈಕಲ್ಲಿಗಾಗಿ ಕಾಯುತ್ತಿದ್ದಳು. ಆದರೆ ಸಂಜೆ ಭಾಲೂ ಅವಳನ್ನು ಸೈಕಲ್ಲಿನ ಕ್ಯಾರಿಯರ್ ಮೇಲೆ ಕೂರಿಸಿಕೊಂಡು ನಗರದ ಹೊರಗಿದ್ದ ಹರದೇಯಿ ಮಾತಾ ಮಂದಿರದ ಮಾರ್ಗದೆಡೆಗೆ ಕರೆದೊಯ್ದಾಗ, ಮಾಲಾಳಿಗೆ ಸೈಕಲ್ ಚೆನ್ನಾಗಿದೆ ಎಂದು ಅನ್ನಿಸಿತು; ಆ ಮಾರ್ಗ ನಿರ್ಜನವಾಗಿದ್ದು, ಕಾಲೇಜಿನ ಹುಡುಗ–ಹುಡುಗಿಯರು ಅಲ್ಲಿಯ ಪೊದೆಗಳು ಅಥವಾ ಹೊಂಡದ ಜಾಗವನ್ನು ಹುಡುಕಾಡುತ್ತಾ ಅಲೆಯುತ್ತಿದ್ದರು. ಭಾಲೂ ಯಾರೂ ಇಲ್ಲದಿದ್ದದ್ದನ್ನು ಗಮನಿಸಿ ಅವಳಿಗೆ ಹೇಳಿದ, "ಬಾ, ಫ್ರೇಮಿನಲ್ಲಿ ಕೂರು ಬಾ, ಮಾಲಾ–ಡಿ!" ಮಾಲಾ, "ಸರಿ ಭಾಲೂ!" ಎಂದು ನಕ್ಕಳು. ಫ್ರೇಮಿನ ಮೇಲೆ ತುಂಬಾ ಹೊತ್ತು ಕೂತಾಗ, ಅದು ಕೆಳಗಿನಿಂದ ಚುಚ್ಚುತ್ತಿತ್ತು. ಹೀಗಾಗಿ ಮನೆಯಿಂದ ಹೊರಡುವಾಗ ಭಾಲೂ ಒಂದು ಟವಲ್ಲನ್ನು ತನ್ನ ಹೆಗಲಿಗೆ ಹಾಕಿಕೊಂಡು ಬರುತ್ತಿದ್ದ. ಟವಲ್ಲನ್ನು ಮೂರು–ನಾಲ್ಕು ಮಡಿಕೆ ಮಾಡಿ ಫ್ರೇಮಿನ ಮೇಲೆ ಇಡಲಾಗುತ್ತಿತ್ತು; ಆಗ ಅದು ಮೆತ್ತಗಾಗುತ್ತಿತ್ತು, ಅದರ ಮೇಲೆ ಮಾಲಾ ಕೂರುತ್ತಿದ್ದಳು.

ಮಾಲಾ ಸಹ ಸೈಕಲ್ ಚಾಲನೆ ಮಾಡುವುದನ್ನು ಕಲಿಯಲಿ ಎಂದು ಭಾಲೂ ಬಯಸುತ್ತಿದ್ದ. ಇಂದಿನ ಮಹಿಳೆಯರು ಕಾರು–ಸ್ಕೂಟರ್‌ಗಳನ್ನಲ್ಲ, ವಿಮಾನವನ್ನೂ ಚಾಲನೆ ಮಾಡುತ್ತಾರೆ ಎನ್ನುತ್ತಿದ್ದ. ಆದರೆ ಎಲ್ಲಾ ಪ್ರಯತ್ನಗಳ ನಂತರವೂ ಮಾಲಾ ಸೈಕಲ್ ಚಾಲನೆ ಮಾಡುವುದನ್ನು ಕಲಿಯದಾದಳು.

"ಈ ಸೈಕಲ್ ಎರಡು ಅಂಗುಲದ ಚಕ್ರದ ಮೇಲೆ ನೇರವಾಗಿ ಹೇಗೆ ನಿಲ್ಲುತ್ತದೆ? ಅಲ್ಲದೆ ಮುಂದಕ್ಕೂ ಹೋಗುತ್ತದೆ. ಇದನ್ನು ಯೋಚಿಸಿದಾಗ ನನಗೆ ಭಯವಾಗುತ್ತದೆ" ಎನ್ನುತ್ತಿದ್ದಳು ಮಾಲಾ.

ಭಾಲೂ ನಿರಾಶನಾಗಿದ್ದ. ನಂತರ ಅವನು ಬೇರೊಂದು ಮಾರ್ಗವನ್ನು ಅರಸಿದ. ಅವನು ಮಾಲಾಳನ್ನು ಮುಂದಿನ ಸೈಕಲ್ ಸೀಟಿನ ಮೇಲೆ ಕೂರಿಸಿ. ತಾನು ಹಿಂದಿನ ಕ್ಯಾರಿಯರ್ ಮೇಲೆ ಕೂರುತ್ತಿದ್ದ. ನಂತರ ಮಾಲಾಳಿಗೆ. "ನೀನು ಹ್ಯಾಂಡಲ್ ನೋಡಿಕೋ. ನಾನು ಪೆಡಲ್ ತುಳಿಯುತ್ತೇನೆ" ಎನ್ನುತ್ತಿದ್ದ. ಭಾಲೂ ಹಿಂದಿನಿಂದ ಸೀಟ್ ಹಿಡಿದುಕೊಂಡು, ಕ್ಯಾರಿಯರ್ ಮೇಲೆ ಕೂತು ಪೆಡಲ್ ತುಳಿಯುತ್ತಿದ್ದ, ಮಾಲಾ ಸೀಟಿನಲ್ಲಿ ಕೂತು ಹ್ಯಾಂಡಲ್ ಚಾಲನೆ ಮಾಡುತ್ತಿದ್ದಳು. ಇದು ಭಾಲೂಗೆ ಹಿತವೆನಿಸುತ್ತಿತ್ತು. ಅವನು ಹಿಂದಿನಿಂದ ಮಾಲಾಳ ತೊಡೆಗಳನ್ನು ನೇವರಿಸುತ್ತಾ, ಅವಳ ಬೆನ್ನ ಮೇಲೆ ತನ್ನ ಮೂಗನ್ನು ತಿಕ್ಕುತ್ತಿದ್ದ. ಕಚಗುಳಿಯಿಂದಾಗಿ ಮಾಲಾ ನಕ್ಕಾಗ ಹ್ಯಾಂಡಲ್ ಓಲಾಡುತ್ತಿತ್ತು.

ಇಂದು ಮಾಲಾ ಹೊಸ ಸೈಕಲ್ಲಿನ ಫ್ರೇಮಿನ ಮೇಲೆ ಕೂತಿದ್ದಳು; ಗಾಳಿಯಲ್ಲಿ ಹಾರುತ್ತಿದ್ದ ಅವಳ ತಲೆಕೂದಲುಗಳು ಭಾಲೂವಿನ ಮೂಗಿನಲ್ಲಿ ಹೊಕ್ಕು

ತುರಿಕೆಯನ್ನುಂಟು ಮಾಡಿದವು. ಭಾಲೂ ಮೊದಲು ಸೀನಿದ, ನಂತರ ಅವಳ ಕುತ್ತಿಗೆಗೆ ಮೂಗನ್ನು ತಿಕ್ಕಿದ; ಆಗಲೇ ಅವನಿಗೆ ಅಕಸ್ಮಾತ್, ಇಂದು ಹೊಸ ಸೈಕಲ್ಲಿನ ಫ್ರೇಮಿನ ಮೇಲೆ ಮಾಲಾ ಕೂತಿಲ್ಲ, ಬೇರೆ ಹೊಸ ಹುಡುಗಿಯೊಬ್ಬಳು ಕೂತಿದ್ದಾಳೆ ಎಂದು ಅನ್ನಿಸಿತು. ಅದೊಂದು ವಿಚಿತ್ರ ಅನುಭವವಾಗಿತ್ತು. ಫ್ರೇಮಿನ ಮೇಲೆ ಮಾಲಾ ಕೂತಿದ್ದಾಗ್ಯೂ ಅಲ್ಲಿ ಬೇರೆ ಹುಡುಗಿಯಿದ್ದಳು, ಆವಳು ಮಾಲಾ ಆಗಿರದಿದ್ದಾಗ್ಯೂ, ಮಾಲಾ ಆಗಿದ್ದಳು. ಇದು ತನ್ನ ಬಣ್ಣವನ್ನು ಬದಲಾಯಿಸುವ ಸೈಕಲ್ಲಿನ ಕಪ್ಪು ಫ್ರೇಮಿನ ಕೈಚಳಕವಾಗಿತ್ತೆ? ಭಾಲೂಗೆ ಇದು ಎಷ್ಟು ಇಷ್ಟವಾಯಿತೆಂದರೆ, ಅವನು ಮತ್ತೂ ಜೋರಾಗಿ ತನ್ನ ಮೂಗನ್ನು ಅವಳ ಕುತ್ತಿಗೆಗೆ ಉಜ್ಜಲಾರಂಭಿಸಿದ. ಆಗ ಮಾಲಾ ಮುಗುಳ್ನಗುತ್ತಾ, “ಭಾಲೂ, ನಾನಿಂದು ಭೃಂಗರಾಜ ತೈಲವನ್ನು ಹಚ್ಚಿಕೊಂಡಿದ್ದೇನೆ” ಎಂದಳು.

ಕಾಡಿನ ವನಸ್ಪತಿಗಳು, ಹುಲ್ಲು, ತೇವ ಮತ್ತು ಹೂವುಗಳಿಂದ ನಾದಲ್ಪಟ್ಟ ಗಾಳಿಯಲ್ಲಿ ಇಂದು ‘ಕೆಯೋಕಾರಪಿನ್’ ಸುವಾಸನೆಯ ಬದಲು ‘ಭೃಂಗರಾಜ’ ತೈಲದಿಂದಾಗಿ ಮಾಲಾ ಬೇರೊಬ್ಬ ಹುಡುಗಿಯಲ್ಲಿ ಬದಲಾಗಿದ್ದಳೆಂಬ ವಿಷಯ ಈಗ ಭಾಲೂಗೆ ಅರ್ಥವಾಯಿತು. ನಗರದಿಂದ ದೂರ, ಮಾತಾ ಹರದೇಯಿ ಮಂದಿರ ಮಾರ್ಗದ ನಿರ್ಜನ ಪ್ರದೇಶದಲ್ಲಿ ಭಾಲೂ ಮಾಲಾಳಿಗೆ ಸೈಕಲ್ ಫ್ರೇಮಿನ ಕಪ್ಪು ಬಣ್ಣದ ಆಟದ ಬಗ್ಗೆ ಹೇಳಿದ. ಮಾಲಾ ಮೊದಲು ನಂಬಲು ಸಿದ್ಧಳಿರಲಿಲ್ಲ, ಆದರೆ ಅವಳು ಸಹ ಕಣ್ಣುಗಳನ್ನು ನೆಟ್ಟು ರಾಡಿನ ಕಪ್ಪು ಬಣ್ಣವನ್ನು ದುರುಗುಟ್ಟಿ ನೋಡಿದಾಗ, ಭಾಲೂ ಹೇಳುತ್ತಿರುವುದು ನಿಜವೆಂದು ಅನ್ನಿಸಿತು. ಕಡೆಗೆ ಅವನು ದಣಿದು ಹೇಳಿದ, “ಪ್ರತಿಯೊಂದು ಕಪ್ಪು ಬಣ್ಣದ ಸೈಕಲ್ ಹೀಗೆಯೇ ಇರುತ್ತದೆ. ನೀನು ಯಾವುದೇ ಕಪ್ಪು ಸೈಕಲ್ಲನ್ನು ದುರುಗುಟ್ಟಿ ನೋಡಿದಾಗ ಅದರ ಫ್ರೇಮ್ ತನ್ನ ಬಣ್ಣವನ್ನು ಖಂಡಿತ ಬದಲಿಸುವುದು. ಅಥವಾ, ಈ ಎಲ್ಲಾ ಅವ್ಯವಸ್ಥೆ ಈ ಎರಡು ರೇಖೆಗಳಿಂದಲೂ ಆಗುತ್ತಿರಬಹುದು; ಅಂದರೆ ನೀಲಿ ಮತ್ತು ಬಂಗಾರದ ಬಣ್ಣದಿಂದಾಗಿ ಆಗುತ್ತಿರಬಹುದು.”

ಮಾಲಾಳಿಗೆ ಇದು ಮಹತ್ವದ ಸಂಗತಿ ಎಂದು ಅನ್ನಿಸಲಿಲ್ಲವೆಂದು ಯೋಚಿಸಿ ಅಂದು ಭಾಲೂಗೆ ದುಃಖವಾಯಿತು. ಆದರೆ ಅಂದು ನಗರದಿಂದ ಮರಳಿ ಬರುವಾಗ ಭಾಲೂ ತನ್ನ ‘ಮಾಲಾ-ಡಿ’ ಗಾಗಿ ಡಾಬರ್ ಆಂವಲಾ, ವೆಸಲಿನ್‌ಹೇರ್ ಟಾನಿಕ್, ನವ ರತನ್, ಹಿಮ್ ಕಲ್ಯಾಣ್ ಇತ್ಯಾದಿ-ಇತ್ಯಾದಿ ಅನೇಕ ಬ್ರಾಂಡ್‌ಗಳ ತೈಲಗಳನ್ನು ಖರೀದಿಸಿದ. ಎಲ್ಲಾ ತೈಲಗಳ ವಾಸನೆ ಭಿನ್ನ-ಭಿನ್ನವಾಗಿತ್ತು.

ಆದರೆ ಈ ಘಟನೆ ಡಾ. ಬಿ.ಜಿ.ರಾಜೋರಿಯಾ ಉರ್ಫ್ ಬಾಲ ಗೋಪಾಲ ರಾಜೋರಿಯಾ ಉರ್ಫ್ ಬಾಲೂ ಅಂದರೆ ಭಾಲೂಗೆ, ಘಟನೆಯಾಗಿಯೇ ಉಳಿಯಿತು. ಈಗ ಸಂಕ್ಷೇಪದಲ್ಲಿ ನೀವು ಅದರ ವಿವರಣೆಯನ್ನು ಕೇಳಿ.

ಅಂದು ಕಾಲೇಜಿನಿಂದ ಬಂದು ಭಾಲೂ ಮಿತಿ ಮೀರಿ ತಿಂದಿದ್ದ. ಪಳದ್ಯ ಅಮ್ಮ ಮಾಡಿದಂತಿತ್ತು. ಸಿಂದೂರ ಮಾವಿನ ಹಣ್ಣಿನ ಸೀಕರಣೆ ಎಷ್ಟು ತಿಂದರೂ ಸಾಲದೆನಿಸುತ್ತಿತ್ತು. ಭಾಲೂ ಊಟಕ್ಕೆ ಕೂತರೆ, ತೇಗಲೂ ಸಹ ಜಾಗವನ್ನು ಬಿಡುತ್ತಿರಲಿಲ್ಲ. ಬಾಲ್ಯದಲ್ಲಿ ಒಬ್ಬರು ಅವನಿಗೆ ಹಳ್ಳಿಯಲ್ಲಿ ಉತ್ತಮ ಆರೋಗ್ಯ ಮತ್ತು ಬುದ್ಧಿವಂತಿಕೆಯ ಉಪಾಯವನ್ನು ಹೇಳಿದ್ದರು. ಭಾಲೂ ಅದನ್ನೇ ಪಾಲಿಸುತ್ತಾ ಹೊಟ್ಟೆ ತುಂಬಾ ಉಂಡು, ನಂತರ ಮಂಚದ ಮೇಲೆ ಕಾಲು ಚಾಚಿ ಮಲಗುತ್ತಿದ್ದ. ತಿಂದ ನಂತರ ನಿದ್ರೆ ಮಾಡಬೇಕು; ಯಾರಿಗಾದರೂ ಹೊಡೆದು–ಬಡಿದು ಅಲ್ಲಿಂದ ಕಾಲು ಕೀಳಬೇಕು ಎಂಬುದೇ ಆ ಉಪಾಯವಾಗಿತ್ತು.

ಅಂದು ಭಾಲೂ ಪಳದ್ಯ ಮತ್ತು ಮಾವಿನ ಸೀಕರಣೆಯನ್ನು ಹೊಟ್ಟೆ ಬಿರಿಯುವಂತೆ ತಿಂದು ನಿದ್ರಿಸುತ್ತಿದ್ದ; ಆಗಲೇ ಮಾಲಾ ಬಂದು ಅವನನ್ನು ಎಬ್ಬಿಸಿ ಹೇಳಿದಳು, "ಒಬ್ಬ ಪೋಲೀಸ್ ನಿಮ್ಮನ್ನು ಕೇಳುತ್ತಿದ್ದಾನೆ." ಭಾಲೂ ಎದ್ದು ಹೊರ ಬಂದಾಗ ಸೈಕಲ್ ಹಿಡಿದು ಪೋಲೀಸೊಬ್ಬ ನಿಂತಿದ್ದ. "ಏನುವಿಷಯ?" ಎಂದು ಭಾಲೂ ವಿಚಾರಿಸಿದ. ಅವನು ಇದುವರೆಗೆ ಯಾವ ಪೋಲೀಸಿನೊಂದಿಗೂ ಮಾತನಾಡಿರಲಿಲ್ಲ. ಪೋಲೀಸಿನವ ತುಂಬಾ ಅಶಕ್ತನಾಗಿದ್ದು, ರೋಗಿಯಂತೆ ಕಾಣಿಸುತ್ತಿದ್ದ– ಅವನು ಟೈಫಾಯಿಡ್ ಕಾಹಿಲೆಯಿಂದ ದೀರ್ಘಕಾಲ ನರಳಿ, ಇದೀಗ ತಾನೇ ಎದ್ದು ಬಂದಂತೆ ತೋರುತ್ತಿದ್ದ.

"ನಡೀರಿ, ಸಾಹೇಬ್ರು ಕರೆಯುತ್ತಿದ್ದಾರೆ." ಅವನು ತನ್ನ ಸೈಕಲ್ಲಿನ ಗಾಳಿಯನ್ನು ಪರೀಕ್ಷಿಸುತ್ತಾ ಹೇಳಿದ.

"ಆದರೆ ಏನು ವಿಷಯ?"ಭಾಲೂ ಸ್ವಲ್ಪ ಹೆದರಿದ್ದ, ಆದರೆ ಅದನ್ನು ತೋರಿಸಿಕೊಳ್ಳದೆ ಇರಲುಬಯಸುತ್ತಿದ್ದ.

"ನನಗೆ ಗೊತ್ತಿಲ್ಲ. ಸಾಹೇಬ್ರು ಜೊತೆಗೇ ಕರೆದುಕೊಂಡು ಬರಲು ಹೇಳಿದ್ದಾರೆ."

ಇವನು ನನ್ನನ್ನು ಕರೆದೊಯ್ಯದೆ ತಕ್ಷಣ ಇಲ್ಲಿಂದ ಹೋಗುವುದಿಲ್ಲ ಎಂದು ಯೋಚಿಸಿ ಹೇಳಿದ, "ನಾನು ಆಮೇಲೆ ಬಂದರೆ?" ಎಂದು ಹೇಳಿ ಮತ್ತೆ ತಕ್ಷಣ ಹೇಳಿದ, "ಸರಿ ಬರ್ತೀನಿ. ಎರಡು ನಿಮಿಷಗಳಲ್ಲಿ ತಯಾರಾಗಿ ಬರ್ತೀನಿ. ನಿಜ ಹೇಳ ಬೇಕೆಂದರೆ ಇವತ್ತು ಪಳದ್ಯವನ್ನು ಸ್ವಲ್ಪ ಹೆಚ್ಚೇ ತಿಂದಿದ್ದೆ."

ಭಾಲೂ ಆ ಪೋಲೀಸನನ್ನು ಖುಷಿ ಪಡಿಸಲು ಹೀಗೆ ಹೇಳಿದ್ದ; ಅವನೊಂದಿಗೆ ಆತ್ಮೀಯತೆಯನ್ನು ಬೆಳೆಸಲೂ ಹೇಳಿದ್ದ, ಆದರೆ ಅವನು ಭಾಲೂವನ್ನು, ಅವನಿಗೆ ಅಜೀರ್ಣವಾಗಿದೆ ಅಥವಾ ಮಲಬದ್ಧತೆಯಾಗಿದೆ ಎಂಬಂತೆ ಗಮನಿಸಿದಾಗ ಭಾಲೂ ಹೆದರಿದ.

ಭಾಲೂ ಸ್ಟೇಷನ್ನಿನ ವರಾಂಡದಲ್ಲಿದ್ದ ಬೆಂಚಿನ ಮೇಲೆ ತುಂಬಾ ಹೊತ್ತು ಒಂದು ಕೂತಿರಬೇಕಾಯಿತು. ತನ್ನನ್ನು ಪೋಲೀಸ್ ಸ್ಟೇಷನ್‌ಗೆ ಯಾಕಾಗಿ ಕರೆತರಲಾಗಿದೆ

ಎಂದು ತುಂಬಾ ಯೋಚಿಸಿದ. ತನಗೆ ತಿಳಿದಂತೆ ಅವನೆಂದೂ ಯಾವ ಅಪರಾಧವನ್ನೂ ಮಾಡಿರಲಿಲ್ಲ. ನಂತರ ಅವನಿಗೆ, ತಾನು ಈ ಹಿಂದೆ ಬರೆದ ಒಂದು ಕವನದಿಂದಾಗಿ ತನ್ನನ್ನು ಕರೆಸಿರಬಹುದೆಂದು ಅನ್ನಿಸಿತು. ಅವನು ಆ ಕವನದಲ್ಲಿ, ಸ್ವಾತಂತ್ರ್ಯ ಬಂದ ನಂತರ ಕಳ್ಳರು, ದಳ್ಳಾಳಿಗಲು ಮತ್ತು ವಂಚಕರು ಅಧಿಕಾರಕ್ಕೇರಿದ್ದಾರೆ, ಈ ದೇಶದಲ್ಲಿ ಈಗ ಸಭ್ಯ ಮತ್ತು ಸರಳ ಸ್ವಭಾವದ ವ್ಯಕ್ತಿ ಬದುಕಲಾರ, ಭ್ರಷ್ಟರ ನಾಯಿಗಳು ಅಂಥವನನ್ನು ಚಿಂದಿ-ಚಿಂದಿ ಮಾಡುತ್ತವೆ ಎಂದು ವರ್ಣಿಸಿದ್ದ. ನಂತರ ಅವನಿಗೆ, ಕಳೆದ ದಿನಗಳಲ್ಲಿ ಅವನ ಕಾಲೇಜಿನ ನಾಲ್ವರು ಹುಡುಗರು ಅಪಹರಣದ ಕೇಸಿನಲ್ಲಿ ಸಿಕ್ಕಿಬಿದ್ದಿದ್ದರು ಎಂಬುದು ನೆನಪಾಯಿತು. ಅವರಲ್ಲಿ ಒಬ್ಬ ಹುಡುಗ ಅವನ ಮನೆಗೂ ಒಂದೆರಡು ಬಾರಿ ಬಂದಿದ್ದ. ಅವನು ವಿದ್ಯಾಭ್ಯಾಸದಲ್ಲಿ ಮುಂದಿದ್ದ. ಬಹುಶಃ ಕೆಲಸಕ್ಕಾಗಿ ಅಥವಾ ಸಣ್ಣ-ಪುಟ್ಟ ವ್ಯಾಪಾರ ಮಾಡಲು ಹಣವನ್ನು ಒಟ್ಟು ಮಾಡಲು ಅವನು ಈ ಅಪರಾಧವನ್ನು ಮಾಡಿರಬಹುದು. ಬಹುಶಃ ಆ ಬಗ್ಗೆ ವಿಚಾರಿಸಲು ಅವನನ್ನು ಇಲ್ಲಿಗೆ ಕರೆಸಿರಬಹುದು. ಅಲ್ಲದೆ ಇದೇನು ಸಾಮಾನ್ಯ ಪೊಲೀಸ್ ಸ್ಟೇಷನ್ ಅಲ್ಲ, ಜಿಲ್ಲೆಯ ಮುಖ್ಯ ಪೊಲೀಸ್ ಠಾಣೆಯ ಕಛೇರಿ ಯಾಗಿತ್ತು.

ಸುಮಾರು ಮುಕ್ಕಾಲು ಘಂಟೆಯ ನಂತರ ಒಬ್ಬ ದಢೂತಿ ಕಾಯದ ಮೀಸೆಧಾರಿ ವ್ಯಕ್ತಿಯೊಬ್ಬ ಅವನ ಬಳಿಗೆ ಬಂದು ಅವನೊಂದಿಗೆ ವಿವೇಕದಿಂದ ಹೇಳಿದ, "ನಡೀರಿ, ಸಾಹೇಬ್ರುನಿಮ್ಮನ್ನು ಒಳಗೆ ಕರೆಯುತ್ತಿದ್ದಾರೆ." ಭಾಲೂ ಅವನನ್ನು ಹಿಂಬಾಲಿಸಿ ಹೋದ.

ಅದೊಂದು ವಿಶಾಲ ಕೊಠಡಿಯಾಗಿತ್ತು. ಅಲ್ಲಿಯ ಗೋಡೆಯ ಮೇಲೆ ಗಾಂಧಿ, ನೆಹರೂ, ಶಾಸ್ತ್ರಿ, ರಾಜೇಂದ್ರ ಪ್ರಸಾದ್, ರಾಧಾಕೃಷ್ಣನ್ ಮತ್ತು ಇಂದಿರಾ ಗಾಂಧಿಯವರ ಚಿತ್ರಗಳನ್ನು ತೂಗುಹಾಕಲಾಗಿತ್ತು. ಒಂದು ಮೂಲೆಯಲ್ಲಿ ಸುಭಾಷಚಂದ್ರ ಬೋಸ್ ಮತ್ತು ಯಶವಂತ ರಾವ್ ಬಲವಂತ ರಾವ್ ಚವ್ಹಾಣರ ಚಿತ್ರಗಳೂ ಇದ್ದವು. ಎದುರಿಗೆ ಒಂದು ವಿಶಾಲ ಮೇಜು; ಅದರ ಮೇಲೆ ಮೂರ್ನಾಲ್ಕು ಫೋನ್‌ಗಳು. ಒಂದು ಫೋನ್ ಈಗಲೂ ರಿಂಗಾಗುತ್ತಿತ್ತು. ಆಶ್ ಟ್ರೇ, ಪೇಪರ್ ವೇಟ್, ಪೆನ್ ಹೋಲ್ಡರ್, ಫೈಲ್‌ಗಳು, ಡಸ್ಟ್‌ಬಿನ್ ಮತ್ತು ಹಿಂದಿನ ಗೋಡೆಯಲ್ಲಿ ಎ.ಸಿ. ಇತ್ಯಾದಿಗಳು ಅಂದರೆ ಸರ್ಕಾರಿ ಕಛೇರಿಗಳಲ್ಲಿ ಒಬ್ಬ ಅಧಿಕಾರಿಯ ಕೋಣೆಯಲ್ಲಿರುವಂಥದ್ದೆಲ್ಲವೂ ಅಲ್ಲಿದ್ದವು. ದುಂಡು ಮುಖದ, ಚಪ್ಪಟೆ ಮೂಗಿನ, ದಟ್ಟ ಕಪ್ಪು ಹುಬ್ಬಿನ, ಶ್ಯಾಮಲ ವರ್ಣದ ವ್ಯಕ್ತಿಯೊಬ್ಬರು ಮೇಜಿನ ಹಿಂದೆ ತಿರುಗುವ ಕುರ್ಚಿಯಿಂದೆದ್ದು ತನ್ನ ಶ್ವೇತ ದಂತ ಪಂಕ್ತಿಗಳನ್ನು ಪ್ರದರ್ಶಿಸುತ್ತಾ, "ಬನ್ನಿ, ನೀವು ಸ್ವಲ್ಪ ಕಾಯಬೇಕಾಯಿತು, ಕ್ಷಮಿಸಿ. ಮೀಟಿಂಗ್ ಸ್ವಲ್ಪ ಹೆಚ್ಚೇ ಎಳೆಯಿತು. ಪೊಲೀಸ್

ನೌಕರಿ ಅಂದರೆ ಹೀಗೇ. ತೃಪ್ತಿ ನಿಮಗೆ ಮಾತ್ರವಿರುತ್ತದೆ, ಪಾಠವನ್ನು ಬೋಧಿಸಿದರಾಯಿತು, ನಿಮ್ಮ ಸೃಜನಕ್ರಿಯೆ ಮುಂದುವರೆಯುತ್ತಲೇ ಇರುತ್ತದೆ. ಹೀ–ಹೀ...ಹೀಹೀ...ಹೀ...ಹೀ..."ಎಂದು ಕೈಚಾಚಿ, ಮುಗುಳ್ನಗುತ್ತಿದ್ದರು.

ವಿ.ಕೆ. ಭೂಧರ್. ಅಂದರೆ ವಿನೋದ್ ಕುಮಾರ್ ಭೂಧರ್. ಇದು ಆ ಐ.ಪಿ.ಎಸ್. ಯುವ ಅಧಿಕಾರಿಯ ಹೆಸರಾಗಿತ್ತು. ಅವರು ಡಾ. ಬಾಲ ಗೋಪಾಲ ರಾಜೋರಿಯಾ ಉರ್ಫ್ ಭಾಲೂಗೆ ಕಾಫಿಯನ್ನು ತರಿಸಿದ.

"ಇದೀಗ ತಾನೇ ಇಲ್ಲಿಗೆ ನನ್ನಪೋಸ್ಟಿಂಗ್ ಆಗಿದೆ. ನಾನಿಲ್ಲಿಗೆ ಬಂದೊಡನೆಯೇ ನಿಮ್ಮನ್ನು ಭೇಟಿಯಾಗಬೇಕೆಂಬ ಇಚ್ಛೆ ನನ್ನ ಮನಸ್ಸಿನಲ್ಲಿತ್ತು. ನಿಮ್ಮ ಕವನಗಳನ್ನು ತುಂಬಾ ಓದಿದ್ದೇನೆ. ಈಚೆಗೆ ನನ್ನ ಕೆಲವು ಕವನಗಳು, 'ದಿಗಂತ', 'ಸಾಹಿತ್ಯ', 'ಶಬ್ದ' ಮತ್ತು 'ರಚನಾ' ಮುಂತಾದ ಪ್ರತಿಷ್ಠಿತ ಪತ್ರಿಕೆಗಳಲ್ಲಿ ಪ್ರಕಟಗೊಂಡಿವೆ. ಈ ಜನಸಾಹಿತ್ಯ ಸೇವೆಯನ್ನು ಮಾಡುತ್ತಿದ್ದಾರೆ. ಈಚೆಗೆ 'ಸಾಹಿತ್ಯ' ಪತ್ರಿಕೆಯ ತ್ರಿಪುರಾರಿ ಶರಣರು ಬಂದಿದ್ದರು. ನಾವು ಅವರಿಗೆ ಒಂದೂವರೆಲಕ್ಷದ ಜಾಹೀರಾತನ್ನು ಕೊಡಿಸಿದ್ದೇವೆ. ನನ್ನ ಕವನಗಳ ಬಗ್ಗೆ ದೂರದರ್ಶನದ ಡೆಪ್ಯೂಟಿ ಸೂಪರಿಂಟೆಂಡೆಂಟ್ ಎಲ್.ಡಿ. ತ್ರಿಪಾಠಿಯವರು ಒಂದು ದೀರ್ಘಲೇಖನವನ್ನು ಬರೆದಿದ್ದಾರೆ. ಅದನ್ನು ಪ್ರಕಟಿಸುತ್ತಲೂ ಇದ್ದಾರೆ. ನೀವು ನಿಮ್ಮ ಅಭಿಪ್ರಾಯವನ್ನು ಖಂಡಿತ ಹೇಳಿ."

ಪೊಲೀಸ್ ಸೂಪರಿಂಟೆಂಡೆಂಟ್ ಭೂಧರರನ್ನು ಭೇಟಿಯಾದ ಭಾಲೂ ಖುಷಿಗೊಂಡ. ಇನ್ನು ನಗರದಲ್ಲಿ ತನ್ನ ಪ್ರತಿಷ್ಠೆ ಹೆಚ್ಚುವುದೆಂದು ಅವನಿಗೆ ಅನ್ನಿಸಿತು. ಈಗ್ಯೆ ಕೆಲವು ದಿನಗಳ ಹಿಂದೆಯಷ್ಟೇ ಭೂಧರರಿಗೆ ಓರ್ವ ಮಹಾನ್ ದಿವಂಗತ ಕವಿಯ ನೆನಪಿನಲ್ಲಿ ಕೊಡಮಾಡುವ ಒಂದು ದೊಡ್ಡ ಪ್ರಶಸ್ತಿ ಮತ್ತು ಸನ್ಮಾನ ಲಭಿಸಿತ್ತು ಎಂಬುದು ಅವನಿಗೆ ನೆನಪಾಯಿತು. ಅವರಿಗೆ ಹೋಲಿಸಿದರೆ ಭಾಲೂನ ಪರಿಸ್ಥಿತಿ ಸಾಹಿತ್ಯದಲ್ಲಿ ಕಳಪೆ ಎಂದೇ ಹೇಳಬಹುದಿತ್ತು. ಭೂಧರರು ಅವನನ್ನು ಸಹಕರ್ಮಿ ಮತ್ತು ಮಿತ್ರರೆಂದು ತಿಳಿಯುತ್ತಿದ್ದದ್ದು ಅವನ ಅದೃಷ್ಟವೇ ಆಗಿತ್ತು.

ಅಂದು ಅವನು ಭೂಧರರೊಂದಿಗೆ ಎರಡು ಗಂಟೆಗಳ ಕಾಲ ಕೂತಿದ್ದ. ನಗರದಲ್ಲಿ ಸಾಹಿತ್ಯಿಕ–ಸಾಂಸ್ಕೃತಿಕ ಚಟುವಟಿಕೆಗಳು ಆರಂಭವಾಗಲಿ, ಜನ ಪರಸ್ಪರ ಕಲೆಯಲಿ, ಸಾಂಸ್ಕೃತಿಕ ವಾತಾವರಣ ಬೆಳೆಯಲಿ ಎಂದು ಅವರು ಬಯಸುತ್ತಿದ್ದರು. ಅವರು ಭಾಲೂವನ್ನು ಬೀಳ್ಕೊಡಲು ಹೊರಗಿನವರೆಗೆ ಬಂದರು. ಭಾಲೂ ತನ್ನ ಹೊಸ ಸೈಕಲ್ ಮೇಲೆ ಕೂತಾಗ, ನೀವೇಕೆ ಕಾರನ್ನು ಕೊಂಡಿಲ್ಲವೆಂದು ಭೂಧರರು ಕೇಳಿದರು.

"ನನಗೆ ಸೈಕಲ್ಲಿನಿಂದಲೇ ಮಜ ಸಿಗುತ್ತದೆ." ಎಂದಭಾಲೂ.

"ಅರ್ಥವಾಯಿತು. ನಾನೇನು ನಿಮ್ಮ ಬಗ್ಗೆ ಯೋಚಿಸಿದ್ದೆನೋ, ನೀವು ಹಾಗೆಯೇ ಇದ್ದೀರಿ. ಸರಳತೆ ಮತ್ತು ಉಳಿತಾಯ ಮಾತ್ರವಲ್ಲ, ಪರಿಸರದ ಕಾಳಜಿಯೂ

ಇರಬೇಕು. ಜಾಪಾನಿಯರು ಮತ್ತು ಚೀನಿಯರನ್ನು ನೋಡಿ, ಅವರು ಸೈಕಲ್ಲಿನಲ್ಲೇ ಓಡಾಡುತ್ತಾರೆ. ಯೂನಿವರ್ಸಿಟಿಯ ವೈಸ್‌ಚಾಂಸರಲ್ ಆಗಿದ್ದರೂ ಸೈಕಲ್ಲಿನಲ್ಲಿಯೇ ಬಂದು–ಹೋಗುತ್ತಾರೆ. ನಾನು ಈಚೆಗೆ ಕವಿಗಳ ಒಂದು ಡೆಲಿಗೇಶನ್‌ನಲ್ಲಿ ಚೀನಾಕ್ಕೆ ಹೋಗಿದ್ದೆ. ನಮ್ಮಲ್ಲಂತೂ ಈ ವಿದೇಶಿ ಕಂಪನಿಗಳು ಪರಿಸರವನ್ನೇ ಹಾಳು ಮಾಡಿವೆ.” ಎಂದರು ಸೂಪರಿಂಟೆಂಡೆಂಟ್ ವಿ.ಕೆ. ಭೂಧರರು.

ಭಾಲೂ ಠಾಣೆಯಿಂದ ಹೊರ ಬಂದಾಗ, ಅವನನ್ನು ಕರೆದುಕೊಂಡು ಹೋಗಲು ಬಂದಿದ್ದ ಪೊಲೀಸಿನವ ಈಗ ಹೊರಗೆ ಬಂದು ಒಂದು ತಳ್ಳುಗಾಡಿಯವನ ಬಳಿ ನಿಂತು ಚಾಟ್ ತಿನ್ನುತ್ತಿದ್ದ. ಅವನು ಭಾಲೂನನ್ನು ನೋಡಿ ಮುಗುಳ್ನಕ್ಕು, ಅವನಿಗೆ ಗೋಲಗಪ್ಪೆ ತಿನ್ನುವಂತೆ ಆಗ್ರಹಿಸಿದ. ಭಾಲೂ ಬಹು ಪ್ರಯಾಸದಿಂದ ಅಲ್ಲಿಂದ ತಪ್ಪಿಸಿಕೊಂಡ.

ಭಾಲೂ ಮನೆಗೆ ಬಂದು ಮಾಲಾಳಿಗೆ ಠಾಣೆಯ ಸಂಗತಿಯನ್ನು ಹೇಳಿದಾಗ, ಅವಳಿಗೆ ಖುಷಿಯಾಯಿತು. ಅವಳು, ‘ಕವನ ಬರೆದರೆ ಪೊಲೀಸರೊಂದಿಗೆ ಗೆಳತನವಾಗುವುದೆಂಬ ವಿಷಯ ನನಗೆ ಗೊತ್ತಿರಲಿಲ್ಲ’ ಎಂದಳು. ‘ನಾನೊಂದು ವೇಳೆ ಸೈಕಲ್ ಬಿಡುವುದನ್ನು ಕಲಿಯದಿದ್ದರೆ ಕವನಗಳನ್ನು ಎಂದೂ ಬರೆಯಲು ಆಗುತ್ತಿರಲಿಲ್ಲ’ ಎಂದ ಭಾಲೂ. ಅವನು ಮೊದಲಬಾರಿಗೆ ಮಾಲಾಳಿಗೆ, ‘ಕವನ ಬರೆಯುವುದು ಮತ್ತು ಸೈಕಲ್ ಚಾಲನೆ ಮಾಡುವುದು–ಇವೆರಡರಲ್ಲಿ ಒಂದೇ ರೀತಿಯ ಮಜ ಸಿಗುತ್ತದೆ’ ಎಂದ. ಆಗ ಮಾಲಾ, ‘ಅಂದರೆ ಸೈಕಲ್ ಚಾಲನೆ ಮಾಡಲು ಬಾರದವರು ಕವನ ಬರೆಯಲಾರರು ಎಂದು ಇದರರ್ಥವೇ?’ ಎಂದು ಕೇಳಿದಳು. ಆದರೆ ಭಾಲೂ ಇದಕ್ಕೆ ಉತ್ತರವನ್ನು ಕೊಡದಾದ. ಅವನು ಬಟ್ಟೆಯಿಂದ ಸೈಕಲ್ಲನ್ನು ಒರೆಸಲು ಆರಂಭಿಸಿದ.

ಮೂರನೇ ದಿನವೇ ಭಾಲೂನ ಹೊಸ ಸೈಕಲ್ ಕಳ್ಳತನವಾಯಿತು. ಭಾಲೂ ಶೇವಿಂಗ್ ಕ್ರೀಮ್ ಮತ್ತು ಸೋಪನ್ನು ಖರೀದಿಸಲು ಮಿತ್ತಲ್ ಡಿಪಾರ್ಟ್‌ಮೆಂಟಲ್ ಸ್ಟೋರ್ಸ್‌ಗೆ ಐದು ನಿಮಿಷ ಹೋಗಿದ್ದ. ಹೊರಗೆ ಬಂದಾಗ ಸೈಕಲ್ ಇರಲಿಲ್ಲ. ಅವನು ಜನರಿಗೆ, ‘ನಾನು ಸೈಕಲ್ಲನ್ನು ಇದೇ ಜಾಗದಲ್ಲಿ, ವಿದ್ಯುತ್ ಕಂಭದಬಳಿ, ಪಿ.ಸಿ.ಓ. ಪಕ್ಕದಲ್ಲಿ ನಿಲ್ಲಿಸಿದ್ದೆ’ ಎಂದು ಹೇಳಿದ. ಆದರೆ ಜನ ಇವನ ದೂರಿನ ಬಗ್ಗೆ ಹೆಚ್ಚು ಆಸಕ್ತಿಯನ್ನು ತೋರುತ್ತಿರಲಿಲ್ಲ. ಸೈಕಲ್ ಕಳ್ಳತನ ಹೆದರುವಂಥ, ಗಾಬರಿಗೊಳ್ಳುವಂಥ ಅಥವಾ ಇದೊಂದು ಮಹತ್ವದ ಸಂಗತಿ ಎಂದು ತಿಳಿಯುವಂಥ ಘಟನೆಯಾಗಿರಲಿಲ್ಲ.

ಎಲ್ಲಾದರೂ ತನ್ನ ಕಪ್ಪು ಬಣ್ಣದ ಸೈಕಲ್ ಕಾಣಬಹುದೆಂದು ಯೋಚಿಸಿದ ಭಾಲೂ ಅಂದು ರಿಕ್ಷಾದಲ್ಲಿ ಕೂತು ಇಡೀ ನಗರವನ್ನು ಸುತ್ತಿದ. ಅವನಿಗೆ ಮಜೀದ್

ಎಂಡ್ ಸನ್ಸ್ ಎಂಡ್ ಬ್ರದರ್ಸ್‌ನ ಅಶಫಾಕ್ ಬಗ್ಗೆ ತುಂಬಾ ಸಿಟ್ಟು ಬರುತ್ತಿತ್ತು. ಅವನು 'ಡೂಪ್ಲಿಕೇಟ್' ಬೀಗವನ್ನೇ ಕೊಟ್ಟಿದ್ದರೆ, ಕಡೇಪಕ್ಷ ಸೈಕಲ್ ಉಳಿಯುತ್ತಿತ್ತು. "ನಗರದಲ್ಲಿ ಇಂಥ ಕಳ್ಳತನವಾಗುವುದಿಲ್ಲ. ಸೈಕಲ್ ಸುರಕ್ಷಿತವಾಗಿರುವುದು" ಎಂದು ಆ ಸೂ...ಮಗ ಅಶಫಾಕ್ ಹೇಳಿದ್ದ. ಆದರೆ ಈಗ? ಆಯ್ತಲ್ಲ ಕಳ್ಳತನ!

ಮನೆಗೆ ಬಂದಾಗ ಮಾಲಾ ಜಗಳಕ್ಕಿಳಿದಳು, "ಈಗ್ಲೇ ಎಸ್.ಪಿ.ಗೆ ಫೋನ್ ಮಾಡಿ. ಅವರು ನಮ್ಮ ಉಪಯೋಗಕ್ಕೆ ಇನ್ಯಾವಾಗ ಬರ್ತಾರೆ? ಈ ಪೊಲೀಸರಿಗೆ ಎಲ್ಲಾ ಕಳ್ಳರ ಬಗ್ಗೆ ತಿಳಿದಿರುತ್ತದೆ ಎಂಬುದು ನಿಮಗೆ ಗೊತ್ತಿಲ್ಲ. ಇವರಿಗೆ ಹಫ್ತಾ ಸಿಗುತ್ತಿರುತ್ತದೆ. ಬೇಕಾದರೆ ನಾನು ಬರೆದುಕೊಡ್ತೀನಿ. ನಮ್ಮ ಸೈಕಲ್ ಎಲ್ಲಿಗೂ ಹೋಗಲ್ಲ."

ಬೇರೆ ಸೈಕಲ್ಲಿನಲ್ಲಿ ಅಂಥ 'ವಂಚಕ ಕಪ್ಪುಬಣ್ಣ' ಸಿಗುವುದೋ ಇಲ್ಲವೋ ಎಂಬ ಬಗ್ಗೆ ಭಾಲೂಗೆ ಅತೀವ ದುಃಖವಾಗುತ್ತಿತ್ತು. ಅವನು ಅದೇ ದಿನ, ಅದೇ ಕಂಪನಿಯ, ಅದೇ ಬಣ್ಣದ ಇನ್ನೊಂದು ಸೈಕಲ್ಲನ್ನು ಮಜೀದ್ ಎಂಡ್ ಸನ್ಸ್ ಎಂಡ್ ಬ್ರದರ್ಸ್ ಅಂಗಡಿಯಲ್ಲಿ ನೋಡಿದ್ದ. ಆದರೆ ಅದರ ಕಪ್ಪು ಮಾಮೂಲು ಕಪ್ಪಾಗಿತ್ತು. ಕಪ್ಪೆಂದರೆ ಕಪ್ಪು. ಆದರೂ ಅದರ ಫ್ರೇಮಿನಲ್ಲಿ ನೀಲಿ ಮತ್ತು ಬಂಗಾರದ ರೇಖೆಗಳಿದ್ದವು, ಆದರೆ ಅವುಗಳಲ್ಲಿ ಜೀವವಿರಲಿಲ್ಲ. ಅವುಗಳಲ್ಲಿ ಯಾವುದೇ 'ಅದ್ಭುತ' ಕಾಣ ಬರುತ್ತಿರಲಿಲ್ಲ.

ಭಾಲೂ ಖಂಡಿತವಾಗಿಯೂ ದುಃಖಿಯಾಗಿದ್ದ. ಸೈಕಲ್ ಕಳ್ಳತನದಂಥ ಸಾಮಾನ್ಯ ವಿಷಯವನ್ನು ಎಸ್.ಪಿ. ಭೂಧರರಿಗೆ ಹೇಳುವುದು ಉಚಿತವಲ್ಲ ಎಂದು ಅವನಿಗೆ ಅನ್ನಿಸುತ್ತಿತ್ತು. ಆದರೂ ಅವನು ಮೊದಲು ಜಿಲ್ಲಾ ಪೊಲೀಸ್ ಪ್ರಧಾನ ಕಛೇರಿಗೆ ಹೋದ. ಅಲ್ಲಿ ಅವನಿಗೆ ಈ ಹಿಂದೆ ತನ್ನನ್ನು ಕರೆಯಲು ಬಂದಿದ್ದ, ನಂತರ ಅವನಿಗೆ ಗೋಲಗಪ್ಪೆ ತಿನ್ನುವಂತೆ ಆಗ್ರಹಿಸಿದ್ದ ಆ ಸಣಕಲು ಪೊಲೀಸ್ ಭೇಟಿಯಾದ. ಅವನ ಹೆಸರು ಸುಧೀರ್ ಕುಮಾರ್ ಪಾಂಡೆಯಾಗಿತ್ತು. ಅವನು ಭಾಲೂನನ್ನು ನೋಡಿ ತುಂಬಾ ಖುಷಿಗೊಂಡ, ಭಾಲೂನನ್ನು ತನ್ನ ಸೈಕಲ್ಲಿನ ಕ್ಯಾರಿಯರ್‌ನಲ್ಲಿ ಕೂರಿಸಿಕೊಂಡು ಠಾಣೆಗೆ ಕರೆದೊಯ್ದ. ಠಾಣೆಯ ಹವಲ್ದಾರ ರಾಣಾ ಎಂಬುವವನಿದ್ದ. ಅವನಿಗೆ ಬೊಜ್ಜು ಬಂದಿದ್ದು, ಕುತ್ತಿಗೆ ಎಷ್ಟು ದಢೂತಿಯಾಗಿತ್ತೆಂದರೆ, ಅಲ್ಲಿ ಧ್ವನಿ ಸಿಲುಕಿಕೊಂಡು ಹೊರ ಬರುತ್ತಿತ್ತು. ಲೆಕ್ಚರರ್ ಸಾಹೇಬರು ಹೊಸ ಎಸ್.ಪಿ. ಸಾಹೇಬರ ಮಿತ್ರರು. ಇಬ್ಬರೂ ಪುಸ್ತಕಗಳನ್ನು ಬರೆಯುತ್ತಾರೆ ಎಂದು ಪಾಂಡೆ ರಾಣಾನಿಗೆ ಹೇಳಿದಾಗ, ರಾಣಾ ಸಹ ಖುಷಿಗೊಂಡ. 'ಕಳ್ಳತನದಬಗ್ಗೆ ರಿಪೋರ್ಟ್ ಬರೆಯುವುದರಿಂದ ಅಥವಾ ಎಫ್.ಐ.ಆರ್. ದಾಖಲಿಸುವುದರಿಂದ ಯಾವುದೇ ಪ್ರಯೋಜನವಿಲ್ಲ. ಸೈಕಲ್ ತಿಂಗಳೊಳಗೇ ಸಿಗುವುದು' ಎಂದ ರಾಣಾ. 'ನಿಜ ಹೇಳಬೇಕೆಂದರೆ ಕದ್ದ ಸೈಕಲ್ಲುಗಳು ಸಗಟು

ವ್ಯಾಪಾರದಲ್ಲಿ ಸಿಗುತ್ತವೆ. ಈ ಬಾರಿ ಸೈಕಲ್ಲುಗಳನ್ನು ಹಿಡಿದಾಗ, ನಿಮಗೆ ಸುದ್ದಿಯನ್ನು ತಿಳಿಸಲಾಗುವುದು' ಎಂದೂ ಹೇಳಿದ. ಪೊಲೀಸ್ ಚೌಕಿಯಲ್ಲಿ ಹವಲ್ದಾರ ರಾಣಾ ಎದುರಿನ ಹೊಟೇಲ್‌ನಿಂದ ಸಮೋಸಾ, ಢೋಲೆ ಮತ್ತು ಸ್ಪೆಷಲ್ ಚಹಾ ತರಿಸಿಕೊಟ್ಟು ಸತ್ಕರಿಸಿದ. 'ಎಸ್.ಪಿ. ಸಾಹೇರ ಪರಿಚಯ ನಿಮಗೆ ಎಂದಿನಿಂದ ಇದೆ? ನೀವಿಬ್ಬರು ಒಟ್ಟಿಗೆ ವಿದ್ಯಾಭ್ಯಾಸ ಮಾಡಿರಬೇಕು?' ಎಂದು ಪ್ರಶ್ನಿಸಿದ. 'ನಾನು ಒಮ್ಮೆ ಮಾತ್ರ ಎಸ್.ಪಿ. ಸಾಹೇಬರನ್ನು ಭೇಟಿಯಾದದ್ದು' ಎಂದು ಭಾಲೂ ಹೇಳಿದಾಗ ರಾಣಾ ತುಂಬಾ ನಿರಾಶನಾದ. ರಾಣಾ ವಿಷಯವನ್ನು ಸಂಭಾಳಿಸುತ್ತಾ ಹೇಳಿದ, "ಕವನ-ಗಿವನ ಮತ್ತು ಸೈಕಲ್‌ವಿಷಯ ಇರಲಿ; ನಮಗೆ ಮತ್ತು ಪಾಂಡೆಗಾಗಿ ನೀವು ಎಸ್.ಪಿ. ಸಾಹೇಬರೊಂದಿಗೆ ಗೆಳೆತನವನ್ನು ಉಳಿಸಿಕೊಂಡಿರಿ."

ನಂತರ ಅದೆಷ್ಟೋ ವಾರಗಳು ಕಳೆದು ಹೋದವು. ಭಾಲೂ ಆಗಾಗ ಪೊಲೀಸ್ ಸ್ಟೇಷನ್ ಎದುರಿನಿಂದ ಬೇಕಂತಲೇ ಹಾದು ಹೋಗುತ್ತಿದ್ದ. ಹವಲ್ದಾರ ರಾಣಾ ತನ್ನ ಸೈಕಲ್ಲಿನ ವಿಷಯವನ್ನು ಮರೆಯಬಾರದೆಂದುಬುದು ಅವನ ಉದ್ದೇಶವಾಗಿತ್ತು. ಆದರೆ ರಾಣಾ ಅವನನ್ನು ನೋಡಿ ಮುಗುಳ್ನಗುತ್ತಿದ್ದ. ಸೈಕಲ್ ಬಗ್ಗೆ ಪ್ರಸ್ತಾಪವನ್ನೇ ಮಾಡುತ್ತಿರಲಿಲ್ಲ. ಭಾಲೂ ಠಾಣೆಯಲ್ಲಿ ತನ್ನ ಫೋನ್ ನಂಬರನ್ನೂ ಬರೆಯಿಸಿ ಬಂದಿದ್ದ. ಠಾಣೆಯಿಂದ ತನಗೆ ಫೋನ್ ಬರುವುದೆಂದು ಸದಾ ನಿರೀಕ್ಷಿಸುತ್ತಿದ್ದ. ಆದರೆ ಹೀಗಾಗುತ್ತಿರಲಿಲ್ಲ. ಅವನು ಹೊಸ ಸೈಕಲ್ಲನ್ನೂ ಖರೀದಿಸಲು ಸಾಧ್ಯವಾಗುತ್ತಿರಲಿಲ್ಲ. ಹೀಗಾಗಿ ಸದಾ ವ್ಯಗ್ರನಾಗಿರುತ್ತಿದ್ದ.

ತಾನು ಮಾಲಾಳನ್ನು ಕರೆದುಕೊಂಡು ಮಾತಾ ಹರದೇಬಿಯ ರಸ್ತೆಯಲ್ಲಿ ತುಂಬಾ ದೂರಕ್ಕೆ ಹೋಗಬೇಕು; ಅಲ್ಲಿ ಹರಿಯುವ ಮೋಹಿನಿ ಎಂಬ ನದಿಯಲ್ಲಿ ಇಬ್ಬರೂ ಒಟ್ಟಿಗೆ ಸ್ನಾನ ಮಾಡಬೇಕು, ಅವಕಾಶ ಸಿಕ್ಕರೆ ನದಿಯ ನದಿಯ ಪ್ರವಾಹದೊಳಗೆ ಮಾಲಾ-ಡಿಯನ್ನು ಫ್ರೇಮಿನ ಮೇಲೆ ಕೂರಿಸಿಕೊಂಡು ಸೈಕಲ್ ಚಾಲನೆ ಮಾಡಬೇಕು ಎಂದು ಭಾಲೂಗೆ ಅದೆಷ್ಟೋ ಬಾರಿ ಮನಸ್ಸಾಗುತ್ತಿತ್ತು. ಕಾಡಿಗೆ ಹೋಗಿ ಮಾಲಾಳ ಕೊರಳಿಗೆ ಮೂಗು ಉಜ್ಜಬೇಕು, ಈಗ ಅವಳು ಯಾವ ಹುಡುಗಿಯಾಗಿ ಬದಲಾಗಿದ್ದಾಳೆ ಎಂದು ಮೂಸಬೇಕು ಎಂದೂ ಅನ್ನಿಸುತ್ತಿತ್ತು. ಅವನು ಖರೀದಿಸಿದ ಎಲ್ಲಾ ತೈಲಗಳು ಹಾಗೆಯೇ ಇದ್ದವು.

ಈ ನಡುವೆ ಎರಡು ಬಾರಿ ಎಸ್.ಪಿ. ಭೂಧರ್ ಸಾಹೇಬರು ಅವನ ಫ್ಲಾಟ್‌ಗೆ ಬಂದಿದ್ದರು. ತ್ರಿವೇಣಿ ಭಗನಾನಿ ಮಹಿಳಾ ಕಾಲೇಜಿನ ವಾರ್ಷಿಕೋತ್ಸವದಲ್ಲಿ ಇಬ್ಬರೂ ತಮ್ಮ-ತಮ್ಮ ಕವನಗಳನ್ನು ಓದಿದ್ದರು. ಕಾಲೇಜಿನ ಪ್ರಾಂಶುಪಾಲರಾದ ಸುಶ್ರೀ ಮಾಲತಿ ಅಗ್ನಿಹೋತ್ರಿ ಮತ್ತು ಗವರ್ನಿಂಗ್ ಬಾಡಿಯ ಚೇರಮನ್ ಶ್ರೀ ಸುಂದರಚಂದ್ ಭಗನಾನಿಯವರು ಎಸ್.ಪಿ. ಶ್ರೀ ಭೂಧರರ ಕವನಗಳನ್ನೇ

ತಮ್ಮ ಭಾಷಣದಲ್ಲಿ ಹೊಗಳಿದ್ದು ಭಾಲೂಗೆ ಇಷ್ಟವಾಗಿರಲಿಲ್ಲ. ಭಾಲೂ ವೇದಿಕೆಯಲ್ಲಿ, ರಸ್ತೆಯಿಂದ ಬಲಾತ್ಕಾರವಾಗಿ ಹಿಡಿದು ಅಲ್ಲಿಗೆ ತಂದ ಬಡವನಂತೆ ಮತ್ತು ಕರಡಿ ಕುಣಿಸುವವನಂತೆ ಕೂತಿದ್ದ. ಅಲ್ಲದೆ ಅವನನ್ನು ಕವಿಯಾಗಿ ಪರಿಚಯಿಸದೆ, ಶಾಸಕೀಯ ಮಹಾವಿದ್ಯಾಲಯದ 'ಹಿಂದಿ ಸಾಹಿತ್ಯದ ವಿದ್ವಾನ್ ಪ್ರಾಧ್ಯಾಪಕರು' ಎಂದು ಪರಿಚಯಿಸಲಾಗಿತ್ತು.

ಭಾಲೂ ಸೈಕಲ್ ಕಳೆದುಕೊಂಡಾಗಿನಿಂದ, ಎಲ್ಲೋ ಕಳೆದುಹೋದವನಂತೆ ಇರುತ್ತಿದ್ದ. ಈಚೆಗೆ ಅವನು ಟಾಂಗಾದಲ್ಲಿ ಕಾಲೇಜಿಗೆ ಹೋಗುತ್ತಿದ್ದ. ಹಾಗಂತ, ನಗರದಲ್ಲಿ ಸಾಮಾನ್ಯವಾಗಿ ರಿಕ್ಷಾದಲ್ಲಿ ಜನ ಪಯಣಿಸುತ್ತಿದ್ದರು. ಟಾಂಗಾ ಸಾಮನ್ಯ ಸವಾರಿಯಾಗಿರಲಿಲ್ಲ. ಆದರೆ ಭಾಲೂಗೆ ರಿಕ್ಷಾಕ್ಕೆ ಹೋಲಿಸಿದಾಗ ಟಾಂಗಾ ಇಷ್ಟವಾಗುತ್ತಿತ್ತು; ಯಾಕೆಂದರೆ, ಟಾಂಗಾವನ್ನು ಕುದುರೆ ಎಳೆಯುತ್ತಿತ್ತು, ಮನುಷ್ಯ ಎಳೆಯುತ್ತಿರಲಿಲ್ಲ. ಭಾಲೂ ಮನಸ್ಸಿನಲ್ಲಿ ಕುದುರೆಗಳ ಬಗ್ಗೆ ಮನುಷ್ಯನ ಹೋಲಿಕೆಯಲ್ಲಿ ಕಡಿಮೆ ಸಹಾನುಭೂತಿ ಅಥವಾ ಕರುಣೆಯಿತ್ತು ಎಂಬುದನ್ನು ಇದರಿಂದ ನಿಷ್ಕರ್ಷಿಸುವುದು ತುಂಬಾ ಉಚಿತವಾಗಲಾರದು. ವಾಸ್ತವವಾಗಿ ಭಾಲೂಗೆ ಟಾಂಗಾ ಯಾಕೆ ಇಷ್ಟವಾಗುತ್ತಿತ್ತೆಂದರೆ, ಅದರಲ್ಲಿ ಕೂತ ನಂತರ ಹಿಂಭಾಗಕ್ಕೂ ಹೊರಳಿ ನೋಡಬಹುದಿತ್ತು. ಹೀಗೆ ನೋಡುವುದರಿಂದ ಹೆಚ್ಚು ವಿಶ್ವಸ್ಥನಾಗಿರುತ್ತಿದ್ದ. ಹಿಂದಕ್ಕೆ ನೋಡುತ್ತಾ ಅಡಗಿಯೂ ಕೂರಬಹುದಿತ್ತು. ರಿಕ್ಷಾದಲ್ಲಿ ಮುಖ ಎದುರು ಮಾಡಿ ಕೂರಬೇಕಾಗುತ್ತಿತ್ತು; ಆಗ ಎಲ್ಲರೂ ಅವನನ್ನು ನೋಡಬಹುದಿತ್ತು. ಇನ್ನೊಂದು ವಿಷಯವೆಂದರೆ, ಆ ಟಾಂಗಾ ಭಾಲೂಗೆ, ಅವನು ಬಾಡಿಗೆ ಮನೆಯಿಂದ ಹೊರಡುತ್ತಲೇ, ಅಶ್ವತ್ಥ ಮರದ ಕೆಳಗೆ ಮಲಗಿರುತ್ತಿದ್ದ ಮೈಕೂ ಮೆಹರದೀನನೊಂದಿಗೆ ತಕ್ಷಣ ಸಿಗುತ್ತಿತ್ತು. ಮೈಕೂ ಮೆಹರದೀನ ಗಾಂಜಾ ಸೇವಿಸುತ್ತಿದ್ದ. ಟಾಂಗಾದಲ್ಲಿ ಕುದುರೆ ಮತ್ತು ಗಾಂಜಾದ ಬೆರೆತ ವಾಸನೆ ಸೂಸುತ್ತಿತ್ತು; ಇದು ಭಾಲೂಗೆ ತುಂಬಾ ಇಷ್ಟವಾಗುತ್ತಿತ್ತು. ಮೂರನೆಯ ವಿಷಯವೆಂದರೆ, ಟಾಂಗಾ ಬಾಡಿಗೆಯನ್ನು 'ಮಂಥಲಿ' ಲೆಕ್ಕದಲ್ಲಿ ಕೊಡುತ್ತಿದ್ದ; ಇದು ರಿಕ್ಷಾ ಬಾಡಿಗೆಗೆ ಹೋಲಸಿದರೆ ಕಡಿಮೆಯಾಗುತ್ತಿತ್ತು. ಟಾಂಗಾದಲ್ಲಿ ಕಾಲೇಜಿಗೆ ಹೋಗುವುದಕ್ಕೆ ಭಾಲೂ ಸಹ ಹಿಂಜರಿಯುತ್ತಿದ್ದ ಎಂಬುದೂ ನಿಜವಾಗಿತ್ತು. ಕಳೆದ ಕೆಲವು ದಿನಗಳಿಂದ ಬಿ.ಎ. ಫೈನಲ್ ಓದುತ್ತಿದ್ದ ಹುಡುಗಿ ಜಸಪ್ರೀತ್ ಕೌರ್ ತನ್ನ ಸೈಕಲ್‌ನಲ್ಲಿ ಅವನ ಟಾಂಗಾವನ್ನು ನಡುರಸ್ತೆಯಿಂದ ಹಿಂಬಾಲಿಸುತ್ತಿದ್ದಳು. ಐದು ಮುಕ್ಕಾಲು ಅಡಿ ಎತ್ತರವಿದ್ದ ಅವಳು ಜಾವಲಿನ್ ಥ್ರೋ, ಡಿಸ್ಕ್ ಥ್ರೋ ಮತ್ತು ಭಾರ ಎತ್ತುವುದರಲ್ಲಿ ಚಾಂಪಿಯನ್ ಆಗಿದ್ದು, ಕಾಲೇಜಿನಲ್ಲಿ 'ಮಾಲೇಶ್ವರಿ' ಮತ್ತು 'ದಾರಾಸಿಂಗ್' ಹೆಸರಿನಿಂದ ಚಿರಪರಿಚಿತಳಾಗಿದ್ದಳು. ಅವಳು ಟಾಂಗಾವನ್ನು ಸೈಕಲ್ಲಿನಿಂದ ಹಿಂಬಾಲಿಸುತ್ತಾ ಒಂದೇ ಸಮನೆ ಭಾಲೂ ಜೊತೆಗೆ

ಮಾತನಾಡುತ್ತಿದ್ದಳು, "ಸಾರ್, ನೀವೇಕೆ ಕಾರು ಖರೀದಿಸುತ್ತಿಲ್ಲ? ಗುರುಗಳೇ, ಸ್ಕೂಟರ್ ಕೊಳ್ಳಿ! ಸಾರ್, ನನ್ನ ಸೈಕಲ್‌ನಲ್ಲಿ ಕೂತುಬಿಡಿ. ಸಾರ್, ನಿಮ್ಮ ಕುದುರೆ ನಗುತ್ತಿದೆ. ಕುದುರೆಯೂ ಗಾಂಜಾ ಸೇವಿಸುವುದೇ, ಸಾರ್?" ಇತ್ಯಾದಿ-ಇತ್ಯಾದಿ...ಭಾಲೂ ವ್ಯಗ್ರನಾಗುತ್ತಿದ್ದ.

ಭಾಲೂ ವ್ಯಗ್ರನಾಗಿ ಪೊಲೀಸ್ ಚೌಕಿಗೆ ಪದೇ-ಪದೇ ಹೋಗಲಾರಂಭಿಸಿದ. ಹವಲ್ದಾರ ರಾಣಾ ಮೊದ-ಮೊದಲು ಚಹಾ ಕುಡಿಸುತ್ತಿದ್ದ, ನಂತರ ಕ್ರಮೇಣ ಚಹಾ ಕುಡಿಸುವ ಮಾತಿರಲಿ, ಅವನನ್ನು ನೋಡಿ ಮುಗುಳ್ನಗುವುದನ್ನು ಮತ್ತು ಕುರ್ಚಿಯಿಂದ ಮೇಲೇಳುವುದನ್ನೂ ನಿಲ್ಲಿಸಿದ. ಹವಲ್ದಾರ ರಾಣ ಭಾಲೂನೊಂದಿಗೆ ಎಸ್.ಪಿ. ಬಗ್ಗೆ ಮಾತನಾಡಲು ಬಯಸುತ್ತಿದ್ದ, ಆದರೆ ಭಾಲೂ, ತನ್ನ ಸೈಕಲ್ ಬಗ್ಗೆ ಮಾತನಾಡಲೆಂದು ಬಯಸುತ್ತಿದ್ದ. ಒಂದು ದಿನ ಮಾಲಾ, "ಪಕ್ಕದ ಮನೆಯ ಫಿಜಿಕ್ಸ್ ಅಧ್ಯಾಪಕರು, ಡಾ. ಬಾಲ ಗೋಪಾಲ ರಾಜೋರಿಯಾ ಅವರು ಹವಲ್ದಾರ ಅಥವಾ ಠಾಣೆಯ ಎಸ್.ಹೆಚ್.ಓ. ರಿಂದ ಸೈಕಲ್ ಕಳ್ಳತನವಾದ ಬಗ್ಗೆ ಎಫ್.ಐ.ಆರ್.ನ ಪ್ರತಿಯನ್ನು ತೆಗೆದುಕೊಳ್ಳಲಿ. ತಾವು ವಿಚಾರಣೆ ಮಾಡಬೇಕಾಗುವುದೆಂದು ಯೋಚಿಸಿ ಪೊಲೀಸರು ಎಫ್.ಐ.ಆರ್. ದಾಖಲಿಸಿಕೊಳ್ಳುವುದಿಲ್ಲ ಎಂದು ಹೇಳಿದರು" ಎಂದಳು.

ಈ ಬಾರಿ ಭಾಲೂ ಹವಲ್ದಾರ ರಾಣಾನಿಗೆ ಎಫ್.ಐ.ಆರ್. ಕಾಪಿಯನ್ನು ಕೇಳಿದ. ರಾಣಾ ಮೊದಲು ಅವನ ಬೇಡಿಕೆಗೆ ಗಮನ ಕೊಡಲಿಲ್ಲ, ಆದರೆ ಬರು-ಬರುತ್ತಾ ರೇಗಿದ. ಭಾಲೂ ಸಹ ರೇಗಿದ. ರಾಣಾ ಸಿಟ್ಟಿನಿಂದ ಕುರ್ಚಿಯಿಂದೆದ್ದು ಹೇಳಿದ, "ಎಫ್.ಐ.ಆರ್. ಇಲ್ಲ. ನೀವದನ್ನು ತೆಗೆದುಕೊಂಡು ಏನುಮಾಡ್ತೀರ? ನಿಮಗೆ ಸೈಕಲ್‌ಬೇಕೋ ಅಥವಾ ಎಫ್.ಐ.ಆರ್. ಬೇಕೋ? ನನ್ನ ಹಿಂದೆ ಬನ್ನಿ. ಸಾವಿರ ರೂಪಾಯಿಯ ಸೈಕಲ್‌ಗಾಗಿ ನೀವು ನಿಮ್ಮ ಜೀವವನ್ನು ಅಪಾಯಕ್ಕೀಡು ಮಾಡಿಕೊಂಡಿದ್ದೀರ. ಇಲ್ಲಿ ಲಕ್ಷಾಂತರ ರೂಪಾಯಿಗಳ ಕಳ್ಳತನವಾದರೂ, ಕಳೆದುಕೊಂಡವರು ವಿವೇಕದಿಂದ ಮಾತನಾಡುತ್ತಾರೆ. ಯಾರೂ ನಿಮ್ಮ ಹಾಗೆ ವರ್ತಿಸುವುದಿಲ್ಲ."

ಹವಲ್ದಾರ ರಾಣಾ ಭಾಲೂವನ್ನು ಠಾಣೆಯ ಹಿಂಭಾಗಕ್ಕೆ ಕರೆದೊಯ್ದ. ಅಲ್ಲಿ ಅಳಿದುಳಿದ ಒಂದು ಇಟ್ಟಿಗೆಯ ಗೋಡೆಯಿದ್ದು, ಅದರೊಳಗೆ ಹರಕು-ಮುರಕು ಕಾರುಗಳು, ಸ್ಕೂಟರ್‌ಗಳು, ಸೈಕಲ್‌ಗಳು, ಟಾಯರ್‌ಗಳು, ಚಕ್ರಗಳು, ಇಂಜಿನ್‌ಗಳ ಗುಜರಿ ತುಂಬಿ ತುಳುಕುತ್ತಿತ್ತು. ಅದೇ ಗೋಡೆಯ ಬಲ ಮೂಲೆಯಲ್ಲಿ ಹದಿನೈದು-ಇಪ್ಪತ್ತು ಹರಕು-ಮುರಕು, ಗೆದ್ದಲು ಹಿಡಿದ ಸೈಕಲ್‌ಗಳು ನಿಂತಿದ್ದವು. "ಇದರಲ್ಲಿಬೇಕಾದ ಸೈಕಲ್ಲನ್ನು ಆರಿಸಿಕೊಳ್ಳಿ, ರಿಪೇರಿ ಮಾಡಿಸಿಕೊಳ್ಳಿ, ಒಂದು ವೇಳೆ ನಿಮ್ಮ ಸೈಕಲ್ ಸಿಕ್ಕರೂ ಇಂಥ ಸ್ಥಿತಿಯಲ್ಲಿಯೇ ಸಿಗುವುದು."

"ಆದರೆ ಇದರಲ್ಲಿ ನನ್ನ ಸೈಕಲ್ ಇಲ್ಲ." ಎಂದ ಭಾಲೂ.

"ನಿಮಗೆ ಸೈಕಲ್ ಬೇಕೋ ಅಥವಾ ಜಗಳವಾಡುವುದು ಬೇಕೋ? ಇದರಲ್ಲಿ ಯಾವುದೇ ಸೈಕಲ್ ತೆಗೆದುಕೊಂಡು ಹೋಗಿ." ರಾಣಾ ಅವನನ್ನು ಸಾಗಹಾಕಲು ಪ್ರಯತ್ನಿಸಿದ. ಭಾಲೂ ನಿಜವಾಗಿಯೂ ವ್ಯಗ್ರನಾಗಿದ್ದ. ಮೊದಲನೆಯದಾಗಿ ಕಳ್ಳತನದ ಮಾಲು, ಎರಡನೆಯದಾಗಿ ಬೇರೆಯವರ ಸೈಕಲ್ಲನ್ನು ತೆಗೆದುಕೊಂಡು ಹೋಗುವುದು... ಅವನ ಮನಸ್ಸು ಒಪ್ಪಲಿಲ್ಲ. ಹವಲ್ದಾರನಿಗೆ ತನ್ನ ಸೈಕಲ್ಲಿನ ಬಣ್ಣ ಬದಲಿಸುವ ಕಪ್ಪು ಬಣ್ಣದ ಬಗ್ಗೆ ಹೇಗೆ ಹೇಳುವುದು ಎಂದು ಅರ್ಥವಾಗುತ್ತಿರಲಿಲ್ಲ. ತನ್ನಷ್ಟಕ್ಕೆ ತಾನೇ ಬಣ್ಣವನ್ನು ಬದಲಿಸುವ ಇನ್ನೊಂದು ಸೈಕಲ್ಲನ್ನು ಬಹುಶಃ ತನ್ನ ಜೀವನದಲ್ಲಿ ಇನ್ನೆಂದೂ ತಾನು ಖರೀದಿಸಲು ಸಾಧ್ಯವಿಲ್ಲ.

ಕಡೆಗೆ ತುಂಬಾ ಯೋಚಿಸಿ ಭಾಲೂ ಹೇಳಿದ, "ನೋಡಿ, ಹೀಗೆ ಮಾಡಿ. ಎಫ್.ಐ.ಆರ್. ಕಾಪಿಯನ್ನೇ ನೀವು ನನಗೆ ಕೊಡಿ. ನಾನು ಬೇರೆಯವರ ಸೈಕಲ್ಲನ್ನು ತೆಗೆದುಕೊಂಡು ಹೋಗುವುದಿಲ್ಲ."

"ನೀವು ಬೇಕಂತಲೇ ಜಗಳ ತೆಗೆಯುತ್ತಿದ್ದೀರ. ಕಾಲೇಜಿನ ಪ್ರಿನ್ಸಿಪಾಲ್ ಸಾಹೇಬರು ಸಹ, 'ಅವರು ಟಾಂಗಾದಲ್ಲಿ ಕಾಲೇಜಿಗೆ ಬಂದು ಎಲ್ಲರಿಗೂ ಅವಮಾನ ಮಾಡುತ್ತಿದ್ದಾರೆ' ಎಂದು ಹೇಳುತ್ತಿದ್ದರು." ಹವಲ್ದಾರ ರಾಣಾ ಭಾಲೂಗೆ ತಿಳಿಹೇಳಲು ಪ್ರಯತ್ನಿಸಿದ.

"ಅದರ ಬಗ್ಗೆ ನನಗೆ ಚಿಂತೆಯಿಲ್ಲ. ನೀವು ರಿಪೋರ್ಟಿನ ಕಾಪಿ ನನಗೆ ಕೊಡಿ." ಎಂದು ಮತ್ತೆ ಭಾಲೂ ಕೇಳಿದ.

ಅವನು ಹೇಳಿದ್ದೇ ತಪ್ಪಾಯಿತು. ಹವಲ್ದಾರ ರಾಣಾ ಅವನನ್ನು ನೋಡಿ ಮುಗುಳ್ನಗುತ್ತಾ ಹೇಳಿದ, "ಕೊಡದಿದ್ದರೆ ನೀವು ನನ್ನ ಬಗ್ಗೆ ಎಸ್.ಪಿ.ಸಾಹೇಬರಿಗೆ ದೂರು ಕೊಡುತ್ತೀರ, ಅಲ್ವಾ?" ಹವಲ್ದಾರ ತನ್ನ ಕುರ್ಚಿಯಲ್ಲಿ ಮತ್ತೊಮ್ಮೆ ಕೂತು, ತನ್ನ ಬಳಿಯೇ ನಿಂತಿದ್ದ ಪೊಲೀಸನಿಂದ, ತನಗೆ ಮಾತ್ರ ಸ್ಪೆಶಲ್ ಕಾಫಿ ತರಿಸಿಕೊಂಡು ಹಲ್ಲು ಕಡಿಯುತ್ತಾ ಡಾ. ಬಾಲ ಗೋಪಾಲ ರಾಜೋರಿಯಾಗೆ ಹೇಳಿದ, "ಎಸ್.ಪಿ. ಸಾಹೇಬರಿಗೂ ನಿಮ್ಮ ಬಗ್ಗೆ ಎಲ್ಲಾ ವಿಷಯ ತಿಳಿದಿದೆ. ನೀವು ಟಾಂಗಾವಾಲರುಗಳೊಂದಿಗೆ ಕೂತು ಗಾಂಜಾ ಸೇವಿಸುತ್ತೀರ. ರಸ್ತೆ ಮಧ್ಯದಲ್ಲಿ ಕಾಲೇಜು ಹುಡುಗಿಯರೊಂದಿಗೆ ಸರಸ-ಸಲ್ಲಾಪ ಮಾಡುತ್ತೀರ. ಈಗ ನನ್ನ ತಲೆಯನ್ನು ತಿನ್ನಬೇಡಿ. ಸೈಕಲ್ ಸಿಕ್ಕ ನಂತರ ನಿಮಗೆ ವಿಷಯವನ್ನು ತಿಳಿಸುತ್ತೇವೆ."

ಭಾಲೂ ತುಂಬಾ ದಣಿದು ಮನೆಗೆ ಬಂದ. ಅವನು ಮಾಲಾಳೊಂದಿಗೆ ಸರಿಯಾಗಿ ಮಾತನಾಡಲಿಲ್ಲ. ರಾತ್ರಿ ಪೊಲೀಸರ ವಿರುದ್ಧ ಕವನವೊಂದನ್ನು ಬರೆದ. ಸರಿಯಾಗಿ ಊಟ ಮಾಡಲಿಲ್ಲ, ತಡ ರಾತ್ರಿಯವರೆಗೂ ನಿದ್ರೆ ಮಾಡದಾದ.

ಸುಮಾರು ಮೂರು ತಿಂಗಳ ನಂತರ, ಅದೊಂದು ದಿನ ಬೆಳ್ಳಂಬೆಳಿಗ್ಗೆ ಸುಪರಿಂಟೆಂಡೆಂಟ್ ಆಫ್ ಪೊಲೀಸ್ ವಿ.ಕೆ. ಭೂಧರರು ತಮ್ಮ ಜೀಪಿನಲ್ಲಿ ಭಾಲೂ ಮನೆಗೆ ಬಂದರು. ಅವರು ಭಾಲೂಗೆ ತಕ್ಷಣ ಸಿದ್ಧರಾಗಿ ತಮ್ಮೊಂದಿಗೆ ಹೊರಡುವಂತೆ ಹೇಳಿದರು. ಅವರು ಒಂದು ದೊಡ್ಡ ಸಾಹಿತ್ಯಿಕ ಸಂಸ್ಥೆಯನ್ನು ಸ್ಥಾಪಿಸಿದ್ದರು. ಅಲ್ಲಿಗೆ ದೇಶದ ಪ್ರಸಿದ್ಧ ಸಾಹಿತಿಗಳು, ಕವಿಗಳು, ಸಂಪಾದಕರು, ಪತ್ರಕರ್ತರು ಮುಂತಾದವರು ಆಗಮಿಸುತ್ತಿದ್ದರು. ಭಾಲೂ ಸಹ ಅಲ್ಲಿಗೆ ಬಂದು ತನ್ನ ಕವನವನ್ನು ವಾಚಿಸಲಿ ಎಂದು ಭೂಧರರು ಬಯಸುತ್ತಿದ್ದರು. ಭಾಲೂ ನನಗೆ ಆ ಸಮಾರಂಭದ ವಿವರಣೆ ಕೊಟ್ಟ; ಅದು ಅವನ ಮಾತುಗಳಲ್ಲಿ ಹೀಗಿತ್ತು:

"ಮಿತ್ರ, ಅಲ್ಲಿ ನನ್ನ ಉಸಿರೇ ಕಟ್ಟಿದಂತಾಯಿತು! ಎಲ್ಲಾ ಪೊಲೀಸರು, ಅಬ್ಕಾರಿಯರವರು, ತಾಸೀಲ್ದಾರರ ಕಛೇರಿಯವರು ಹಾಗೂ ಇನ್ನಿತರ ಸರ್ಕಾರಿ ಇಲಾಖೆಯ ಅಧಿಕಾರಿಗಳು ಅಲ್ಲಿ ತಮ್ಮ-ತಮ್ಮ ಕವನಗಳನ್ನು ಓದುತ್ತಿದ್ದರು. ಆ ದೊಡ್ಡಹಾಲ್‌ನಲ್ಲಿ ಅವರ ಪರಿವಾರದವರು ಮತ್ತು ಸರ್ಕಾರಿ ಇಲಾಖೆಯ ಜನ ಕಲೆತಿದ್ದರು. ಮಿತ್ರ, ಅದೊಂದು ವಿಚಿತ್ರ ಪರಿಸ್ಥಿತಿಯಾಗಿತ್ತು! ಎಲ್ಲೆಲ್ಲೂ ಸ್ವಕೀಯತೆ ರಾರಾಜಿಸುತ್ತಿತ್ತು. ಸಾಹಿತ್ಯವನ್ನು ಸರ್ಕಾರಿ ಸೆಕ್ಟರ್‌ಗೆ ತರಲಾಗಿತ್ತು. ಅಲ್ಲಿ ಭೂಧರರು ಸಹ ತಮ್ಮ ಕವನಗಳನ್ನು ವಾಚಿಸಿದರು. ಅಲ್ಲಿ ಅನೇಕ ಸಾಹಿತ್ಯಿಕ ಪತ್ರಿಕೆಗಳ ಶತಾಬ್ದಿ ಅಂಕಗಳ ಬಿಡುಗಡೆ ಕಾರ್ಯಕ್ರಮವೂ ನಡೆಯಿತು. ಕೆಲವು ಪುಸ್ತಕಗಳ ಲೋಕಾರ್ಪಣೆಯೂ ನಡೆಯಿತು."

ಭಾಲೂ ತನ್ನ ಮಾತನ್ನು ಮುಂದುವರೆಸಿದ-

"ಮರುದಿನ ಎಲ್ಲಾ ಪತ್ರಿಕೆಗಳಲ್ಲಿ ಈ ಕಾರ್ಯಕ್ರದ ಸುದ್ದಿಗಳು ಪ್ರಕಟಗೊಂಡಿತು. ಆದರೆ ನಾನು ಯಾವ ಘಟನೆಯಿಂದ ಇದುವರೆಗೆ ವ್ಯಗ್ರನಾಗಿದ್ದನೋ, ಅದು ರಾತ್ರಿ ಘಟಿಸಿತು. ಏನಾಯಿತೆಂದರೆ, ಕಾರ್ಯಕ್ರಮ ಮುಗಿದ ನಂತರ ಎಲ್ಲರೂ ಸರ್ಕಿಟ್ ಹೌಸಿಗೆ ಬಂದರು. ಅಲ್ಲಿ ಭೂಧರರು ಊಟದ ವ್ಯವಸ್ಥೆಯನ್ನು ಮಾಡಿದ್ದರು. ಮಿತ್ರ, ಒಂದು ವೇಳೆ ನನಗೆ, ಸಾಹಿತ್ಯದ ಅಸಲಿ ಜಗತ್ತು ಯಾವುದಾಗಿರುತ್ತದೆ ಎಂಬುದು ಸ್ವಲ್ಪವಾದರೂ ತಿಳಿದಿದ್ದರೆ, ನಾನು ಆಣೆ ಮಾಡಿ ಹೇಳುತ್ತೇನೆ, ನಾನೆಂದೂ ಕವನಗಳನ್ನು ಬರೆಯುತ್ತಿರಲಿಲ್ಲ. ಸೈಕಲ್ ಬಿಡುವುದರಲ್ಲಿನ ಸುಖ ಮತ್ತು ಆನಂದ, ಅದರ ಮೇಲೆ ಕೂತು ಬೇರೊಂದು ಜಗತ್ತಿನಲ್ಲಿ, ನದಿಯ ತೀರದಲ್ಲಿ, ದೂರ-ದೂರವರೆಗೆ ವ್ಯಾಪಿಸಿದ ಬೆಳದಿಂಗಳಿನಿಂದ ಆವರಿಸಿದ ಮರಳ ರಾಶಿಯಲ್ಲಿ ಸಿಗುವ ಆನಂದ, ಚಂದಿರ ಸೈಕಲ್ಲಿನ ಹ್ಯಾಂಡಲ್‌ನಲ್ಲಿ ಬಂಗಾರದಂತೆ ಹೊಳೆಯುವಲ್ಲಿನ ಆನಂದ ಅಥವಾ ಮೆಕಲ್ ಪರ್ವತದ ತುದಿಗೆ ನಾನು ಹೋದಾಗ ನನಗಾಗುವ ಆನಂದ, ಕವನದಿಂದಲೂ ಆಗುವುದೆಂದು ನಾನು ಯೋಚಿಸುತ್ತಿದ್ದೆ. ಆದರೆ ಮಿತ್ರ, ನಾನು ಬೇರೆಲ್ಲಿಗೊ

ಹೋಗಿಬಿಟ್ಟಿದ್ದೆ. ಅವರು ಅಲ್ಲಿ ಕುಡಿದು-ಕುಡಿದು ಬಿದ್ದಿದ್ದರು, ಮೈಮರೆತಿದ್ದರು, ಅವರಿಂದ ಮೇಲೇಳಲೂ ಸಾಧ್ಯವಾಗುತ್ತಿರಲಿಲ್ಲ, ಆದರೆ ಎಲ್ಲರೂ ಸಾಹಿತ್ಯ ಮತ್ತು ಸಮಾಜದಲ್ಲಿ ಪರಿವರ್ತನೆಯನ್ನು ತರಲು ಬಯಸುತ್ತಿದ್ದರು.

"ನಡುರಾತ್ರೆಗೆ ಸೂಪರಿಂಟೆಂಡೆಂಟ್ ಆಫ್ ಪೊಲೀಸ್ ಭೂಧರರು ಮತ್ತು ಕೆಲವು ಸಾಹಿತಿಗಳು ಮತ್ತು ಪತ್ರಕರ್ತರೊಂದಿಗೆ ನಾನು ಜೀಪಿನಲ್ಲಿ ಮರಳಿ ಬರುತ್ತಿರುವಾಗ, ಜೀಪನ್ನು ಭೂಧರರೇ ಚಾಲನೆ ಮಾಡುತ್ತಿದ್ದರು; ಅವರು ಅರ್ಧ ಗಂಟೆಯಿಂದ ತಮ್ಮ ಕವನಗಳನ್ನು ಗಜಾನನ ಮಾಧವ ಮುಕ್ತಿಬೋಧರ [ಹಿಂದಿಯ ಸುಪ್ರಸಿದ್ಧ ಕವಿ] ಕವನಗಳೊಂದಿಗೆ ಹೋಲಿಸಿಕೊಳ್ಳುತ್ತಿದ್ದರು, ಆಗ ಅಕಸ್ಮಾತ್ ನಾನು, 'ನೀವು ನನ್ನ ಸೈಕಲ್ಲನ್ನು ಹುಡುಕಿಕೊಟ್ಟರೆ ಒಳ್ಳೆಯದಿತ್ತು' ಎಂದಿದ್ದೆ. ಭೂಧರರು ನನ್ನ ಮಾತಿನೆಡೆಗೆ ಗಮನ ಕೊಡದೆ ಕಬೀರರ ದೋಹಾಗಳ ಬಗ್ಗೆ ಮಾತನಾಡಲು ಆರಂಭಿಸಿದರು; ಆಗ ನಾನು, 'ತಾನೆಂದೂ ಗಾಂಜಾ ಮುಂತಾದ ನಶೆಯ ವಸ್ತುಗಳನ್ನು ಸೇವಿಸುವುದಿಲ್ಲ, ಹವಲ್ದಾರ ರಾಣಾ ಸುಳ್ಳು ಹೇಳುತ್ತಿದ್ದಾನೆ' ಎಂದು ಹೇಳುವುದನ್ನು ಉಚಿತವೆಂದು ತಿಳಿದೆ. ಸೈಕಲ್‌ನೊಂದಿಗೆ ನನ್ನ ಬಾಲ್ಯದ ಸಂಬಂಧಗಳು ಕಲೆತುಕೊಂಡ ಬಗ್ಗೆಯೂ ಹೇಳಲು ಬಯಸಿದೆ. ಒಮ್ಮೆ ನಾನು ನದಿಯ ಪ್ರವಾಹದೊಳಗೆ ನನ್ನ ಸೈಕಲ್ಲಿನೊಂದಿಗೆ ನೀರಿನ ಜೇಡರಹುಳ, ಬಾಮ್‌ಮೀನು ಮತ್ತು ನೀರಿನಹಾವುಗಳ ನಡುವೆ ಸಿಲುಕಿಕೊಂಡ ಬಗ್ಗೆಯೂ ಹೇಳಿದೆ."

ಎಸ್.ಪಿ. ಸಾಹೇಬರು ರೇಗುತ್ತಿದ್ದರು. ಅವರು ಸಿಟ್ಟಿನ ಭರದಲ್ಲಿ, "ಸಾಹಿತ್ಯ ಮತ್ತು ಸಂಸ್ಕೃತಿಯ ಪತನವಾಗುತ್ತಿದೆ. ಇದು ಸಾಮಾಜಿಕ ಉದ್ದೇಶದಿಂದ ಕೂಡಿದ ಸಾಹಿತ್ಯವನ್ನು ರಚಿಸಲು ಇರುವ ಗಂಭೀರ ಸಮಯವಾಗಿದೆ. ಆದರೆ ನೀವು ನಿಮ್ಮ ಜುಜುಬಿ ಸೈಕಲ್ ಬಗ್ಗೆ ರಾಗವನ್ನು ಆಲಾಪಿಸುತ್ತಿದ್ದೀರಿ" ಎಂದರು. ಆಗ ಭಾಲೂ ಸೈಕಲ್ಲಿನ ಕಪ್ಪು ಬಣ್ಣ ಮತ್ತು ಅದರ ಫ್ರೇಮುಗಳಲ್ಲಿ ತ್ರಿಭುಜದಲ್ಲಿ ಎಳೆದ ಆ ನೀಲಿ ಮತ್ತು ಬಂಗಾರದ ರೇಖೆಗಳ ಬಗ್ಗೆ ಹೇಳಿದ; ಅದು ನೋಡುವವರ ಕಣ್ಣುಗಳಿಗೆ ಮರಳು ಮಾಡಿ, ಫ್ರೇಮಿನ ಕಪ್ಪುಬಣ್ಣಕ್ಕೆ, ತನ್ನ ಬಣ್ಣವನ್ನು ಬದಲಾಯಿಸಿಕೊಳ್ಳಲು ಅವಕಾಶ ಕೊಡುವ ಬಗ್ಗೆ ಹೇಳಲಾರಂಭಿಸಿದ. ತನ್ನ ಹೆಂಡತಿ ಸಹ, ಆ ಕಪ್ಪು ಬಣ್ಣ ವಾಸ್ತವವಾಗಿ ಇಂಥ ಚೇಷ್ಟೆಗಳನ್ನು ಮಾಡುತ್ತಿತ್ತು ಎಂಬುದನ್ನು ನೋಡಿದ್ದಾಳೆ ಎಂದೂ ಹೇಳಿದ.

ಈಗ ತಾಳ್ಮೆಯ ಕಟ್ಟೆ ಒಡೆದಿತ್ತು. ಎಸ್.ಪಿ. ಭೂಧರರು ಎಕ್ಸಿಲರೇಟರನ್ನು ಕಾಲಿನಿಂದ ಬಲವಾವಿ ಅದುಮಿದರು; ಅವರು ಜೀಪನ್ನು ಎಷ್ಟು ವೇಗವಾಗಿ ಚಾಲನೆ ಮಾಡಿದರೆಂದರೆ, ಜೀಪಿನಲ್ಲಿ ಕೂತಿದ್ದವರೆಲ್ಲರೂ ಹೆದರಿದರು. 'ಸಾಹಿತ್ಯ' ಪತ್ರಿಕೆಯ ಶತಾಬ್ದಿ ವಿಶೇಷಾಂಕ ಇಂದು ಬಿಡುಗಡೆಯಾಗಿತ್ತು, ಆ ಕಾರ್ಯಕ್ರಮ ಇದೇ

ಸಮಾರಂಭದಲ್ಲಿ ನಡೆದಿತ್ತು. ಜೀಪಿನಲ್ಲಿ ಕೂತಿದ್ದ ಅದರ ಸಂಪಾದಕರಾದ ಶ್ರೀ ತ್ರಿಪುರಾರಿ ಶರಣರು ಭಾಲೂಗೆ, 'ಡಾ.ರಾಜೋರಿಯಾ, ಈಗ ನೀವು ದಯವಿಟ್ಟು ಸುಮ್ಮನಿರಿ' ಎಂದರು. 'ಶಬ್ದ' ಮತ್ತು 'ರಚನಾ' ಪತ್ರಿಕೆಗಳ ಸಂಪಾದಕರು ಸಹ ಅವನಿಗೆ ಸುಮ್ಮನಿರುವಂತೆ ಸಂಜ್ಞೆ ಮಾಡಿದರು. ಆದರೆ ಭಾಲೂ, 'ಭೂಧರರು ಅಪಾಯಕರ ರೀತಿಯಲ್ಲಿ ಜೀಪನ್ನು ಚಾಲನೆ ಮಾಡುತ್ತಿದ್ದರು, ಅವರು ತುಂಬಾ ಕುಡಿದಿದ್ದರು. ನಾನೂ ಸಹ ತುಂಬಾ ಹೆದರಿದ್ದೆ.' ಎಂದಿದ್ದ.

"ನಿಧಾನಹೋಗಿ. ಮೊದಲನೆಯದಾಗಿ ನೀವು ತುಂಬಾ ಕುಡಿದಿದ್ದೀರ, ಅಲ್ಲದೆ 80 ಕಿ.ಮೀ.ಗೂ ಮೇಲ್ಪಟ್ಟು ಸ್ಪೀಡಿನಿಂದ ಜೀಪನ್ನು ಓಡಿಸುತ್ತಿದ್ದೀರ. ಇದು ಕಾನೂನಿನ ವಿಷಯ ಮಾತ್ರವಲ್ಲ, ನಮ್ಮ ಜೀವನದ ವಿಷಯವೂ ಹೌದು." ಎಂದ ಭಾಲೂ. ನಂತರ ಅವನು, "ನನ್ನ ನಂಬು, ನಾನಿಷ್ಟೇ ಹೇಳಿದ್ದೆ. ಆಗ ಅಕಸ್ಮಾತ್ ಎಸ್.ಪಿ. ಸಾಹೇಬರು ಜೀಪನ್ನು ನಿಲ್ಲಿಸಿ, ನನ್ನನ್ನು ತಳ್ಳಿ ಕೆಳಗೆ ಬೀಳಿಸಿದರು." ಎಂದ.

"ಸಾಹಿತ್ಯಕ್ಕೆ ಎಂತೆಂಥ ಜನ ನುಗ್ಗಿ ಬಂದಿದ್ದಾರೆ!" ಭೂಧರರು ಕೋಪಾವೇಷದಲ್ಲಿ ಹೇಳಿದ್ದರು. ಜೀಪು ನಂತರ ತುಂಬಾ ವೇಗದಲ್ಲಿ ಚಲಿಸಿತು. ಅದರೊಳಗಿನಿಂದ ಕೇಕೆ ಧ್ವನಿಗಳು ಕೇಳಿಸುತ್ತಿದ್ದವು. ನಾನು ಮೂರು ಗಂಟೆಗಳ ಕಾಲ ಆ ರಾತ್ರಿಯಂದು ಕಾಲ್ನಡಿಗೆಯಲ್ಲಿ ಅಲೆದೆ. ಬೆಳಿಗ್ಗೆ ನಾಲ್ಕು ಗಂಟೆಗೆ ಮನೆಗೆ ಮರಳಿ ಬಂದೆ. ನನ್ನ ಮೊಳಕಾಲುಗಳು ಮತ್ತು ಮೊಳಕೈಗಳಲ್ಲಿ ಪರಚಿದ ಗೆರೆಗಳಿದ್ದವು. ಮೂಗಿಗೂ ಪೆಟ್ಟು ಬಿದ್ದಿತ್ತು. ನನ್ನ ಅವಸ್ಥೆ ನೋಡಿ ಮಾಲಾ ರೋದಿಸಿದಳು. ನಂತರ ನಾನು ಕಿವಿ ಹಿಡಿದುಕೊಂಡು ಕ್ಷಮೆ ಯಾಚಿಸಿದೆ. ಮುಂದೆಂದೂ ಯಾವುದೇ ಸಾಹಿತ್ಯಿಕ ಸಮಾರಂಭಗಳಿಗೆ ಹೋಗಲಿಲ್ಲ.

"ಮಿತ್ರ, ಅಲ್ಲಿ ನನಗೆ ತುಂಬಾ ಹೆದರಿಕೆಯಾಗುತ್ತದೆ! ಯಾರು, ಯಾವಾಗ ಒದ್ದು ಹೊರಗೆ ಹಾಕುತ್ತಾರೋ, ತಿಳಿಯುವುದಿಲ್ಲ!" ಎಂದು ಅಂದು ಭಾಲೂ ಹೇಳಿದ್ದ. ಅವನು ವಾಸ್ತವವಾಗಿಯೂ ವ್ಯಗ್ರನಾಗಿದ್ದ. ಈ ಘಟನೆ ನಡೆದು ಒಂದು ತಿಂಗಳಿಗೂ ಮೇಲಾಯಿತು.

ನನ್ನನ್ನು ನೋಡಿ, ನಾನು ಲಾಂಡ್ರಿ ಅಂಗಡಿ ನಡೆಸುತ್ತೇನೆ. ಇದರಿಂದ ನನ್ನ ಜೀವನವನ್ನು ಸಾಗಿಸುತ್ತೇನೆ. ಸಾಹಿತ್ಯದಿಂದ ನನಗೇನು ಆಗಬೇಕಿದೆ? ಭಾಲೂ ಕಳೆದ ವಾರ ಹೊಸ ಸೈಕಲ್ಲನ್ನು ಖರೀದಿಸಿದ್ದಾನೆ. ಈಗಲೂ, 'ಬೋಲೈ ರೇ ಚಿರೈಯಾಹೋ ಆಧೀ ರಾತ್. ಟಿಟೀಹೀಂ...ಟಿಟೀಹೀಂ...ಟಿಟೀಹೀಂ.,..., ...' ಎಂದು ಹಾಡುತ್ತಾ ತಡರಾತ್ರಿಯಲ್ಲಿ ನಗರದ ರಸ್ತೆಗಳಲ್ಲಿ ಅಥವಾ ಮಾತಾ ಹರದೇಯಿ ಮಂದಿರದ ಮಾರ್ಗದಲ್ಲಿ, ತನ್ನ ಸೈಕಲ್ಲಿನಲ್ಲಿ ಅಲೆದಾಡುತ್ತಿರುತ್ತಾನೆ.

ರಾತ್ರಿ ವೇಳೆಯಲ್ಲಿ ಯಾರಾದರು ಅರೆನಿದ್ರೆಯಲ್ಲಿ ಅವನ ಧ್ವನಿ ಕೇಳಿದರೆ, ತನ್ನಷ್ಟಕ್ಕೆ ತಾನೇ ಮುಗುಳ್ನಗುತ್ತಾನೆ.

ನಾನು ನನ್ನ ಬಾಲ್ಯದ ಮಿತ್ರ ಬಾಲ ಗೋಪಾಲ ರಾಜೋರಿಯಾ ಉರ್ಫ್ ಬಾಲೂ ಉರ್ಫ್ ಭಾಲೂಗೆ, 'ಭಾಲೂ ಕೇಳು, ನಿಜ ಹೇಳಬೇಕೆಂದರೆ ನೀನು ಬೇರೇನೂ ಅಲ್ಲ, ರಾತ್ರಿ ವೇಳೆಯಲ್ಲಿ ಹೆದರಿದ ಒಂದು ಬಾನಾಡಿ ಮಾತ್ರ, ಆಗಸ ಬಾನಾಡಿಯೊಂದನ್ನು ತಡೆಯಲಾರದು. ನೀನು ನಿನ್ನ ಸೈಕಲ್ಲನ್ನು ಚಾಲನೆ ಮಾಡುತ್ತಿರು, ಆಕಾಶದ ಚಿಂತೆಯನ್ನು ಬಿಟ್ಟು ಬಿಡು' ಎಂದು ಹೇಳಲು ಬಯಸುತ್ತೇನೆ.

ಬಂಧುಗಳೇ, ಒಂದು ಪಕ್ಷಿಯ ಮೊಟ್ಟೆಯನ್ನು ಸಮುದ್ರ ತೇಲಿಸಿಕೊಂಡು ಹೋಗಿತ್ತು; ಆಗಿನಿಂದ ಅದು ಒಂದೇ ಸಮನೆ ಸಿಟ್ಟು ಮತ್ತು ದುಃಖದಿಂದ ತನ್ನ ಕೊಕ್ಕಿನಲ್ಲಿ ಮರಳನ್ನು ತುಂಬಿಕೊಂಡು ಸಮುದ್ರವನ್ನು ಮುಚ್ಚುವುದರಲ್ಲಿ ಮಗ್ನವಾಗಿದೆ; ಈ ಪಕ್ಷಿಯ ಕಥೆ ಸಹ ನಿಮಗೆ ತಿಳಿದಿರಬೇಕು. ನಿಮಗೆ ಆ ಪಕ್ಷಿಯ ಈ ಪ್ರಯತ್ನ ಕಂಡು ನಗು ಬರಬಹುದು; ನೀವು ಸಮುದ್ರದ ಪಕ್ಷ ವಹಿಸಬಹುದು.

ಆದರೆ ನನ್ನ ಅಭಿಪ್ರಾಯದಂತೆ, ನಾನು ಆಕಾಶವನ್ನು ತಡೆಯುತ್ತಿರುವ, ಸಮುದ್ರವನ್ನು ತನ್ನ ಕೊಕ್ಕಿನ ಮರಳಿನಿಂದ ಮುಚ್ಚುತ್ತಿರುವ ಆ ಮೂರ್ಖ ಪಕ್ಷಿಯ ಪರವಾಗಿಯೇ ಇದ್ದೇನೆ. ನನ್ನ ಈ ಅಭಿಪ್ರಾಯ ಭಾಲೂ ಉರ್ಫ್ ಬಾಲ ಗೋಪಾಲ ರಾಜೋರಿಯಾ ಬಗ್ಗೆಯೂ ಅನ್ವಯಿಸುತ್ತದೆ.



**– ಡಿ.ಎನ್. ಶ್ರೀನಾಥ್**
'ನವನೀತ'
2ನೇ ತಿರುವು, ಅಣ್ಣಾಜಿರಾವ್ ಲೇಔಟ್
ಮೊದಲಹಂತ, ವಿನೋಬಾನಗರ
ಶಿವಮೊಗ್ಗ – 577204

**Excerpt from Arun Shourie's**
**"EMINENT HISTORIANS"**
(Pages 250, 251 and 252){Revised and Enlarged Edition 2014}

---

The way that our historian deals with the blood-drenching assaults of Mahmud Ghazni and others is as typical as it is dainty:

> Even when Alberuni was writing his book a new wave of cultural diffusion into India was under way. *It had its violent side,* which the scientist recognized as he spoke of "the wonderful exploits" of Mahmud of Ghazni [1000-30] "by which the Hindus became like atoms of dust scattered in all directions and like the tale of old in the mouth of the people". *But the expansion of knowledge proceeded.* Alberuni goes on to tell us that when at Lahore, in his conversations with Hindu scholars, he himself began to expound the principles of science and logic (derived from the Hellenistic-Arabic tradition) "they flocked together round me from all parts, wondering and most eager to learn from me."[1]

The depredations of Mahmud Ghazni and others are just "a violent side". And there is the "expansion of knowledge" that took place as a result of the Muslim invaders. Not one word, now or later, about the centers of learning that these invaders pulverized. Not one word, now or later, of the legions of monks and scholars that they butchered. And do make a note of the use of the word

"Hindu" by Alberuni—for we shall soon see how our progressives deal with this inconvenience.

The "composite culture" is born. The word "Hindu" becomes a territorial signification, not a religious one—a slip there; we will soon see that, according to other eminences, the word *never* had a religious connotation at all till the missionary-type pasted that connotation on it in the 19th century! Hindi and Hindustani emerge. Amir Khusro becomes the harbinger and symbol of this "composite culture". "We see here a conception, perhaps, for the first time, so explicitly propounded of a composite culture being the distinguishing feature of India," Irfan Habib writes. "That religious barriers continued to exist is hardly to be contested: all cultures in the world have had internal tensions."[2] Just "internal tensions"? The pulverization of every sacred place; the massacre of hundreds of thousands; the extreme disabilities placed upon non-Muslim populations? Just "internal tensions" that are common to all cultures of the world?

"Yet Kabir, the Muslim weaver (c. 1510)," Irfan Habib reminds us, "was allowed his strongly monotheistic verses to condemn both Hinduism and Islam and their sacred ritual in the sharpest terms; and Nanak, his younger contemporary, allowed to form a religion independent of both Hinduism and Islam. These are facts surely indicative of conditions in which religious freedom too was seen as part of the cultural milieu of India."[3]

Is it possible that our Marxists have never read or even heard of what Guru Nanak himself had to say about Muslim invasions and Muslim rule?

> *Khuraasaan khasmaanaa kiyaa Hindustaan daraayaa.(*
>
> Having subjugated Khuraasaan, Baabar terrified Hindustaan
>
> *Aapai dos na deyee kartaa jam kar mugal chadaayaa(*
>
> So that blame does not come on Him, the Creator has sent the Mughal as the messenger of death

*Aitee maar payee karlaane tain kee darad na aayaa*

So great was the slaughter, such the agony of the people, even then You felt no compassion, Lord?

*Kartaa toon sabhnaa kaa soyee(*

O Lord, You are the Master of all

*Je sakoaa sakte kao maarey taa man ros na hoyee*

If some powerful man strikes another, one feels no grief

*Saktaa seehu maarey pai vagai khasmai saa pursaayee(*

But when a powerful tiger slaughters a flock of helpless sheep, its master must answer

*Ratan vigaar vigoe kutee muiaa saar na kaayee...(*

This jewel of a country has been laid waste and defiled by dogs, so much so that no one pays heed even to the dead...

Guru Nanak proceeds to describe how the oppressors shaved off the maidens, their "heads with braided hair, with vermillion marks in the parting;" how "their throats were choked with dust;" how they were cast out of their palatial homes, unable now to sit even in the vicinity of their homes; how those who had come to the homes of their husbands in palanquins, decorated with ivory, who lived in the lap of luxury, had been tied with ropes around their necks; how their pearl strings had been shattered; how the very beauty that was their jewel had now become their enemy—ordered to dishonor them, the soldiers had carried them off. "Since Babar's rule has been proclaimed," Guru Nanak wrote, "even the princes have no food to eat." Their sacred squares shattered, where will the Hindu women bathe, how will they worship? the Guru lamented. Dishonoured, how may they now apply the *tilak* on their foreheads? Some return home to inquire about the safety of their loved ones. Others are cursed to sit and cry out in pain. The invaders were, of course, to blame for what had befallen the people, the Guru said, but not only them: the rulers had lost themselves in luxury; the people had forgotten the

Creator: *Raam na kabhoo chetio hun kahan na milai khudaae*—They never remembered their Ram, and now they cannot even chant *Khudaae*.......

[ಈ ಇಂಗ್ಲಿಷ್ ಮೂಲದ ಕನ್ನಡ ಅನುವಾದ ಈ ಕೆಳಗಿದೆ.
ಅನುವಾದಕರು: **ಅಜ್ಜಂಪುರ ಮಂಜುನಾಥ**]

ಮೊಹಮ್ಮದ್ ಘಜನಿಯ ಮತ್ತು ಅಂತಹ ದಾಳಿಕೋರರ ಆಕ್ರಮಣಗಳನ್ನು, ಅವರು ಹರಿಸಿದ ರಕ್ತ ಪ್ರವಾಹವನ್ನು, ಈ 'ಮಹಾನ್' ಇತಿಹಾಸಕಾರ ಇರ್ಫಾನ್ ಹಬೀಬ್ ರಸಕವಳ ಎನ್ನುವಂತೆ ಭಕ್ಷ್ಯ-ಭೋಜ್ಯ ಸವಿಯುವಂತೆ ಚಿತ್ರಿಸುತ್ತಾರೆ:

"ಅಲ್ಬರೋನಿಯು ತನ್ನ ಗ್ರಂಥ ರಚನೆ ಮಾಡುವಾಗ ಸಹ ಭಾರತದಲ್ಲಿ ಸಾಂಸ್ಕೃತಿಕ ಪ್ರಸರಣದ ಹೊಸ ಅಲೆ ಎದ್ದಿತು. ಘಜನಿ ಮಹಮ್ಮದನ "ಬೆರಗು ಗೊಳಿಸುವಂತಹ ದಾಳಿಗಳಿಂದ ಹಿಂದೂಗಳು ಧೂಳಿನ ಕಣಗಳಂತೆ ಚದುರಿ ಹೋದರು. ಅದು ಜನರ ಬಾಯಿಯಲ್ಲಿ ಹಳೆಯ ಕಥೆಯಂತೆ ಎಲ್ಲೆಡೆ ಹರಡಿ ಎಂದೆಲ್ಲಾ ಅಲ್ಬರೂನಿಯು ಹೇಳಿರುವುದನ್ನು ಸಮಾಜ ವಿಜ್ಞಾನಿಗಳು ಗುರುತಿಸಿದ್ದಾರೆ. ಈ ದಾಳಿಗಳಿಗೆ ಹಿಂಸಾತ್ಮಕ ಆಯಾಮವೂ ಇತ್ತು. ಜ್ಞಾನ ಪ್ರಸಾರವನ್ನು ಮುಂದುವರಿಯಿತು. ತಾನು ಲಾಹೋರಿನಲ್ಲಿದ್ದಾಗ ಹಿಂದೂ ವಿದ್ವಾಂಸರೊಂದಿಗೆ ಮಾತನಾಡಿದ್ದನ್ನು ಅಲೆಕ್ಸಾಂಡರನ (ಸಾಮಾನ್ಯ ಯುಗ ಪೂರ್ವದ ೪ನೇಯ ಶತಮಾನದ) ಕಾಲದ ಮತ್ತು ಅರೇಬಿಯಾದ ಪರಂಪರೆಯ ವಿಜ್ಞಾನ ಮತ್ತು ತರ್ಕ ಶಾಸ್ತ್ರಗಳ ವ್ಯಾಖ್ಯಾನವನ್ನು ಮಾಡುವಾಗ, "ಎಲ್ಲ ಪ್ರದೇಶಗಳಿಂದ ಬಂದ ಹಿಂದೂ-ವಿದ್ವಾಂಸರು ನನ್ನ ಸುತ್ತ ಮುತ್ತಿಕೊಂಡರು ಮತ್ತು ನನ್ನಿಂದ ಅವುಗಳನ್ನು ಕಲಿಯಲು ತುಂಬಾ ತವಕವನ್ನು ವ್ಯಕ್ತಪಡಿಸಿದರು" ಎಂದು ಅಲ್ಬರೋನಿಯು ದಾಖಲಿಸಿದ್ದಾನೆ. (ಅದೇ ಗ್ರಂಥ, ಪುಟ ೬)

ಘಜನಿ ಮೊಹಮ್ಮದ್ ಮತ್ತು ಇತರ ದಾಳಿ-ಧ್ವಂಸ-ಲೂಟಿಗಳು ಕೇವಲ 'ಹಿಂಸಾತ್ಮಕ' ಮುಸ್ಲಿಂ ದಾಳಿಕೋರರ ಆಕ್ರಮಣಗಳಿಂದ 'ಜ್ಞಾನಪ್ರಸಾರ' ಆಯಿತು. ಈ ದಾಳಿಗಳಿಂದ ಧ್ವಂಸವಾದ ಪುಡಿಪುಡಿಯಾದ ಕಲಿಕಾ ಕೇಂದ್ರಗಳ ಬಗೆಗೆ – ವಿಶ್ವವಿದ್ಯಾಲಯಗಳ ಬಗೆಗೆ ಒಂದು ಮಾತಿಲ್ಲ. ಮುಂದೆಯೂ ಎಲ್ಲಿಯೂ ಒಂದು ಸಾಲು ಕಾಣುವುದಿಲ್ಲ. ಅಸಂಖ್ಯ ಬೌದ್ಧ-ಸನ್ಯಾಸಿಗಳ, ಹಿಂದೂ ವಿದ್ವಾಂಸರ ನರಮೇಧದ ಬಗೆಗೆ ಒಂದು ಮಾತಿಲ್ಲ, ಮುಂದೆಯೂ ಕಾಣುವುದಿಲ್ಲ.

ಇಲ್ಲೊಂದಿಷ್ಟು ನಿಂತು ಅಲ್ಬರೂನಿಯ ಬರಹಗಳಲ್ಲಿ 'ಹಿಂದೂ' ಪದ ವಿರುವುದನ್ನು ಗಮನಿಸಿರಿ, ಮುಂದೆ 'ಪ್ರಗತಿಶೀಲರ'-'ಇತಿಹಾಸಕಾರರ' ಕರಾಮತ್ತನ್ನು ಪರಾಮರ್ಶಿಸೋಣ.

ಇಲ್ಲಿ 'ಸಂಮಿಶ್ರ ಸಂಸ್ಕೃತಿ' ಉದಯಿಸುತ್ತದೆ! 'ಹಿಂದೂ' ಎಂಬ ಪದವು ಬರಿಯ ಗಡಿಗಳಿಗೆ ಸಂಬಂಧಿಸಿದ್ದು, ಅಷ್ಟೇ! ಅದು ಧರ್ಮ-ಮತಗಳಿಗೆ ಸಂಬಂಧಿಸಿದುದಲ್ಲ! ನಮ್ಮ 'ಮಹಾನ್' ಇತಿಹಾಸಕಾರರ ಪ್ರಕಾರ 'ಹಿಂದೂ' ಎಂಬ ಪದಕ್ಕೆ ಮತಧರ್ಮಗಳ ಸೂಚಿತಾರ್ಥವೆಂದಿಗೂ ಇರಲಿಲ್ಲ: ೧೯ನೆಯ ಶತಮಾನದಲ್ಲಿ ಕ್ರೈಸ್ತ ಮಿಷನರಿಗಳು ಅಂತಹ ಸೂಚಿತಾರ್ಥ ಬರುವಂತೆ ಬಳಸಿದರಂತೆ! ಅಷ್ಟೇ! ಹಿಂದೀ-ಹಿಂದೂಸ್ತಾನಿ ಪದಗಳು ಹುಟ್ಟಿದ್ದೇ ಹಾಗಂತೆ!!

ಹಿಂದೂ-ಮುಸ್ಲಿಂ ಸಂಮಿಶ್ರ ಸಂಸ್ಕೃತಿಯ ಪರಿಕಲ್ಪನೆ ಅಮೀರ್ ಖುಸ್ರೋನದ್ದು ಮತ್ತು ಅವನೇ ಭವಿಷ್ಯದ ಮುನ್ಸೂಚನೆ ನೀಡಿದ ಸಂಕೇತ ಪುರುಷ! ಹಬೀಬ್ ಸಾಹೇಬರು ಬರೆಯುತ್ತಾರೆ: "ಮೊದಲಬಾರಿಗೆ ನಾವಿಲ್ಲಿ ಸಂಮಿಶ್ರ ಸಂಸ್ಕೃತಿಯ ಪರಿಕಲ್ಪನೆಯನ್ನು-ಸುಸ್ಪಷ್ಟ ಲಕ್ಷಣಗಳನ್ನು ನೋಡುತ್ತೇವೆ. ಮತಧರ್ಮಗಳ ನಡುವಿನ ಅಡ್ಡಗೋಡೆಗಳು, ಇದ್ದರೂ ಇಲ್ಲವೇನೋ ಎನ್ನುವಂತೆ ಆಗಿಬಿಟ್ಟಿದ್ದವು. ಜಗತ್ತಿನೆಲ್ಲೆಡೆಯ ಸಂಸ್ಕೃತಿಗಳಿಗೆ ಆಂತರಿಕ ಉದ್ವಿಗ್ನತೆಗಳಿದ್ದವು, ಬಿಡಿ" (ಪುಟ೭).

ಕೇವಲ 'ಆಂತರಿಕ ಉದ್ವಿಗ್ನತೆ'ಗಳು ಮಾತ್ರವೇ, ಸಾಹೇಬರೇ? ಪ್ರತಿಯೊಂದು ಪವಿತ್ರ ಸ್ಥಾನವನ್ನು ಧ್ವಂಸ ಮಾಡಿದ್ದು, ಲಕ್ಷ ಲಕ್ಷ ಜನರ ನರಮೇಧ, ಮುಸ್ಲಿಮೇತರ ಸಮುದಾಯಗಳಿಗೆ ಹಾಕಿದ ನಿರ್ಬಂಧ-ಜಿಜಿಯಾ ಇತ್ಯಾದಿ, ಎಲ್ಲವೂ ಎಲ್ಲವೂ ಬರಿಯ 'ಆಂತರಿಕ ಉದ್ವಿಗ್ನತೆ'ಗಳು ಮಾತ್ರ!! ಮತ್ತು ಇದು ಜಗತ್ತಿನೆಲ್ಲೆಡೆಯ ಸಂಸ್ಕೃತಿಗಳಲ್ಲಿ ಇದ್ದದ್ದೇ ಬಿಡಿ!!

ಮುಂದ ಇರ್ಫಾನ್ ಸಾಹೇಬರು, ಕಬೀರ ದಾಸರನ್ನು (ಸಾಮಾನ್ಯ ಯುಗದ ೧೫೧೦) ನೆನಪಿಸುತ್ತಾರೆ:

"ಹಿಂದೂ ಧರ್ಮ ಮತ್ತು ಇಸ್ಲಾಂಗಳೆರಡನ್ನೂ, ಅವುಗಳ ಮತಾಚರಣೆಗಳನ್ನೂ ತೀಕ್ಷವಾದ ಭಾಷೆಯಲ್ಲಿ ಖಂಡಿಸಲು ಮತ್ತು ತಮ್ಮ ಏಕದೇವತಾವಾದದ ಉಗ್ರವಾದ ದೋಹಾಗಳನ್ನು ಹೇಳಲು ಮುಸ್ಲಿಂ ನೇಕಾರ ಕಬೀರರಿಗೆ ಅವಕಾಶ ದೊರೆಯಿತು. ಕಬೀರರ ನಂತರದ ಅವಧಿಯ ಗುರುನಾನಕರು ಹಿಂದೂಧರ್ಮ ಮತ್ತು ಇಸ್ಲಾಂ, ಇವೆರಡಕ್ಕೂ ಭಿನ್ನವಾದ ಮತವೊಂದನ್ನು ಸ್ಥಾಪಿಸಲೂ ಅವಕಾಶ ದೊರೆಯಿತು. ಭಾರತದ ಸಾಮಾಜಿಕ-ಸಾಂಸ್ಕೃತಿಕ ಪರಿಸರದ ಸಂಮಿಶ್ರ ಸಂಸ್ಕೃತಿಯ ಭಾಗವಾದಂತಹ ಧಾರ್ಮಿಕ ಸ್ವಾತಂತ್ರ್ಯದ ಸಂಕೇತಗಳನ್ನಾಗಿ ಈ ಮೇಲಿನ ಸತ್ಯಾಂಶಗಳನ್ನು ಗಮನಿಸಬಹುದು" (ಪುಟ ೭).

ಮುಸ್ಲಿಮರ ಆಕ್ರಮಣಗಳಿಗೆ, ಮುಸ್ಲಿಮರ ಆಳ್ವಿಕೆಗೆ ಸಂಬಂಧಿಸಿದಂತೆ ಸ್ವತಃ ಗುರುನಾನಕರೇ ಏನು ಹೇಳಿದ್ದಾರೆ, ಎಂಬುದನ್ನು ಈ ಮಾರ್ಕ್ಸ್ವಾದಿಗಳು ಓದಿಲ್ಲ ಎಂದುಕೊಳ್ಳಬೇಕೇ, ಕೇಳಿಯೇ ಇಲ್ಲ ಎಂದುಕೊಳ್ಳಬೇಕೇ, ಅರ್ಥವಾಗುತ್ತಿಲ್ಲ! (ಇದೇ ಕೃತಿಯ ಅಧ್ಯಾಯ ೧೩ರ ಪುಟ ೯೭ ನೋಡಿ).

ಗುರುನಾನಕರು ಮುಸ್ಲಿಂ ಆಕ್ರಮಣಕಾರರ ದಬ್ಬಾಳಿಕೆ-ಹಿಂಸೆಗಳನ್ನೂ ಚಿತ್ರಿಸಿದ್ದಾರೆ: "ದಾಳಿಕೋರರು ಹಿಂದೂ ಸ್ತ್ರೀಯರ ತಲೆಗಳನ್ನು ಬೋಳಿಸಿದರು, ಕುಂಕುಮ ಸಿಂಧೂರವಿದ್ದ ಜಡೆಕೂದಲು ರಾಶಿ ರಾಶಿ ಬಿದ್ದಿತು; ಮಣ್ಣನ್ನು-ಕೆಸರನ್ನು ಆ ಹೆಣ್ಣುಮಕ್ಕಳ ಬಾಯಿಗೆ ತುರುಕಲಾಗಿತ್ತು; ಭವ್ಯವಾದ ಮನೆಗಳಲ್ಲಿ ವಾಸಿಸುತ್ತಿದ್ದ ಹೆಂಗಸರನ್ನು ಓಡಿಸಲಾಗಿತ್ತು' ಅವರೆಲ್ಲಾ ಅವರ ಆ ಮನೆಗಳ ಬಳಿಯೂ ಕೂರುವಂತಿರಲಿಲ್ಲ; ಅವರಲ್ಲಿ ಎಷ್ಟೋ ಜನ ತಮ್ಮ ಗಂಡನ ಮನೆಗೆ ಆಲಂಕೃತರಾಗಿ ಪಲ್ಲಕ್ಕಿಗಳಲ್ಲಿ ಬಂದಿದ್ದರು, ವೈಭವದ ಜೀವನ ನಡೆಸಿದ್ದರು. ಈಗ ಅವರ ಕುತ್ತಿಗೆಗಳಿಗೆ ಹಗ್ಗಗಳನ್ನು ಬಿಗಿದು ಅವರನ್ನು ಎಳೆದುಕೊಂಡು ಹೋಗಲಾಗುತ್ತಿದೆ; ಅವರ ಕುತ್ತಿಗೆಯಲ್ಲಿದ್ದ ಮುತ್ತಿನ ಹಾರಗಳು ಚೆಲ್ಲಾಪಿಲ್ಲಿಯಾಗಿವೆ; ಯಾವ ಅಲೌಕಿಕ ಸೌಂದರ್ಯವು ಅವರಿಗೆ ಆಭರಣವಾಗಿತ್ತೋ, ಅದೇ ಅವರ ಶತ್ರುವಾಗಿದೆ. ಅವರ ಶೀಲಹರಣಕ್ಕೆ – ಅಪಮಾನಕ್ಕೆ ಅದೇ ನೆಪವಾಗಿದೆ. ದಾಳಿಕೋರ ಸೈನಿಕರು ಅವರನ್ನೆಲ್ಲಾ ಎಳೆದುಕೊಂಡು ಹೋಗುತ್ತಿದ್ದಾರೆ; ಬಾಬರನ ಆಳ್ವಿಕೆಯ ಘೋಷಣೆಯಾದಮೇಲೆ, ಸಾಮಾನ್ಯರಿರಲಿ, ಹಿಂದೆ ರಾಜಮನೆತನದವರಾಗಿದ್ದವರಿಗೇ ತಿನ್ನಲು ಆಹಾರವಿಲ್ಲ; ಅಳಿದುಳಿದ ಹಿಂದೂ ಸ್ತ್ರೀಯರು ಈಗ ಎಲ್ಲಿ ಸ್ನಾನ ಮಾಡುತ್ತಾರೆ? ಅವರ ಪೂಜಾಗೃಹಗಳೇ ಧ್ವಂಸವಾಗಿವೆ! ಈಗ ಅವರು ಪೂಜೆ ಹೇಗೆ ಮಾಡುತ್ತಾರೆ? ತಲೆ ಬೋಳಿಸಲ್ಪಟ್ಟು ಅವಮಾನಿತರಾಗಿರುವ ಅವರು ಈಗ ಸಿಂಧೂರವನ್ನು ಹೇಗೆ ತಾನೇ ಧರಿಸುತ್ತಾರೆ? ಕೆಲವರು ತಮ್ಮ ಪ್ರೀತಿಪಾತ್ರರ ಗತಿ ಏನಾಯಿತೆಂದು ನೋಡಲು ಮನೆಗಳಿಗೆ ಹಿಂದಿರುಗಿದ್ದಾರೆ! ಉಳಿದ ಎಷ್ಟೋ ಜನ ದಿಕ್ಕುತೋಚದೆ ಶಾಪಹಾಕುತ್ತಿದ್ದಾರೆ, ನೋವಿನಿಂದ-ದುಃಖದಿಂದ ಅಳುತ್ತಿದ್ದಾರೆ. ಜನತೆಯ ಈ ದುಃಸ್ಥಿತಿಗೆ ದಾಳಿಕೋರರನ್ನಲ್ಲದೆ ಇನ್ನಾರನ್ನು ಶಪಿಸಬೇಕು? ಈಗ ಆಳುತ್ತಿರುವವರು (ಬಾಬರನ ಕಡೆಯವರು) ವಿಲಾಸದಲ್ಲಿ ಮುಳುಗಿದ್ದಾರೆ. ಜನರು ದೇವರನ್ನೇ ಮರೆತಿದ್ದಾರೆ! ಖುದಾನ ಹೆಸರನ್ನು ಹೇಳಲೂ ಆಗುತ್ತಿಲ್ಲ! ರಾಮ್‌ನ ಕಭೂ ಚೇತಿಯೋ ಹೂಂ ಕಣ್ಣಾನ ಮಿಲ್ಲೈ ಖುದಾಯೀ".

❑

– ಅಜ್ಜಂಪುರ ಮಂಜುನಾಥ
ಕ್ಯೂ 301, ಫೇರ್‌ಮಾಂಟ್ ಅಪಾರ್ಟ್‌ಮೆಂಟ್
24ನೇ ಮೇನ್, ಸೆಕ್ಟರ್-2
ಎಚ್‌ಎಸ್‌ಆರ್ ಲೇಔಟ್
ಬೆಂಗಳೂರು – 560 102

*Poems by:* **G P Basavaraju**
*Translated into English:*
*Prof. L. S. Shankara Swamy*
*And*
*Dr. Nalini Chander*

## 1. Buddha came

They were sitting waiting for Buddha's coming
Three days and three nights
under the peepal tree had assembled the entire town

The last light had melted, the evening
of different hues in their eyes, Buddha
May come, caressing their warm bodies
Never had they felt the coolness
of the evening breeze that had blown
Rocked branch after branch, gently,
Leaf after leaf fluttered, they looked
withtheir eyes wide open

Sprang and spread everywhere a new song
Never had they heard that song , from the sky
Darkness descended on earth, spreading a thin sheet
Covered they themselves with it , softly.

Words faded away, silence in waves
embraced everything, look they around
Giving up all their reserve;
Beating of heart, lines of worry
Pain of branding, saw, heard, astonished,
Found they their own selves.
Hearts opened, blossomed the fragrant
Flowers, wings opened and flew the birds
To the open sky, to the clear blueness
Surged and surged the inner stream filling the spirit.

Buddha came becoming himself in each one
Becoming himself a focal point of consciousness.

## 2. The compassionate

A small sparrow
Holding a small insect
Winged its way to the nest

Opening the mouth
Wide as a universe
The chicks swallowed
The motherly morsel
Watching thus
The insect
the mother
the chicks
The eyes of the compassionate Buddha
welled up without words

## 3. Meditation

To the disciple
Who shut his eyes
And stood before him
Buddha spoke
Open
Like the ebb and flow of the ocean
Rise
Like the sky grown beyond its bounds
Like a river
Giving itself to the cool breeze
Like the stars
Opening their eyes in the night sky

See
Everything
With eyes wide open
With mind in focus

Look!
On the riverside
The waiting crane
In intense meditation

To be or not be caught
Is left to the river,
To the fish playing in water.

Meditation
The breath of your life



**Prof. Shankara Swamy L. S.**
# 160, SAHANA, CFTRI Road, Mysore - 570026

**Dr. Nalini Chander**
# 68, 6th B Cross, Brindavan Extension, Ist Stage, Mysore - 570 020

# ಹದಿಹರೆಯದ ಒಬ್ಬಂಟಿ ಪಯಣ:
# ಹರೆಯದೆದೆಯೊಳು ನೂರು ಅನುಭವದಚ್ಚನೊತ್ತುವ ಯಾನ

*– ಸಿ.ಎಸ್. ಭೀಮರಾಯ*

**ಎಸ್**.ಎಫ್. ಯೋಗಪ್ಪನವರ್ ನಾಡಿನ ಪ್ರಮುಖ ಕಥೆಗಾರ, ಕಾದಂಬರಿಕಾರ ಮತ್ತು ಅನುವಾದಕರು. ಕಳೆದ ಮೂರು ದಶಕಗಳಿಂದ ಕಥೆ, ಕಾವ್ಯ, ಕಾದಂಬರಿ, ಅನುವಾದ ಕ್ಷೇತ್ರಗಳಲ್ಲಿ ಅವರು ಈಗಾಗಲೇ ಅನೇಕ ಮಹತ್ವದ ಕೃತಿಗಳನ್ನು ಪ್ರಕಟಿಸಿದ್ದಾರೆ. ಅವರ ಬರಹ ವಿಸ್ಮಯಗೊಳಿಸುವಂತಿದೆ. ಯೋಗಪ್ಪನವರ್ ಯಾವುದೇ ಪಂಥ, ಚಳವಳಿಗಳ ಮುಂಚೂಣಿಯಲ್ಲಿ ನಿಂತು ಅವುಗಳ ಪ್ರೇರಣೆ ಮತ್ತು ಪ್ರಭಾವಗಳಿಂದ ಕೃತಿ ರಚನೆ ಮಾಡಿದವರಲ್ಲ. ಆದರೆ ಅವರು ಇವೆಲ್ಲವುಗಳಿಂದ ದೂರ ನಿಂತು ಮುಕ್ತ ಮನಸ್ಸಿನಿಂದ ಸದ್ದುಗದ್ದಲವಿಲ್ಲದೆ ಬರವಣಿಗೆಯಲ್ಲಿ ತೊಡಗಿಕೊಂಡವರು. ಯೋಗಪ್ಪನವರ್ ಸಾಲು ಸಾಲು ಕೃತಿಗಳನ್ನು ಪ್ರಕಟಿಸಿದವರಲ್ಲ. ಅವರದು ರಭಸದ ಬರವಣಿಗೆಯಲ್ಲ. ಈ ಮೂರು ದಶಕಗಳಲ್ಲಿ ಅವರು ಪ್ರಕಟಿಸಿರುವ ಕೃತಿಗಳ ಸಂಖ್ಯೆ ಹತ್ತನ್ನು ಮೀರುವುದಿಲ್ಲ. ಇದು ಅವರ ಸೃಜನಶೀಲ ಸಂಯಮವನ್ನು ಸೂಚಿಸುತ್ತದೆ. ವೈಯಕ್ತಿಕವಾಗಿ ಅವರೊಡನೆ ನನ್ನ ಸಂಪರ್ಕ ಬಹಳ ಕಡಿಮೆ. ಅವರ ಕೃತಿಗಳಿಂದಲೇ ನನಗೆ ಅವರ ಪರಿಚಯವಿದೆ. ಅವರ ಕಥೆ, ಕಾವ್ಯ, ಅನುವಾದ ಮತ್ತು ಕಾದಂಬರಿಗಳೆಲ್ಲವನ್ನೂ ನಾನು ಓದಿದ್ದೇನೆ.

ಅಮೆರಿಕನ್ ಲೇಖಕ ಜೆ. ಡಿ. ಸಾಲಿಂಜರ್‌ನು ಬರೆದ 'ದಿ ಕ್ಯಾಚರ್ ಇನ್ ದಿ ರೈ' ಕಾದಂಬರಿಯನ್ನು ಕನ್ನಡದ ಪ್ರಮುಖ ಲೇಖಕ ಎಸ್.ಎಫ್. ಯೋಗಪ್ಪನವರ್ 'ಹದಿಹರೆಯದ ಒಬ್ಬಂಟಿ ಪಯಣ' ಎಂಬ ಹೆಸರಿನಲ್ಲಿ ಕನ್ನಡಕ್ಕೆ ಅನುವಾದಿಸಿದ್ದಾರೆ. ಇದು ಸುಮಾರು ಅರವತ್ತೈದು ವರ್ಷಗಳ ಹಿಂದೆ ಪ್ರಕಟವಾದ ಕೃತಿ ಈಗ ಕನ್ನಡಕ್ಕೆ ಅನುವಾದಗೊಂಡು ಪ್ರಕಟವಾಗಿದೆ. ಬಹುಮಟ್ಟಿಗೆ ಇಲ್ಲಿ ಜೆ. ಡಿ. ಸಾಲಿಂಜರ್ ತನ್ನ

ಮಾನಸಿಕ ಚರಿತ್ರೆಯನ್ನೆ ಬಳಸಿಕೊಂಡಿದ್ದಾನೆ. ಈ ಕಾದಂಬರಿಯನ್ನು ಓದಿ ಮುಗಿಸಿದಾಗ ತನ್ನ ಸಹಜ ಪ್ರತಿಭೆಯನ್ನು ಸಂಪೂರ್ಣವಾಗಿ ಬಳಸಿಕೊಳ್ಳದೆ ಹೋದ ಕಾದಂಬರಿಕಾರ ಎನ್ನುವ ಭಾವನೆಯನ್ನು ಮೂಡಿಸುತ್ತಾನೆ ಜೆ. ಡಿ. ಸಾಲಿಂಜರ್. ಸಾಲಿಂಜರ್ ಖ್ಯಾತಿಯನ್ನು ಗಳಿಸಿದ್ದು ಅವನ 'ದಿ ಕ್ಯಾಚರ್ ಇನ್‌ದಿ ರೈ' 1951 ರಲ್ಲಿ ಕಾದಂಬರಿಯಾಗಿ ಪ್ರಕಟವಾದಾಗ. ಈ ಕಾದಂಬರಿ ರಚನೆಗಾಗಿ ಅವನ ಹತ್ತು ವರ್ಷಗಳ ಪರಿಶ್ರಮವಿದೆ. ಅವನು ಬರೆದಿದ್ದು ಇದೊಂದೇ ಕಾದಂಬರಿ. ಇಂದಿಗೂ ಇದು ಅವನ ಅತ್ಯುತ್ತಮ ಕೃತಿ ಎಂದು ಪರಿಗಣಿಸಲಾಗಿದೆ. ಇಲ್ಲಿಯವರೆಗೂ ಈ ಕಾದಂಬರಿಯ ಅರವತ್ತೈದು ದಶಲಕ್ಷ ಪ್ರತಿಗಳು ಮಾರಾಟವಾಗಿವೆ. ಇಂಗ್ಲಿಷ್‌ನಲ್ಲಿ ಕಳೆದ ಅರವತ್ತೈದು ವರ್ಷಗಳಲ್ಲಿ ಪ್ರಕಟವಾಗಿರುವ ಮಹತ್ವದ ಕಾದಂಬರಿಗಳಲ್ಲೊಂದು 'ದಿ ಕ್ಯಾಚರ್ ಇನ್‌ದಿ ರೈ'. ಈಗಾಗಲೇ ಈ ಕಾದಂಬರಿಯ ಕುರಿತು ಸಾಕಷ್ಟು ದೀರ್ಘವಾದ ಚರ್ಚೆಗಳು ಇಂಗ್ಲಿಷ್‌ನಲ್ಲಿ ನಡೆದಿವೆ; ಪ್ರಮುಖ ವಿಮರ್ಶಕರು ಬರೆದಿದ್ದಾರೆ.

ಜೆರೋಮ್ ಡೇವಿಡ್ ಸಾಲಿಂಜರ್ ಇಪ್ಪತ್ತನೇ ಶತಮಾನದ ಅತ್ಯಂತ ಪ್ರಭಾವಶಾಲಿ ಅಮೆರಿಕನ್ ಲೇಖಕ. ಜೆ. ಡಿ. ಸಾಲಿಂಜರ್ ಜನವರಿ 1, 1919ರಂದು ನ್ಯೂಯಾರ್ಕ್‌ನಲ್ಲಿ ಜನನ. ಅವನು ಹದಿನೈದನೇ ವಯಸ್ಸಿನಲ್ಲಿಯೇ ಬರವಣಿಗೆ ಆಸಕ್ತಿ ಹೊಂದಿದ್ದನು. ಸಾಲಿಂಜರ್ ಜನವರಿ 27, 2010ರಲ್ಲಿ ನ್ಯೂ ಹ್ಯಾಂಪ್ಶೈರ್‌ನ ಕಾರ್ನಿಷ್‌ನಲ್ಲಿ ಕೊನೆಯುಸಿರೆಳೆದನು. ಅವನದು ಏಕಾಂಗಿ ಜೀವನಶೈಲಿ. ಸಾಲಿಂಜರ್ ಕನ್ನಡದ ಅನೇಕ ಬರಹಗಾರರ ಮೇಲೆ ಪ್ರಭಾವ ಬೀರಿದ್ದಾನೆ. ಈತ ಬರೆದದ್ದು ಕಡಿಮೆ. ಒಂದು ಕಾದಂಬರಿ, ಕೆಲವು ಸಣ್ಣಕಥೆಗಳು. ಇಷ್ಟೇ ಈತನ ಸಾಹಿತ್ಯ. ಸಾಲಿಂಜರ್‌ನ ಜೀವನದಲ್ಲಿ ಒಂಟಿತನವೇ ಅವನ ಸಂಗಾತಿ.

ನಾನು ಇಂಗ್ಲಿಷ್ ಸಾಹಿತ್ಯದ ವಿದ್ಯಾರ್ಥಿಯಾಗಿ ಜೆ. ಡಿ. ಸಾಲಿಂಜರ್‌ನ 'ದಿ ಕ್ಯಾಚರ್ ಇನ್‌ದಿ ರೈ' ಕಾದಂಬರಿಯನ್ನು ಹತ್ತು ವರ್ಷಗಳ ಹಿಂದೆಯೇ ಓದಿದ್ದೇನೆ. ಈಗ ಎಸ್.ಎಫ್. ಯೋಗಪ್ಪನವರ್ ಈ ಕಾದಂಬರಿಯನ್ನು ಕನ್ನಡಕ್ಕೆ ಹೇಗೆ ಅನುವಾದಿಸಿದ್ದಾರೆಂದು ತುಂಬಾ ಕುತೂಹಲದಿಂದ ಮತ್ತೊಮ್ಮೆ ಓದಲು ಕೈಗೆತ್ತಿಕೊಂಡೆ.

ಮನುಷ್ಯ ಸಹಜ ಕಾತರ, ಹೊಸ ಸಂವೇದನೆಗಳು ಇನ್ನೊಂದು ಭಾಷೆಗೆ ಬರುವಂತೆ ಮಾಡುತ್ತವೆ. ಅನುವಾದಗಳು ಈ ಬಗೆಯ ಕಾತರತೆಯಿಂದಾಗಿಯೇ ಹುಟ್ಟಿಕೊಳ್ಳತ್ತವೆ. ಭಾಷಾಂತರಗಳು ಆಧುನಿಕ ಕನ್ನಡ ಸಾಹಿತ್ಯವನ್ನು ಬೆಳೆಸುವಲ್ಲಿ ಯಾವಾಗಲೂ ಮಹತ್ವದ ಪಾತ್ರವನ್ನು ವಹಿಸುತ್ತ ಬಂದಿವೆ. ಆಧುನಿಕ ಮತ್ತು ಆಧುನಿಕೋತ್ತರ ಕನ್ನಡ ಸಾಹಿತ್ಯದಲ್ಲಿಯಂತೂ ಅಮೆರಿಕನ್ ಇಂಗ್ಲಿಷ್ ಸಾಹಿತ್ಯ ಬೀರಿದ ಪ್ರಭಾವ ಗಮನಾರ್ಹ. ಅನುವಾದ ಎಂಬುದು ಕೂಡ ಮೂಲ ಸೃಷ್ಟಿಯಷ್ಟೇ

ಕಷ್ಟದ ಕೆಲಸ. ಅನ್ಯಭಾಷೆಯ ಕೃತಿಯನ್ನು ಅದರಲ್ಲೂ ಕಾದಂಬರಿಯನ್ನು ಕನ್ನಡಕ್ಕೆ ತರ್ಜುಮೆ ಮಾಡುವಾಗ ಮುಖ್ಯವಾಗಿ ಅನುವಾದಕನಿಗೆ ಎರಡೂ ಭಾಷೆಗಳ ಮೇಲೆ ಸಮಾನ ಪ್ರಭುತ್ವ ಇರಬೇಕಾಗುತ್ತದೆ. ಇಲ್ಲವಾದರೆ, ಮೂಲದ ಆಶಯಗಳನ್ನು ಅಷ್ಟೇ ಜತನವಾಗಿ ಹಿಡಿದುಕೊಡಲು ಸಾಧ್ಯವಾಗಲಾರದು. ಈ ಕಷ್ಟದ ಕೆಲಸವನ್ನು ತುಂಬಾ ಶ್ರದ್ಧೆಯಿಂದ ಮಾಡಿದವರು ಎಸ್.ಎಫ್. ಯೋಗಪ್ಪನವರ್. ಆಂಗ್ಲ ಭಾಷೆಯ ಮೇಲೆ ಅವರದು ಅನ್ಯಾದೃಶ್ಯವಾದ ಪ್ರಭುತ್ವವಿದೆಯೆನ್ನುವುದಕ್ಕೆ ಈ ಅನುವಾದ ಕೃತಿಯೇ ಉತ್ತಮ ನಿದರ್ಶನ.

ಜೆ.ಡಿ. ಸಾಲಿಂಜರ್ ಬರವಣಿಗೆಯ ದನಿ ಬನಿಯನ್ನು ಸಹಜವಾಗಿ ಮೂಡಿಸುವಲ್ಲಿ ಎಸ್.ಎಫ್. ಯೋಗಪ್ಪನವರ್ ಸಾಕಷ್ಟು ಯಶಸ್ವಿಯಾಗಿದ್ದಾರೆ. ಅವರ ಗದ್ಯಕ್ಕೆ ಹದಿಹರೆಯದ ಯುವಕ– ಯುವತಿಯರ ತವಕ, ತಳಮಳ, ತಲ್ಲಣಗಳನ್ನು ಹಿಡಿದಿಡಬಲ್ಲ ಪಾರದರ್ಶಕ ಗುಣವಿದೆ. ಇದು ಜೆ.ಡಿ. ಸಾಲಿಂಜರ್ ಕಾದಂಬರಿ ಅಷ್ಟೇ ಅಲ್ಲ, ಎಸ್.ಎಫ್. ಯೋಗಪ್ಪನವರ್ ಕನ್ನಡದ ಕಾದಂಬರಿಯೂ ಹೌದು ಎಂಬುದನ್ನು ಈ ಕೃತಿಗೆ ಸಂಬಂಧಿಸಿದಂತೆ ಅವರ ಸಮರ್ಥ ಅನುವಾದದ ಸಮೀಪದ ವರ್ಣನೆಯಾಗಬಹುದು. ಈ ಕಾದಂಬರಿ ಆಂಗ್ಲ ಭಾಷೆಯಿಂದ ಅನುವಾದವಾಗಿದೆ ಎಂದು ಅನಿಸದಷ್ಟು ಸಹಜತೆ ಇಲ್ಲಿದೆ. ಅದು ಯೋಗಪ್ಪನವರ್ ಅನುವಾದದಲ್ಲಿ ಸಾಧಿಸಿದ ಸ್ವೋಪಜ್ಞತೆಗೆ ಸಾಕ್ಷಿಯಾಗಿದೆ.

ಈ ಕಾದಂಬರಿಯ ಕಥಾವಸ್ತು, ಶಾಲೆಯಿಂದ ಹೊರಹಾಕಲ್ಪಟ್ಟ ಹದಿನಾರು ವರ್ಷಗಳ ವಿದ್ಯಾರ್ಥಿಯ ಮೂರು ದಿನಗಳ ಕಥೆಯಾಗಿದೆ. ಹಾಗೆಯೇ ಅಮೆರಿಕನ್ ಜನರ ಜೀವನಕ್ರಮ, ಶೀಲ–ಅಶ್ಲೀಲ, ಗಂಡು–ಹೆಣ್ಣಿನ ಪ್ರೀತಿ, ದೈಹಿಕ ಸಂಬಂಧಗಳ ಚರ್ಚೆ,ಕಿಶೋರಾವಸ್ಥೆಯ ಲುಬ್ಧ ಭಾವುಕತೆಯ ಅಪರಿಪಕ್ವ ಪ್ರೇಮದಲ್ಲಿ ಲೈಂಗಿಕತೆ ಮೆಲ್ಲನೆ ಮೂಡಿಕೊಳ್ಳುವುದನ್ನು ಗಮನಿಸುತ್ತೇವೆ. 'ದಿ ಕ್ಯಾಚರ್ ಇನ್‌ದಿ ರೈ' ಲೈಂಗಿಕ ಸಮಸ್ಯೆಯಲ್ಲಿ ಅಂತರ್ಗತವಾದ ಹಲವು ಸಮಸ್ಯೆಗಳನ್ನು ವಸ್ತುಗಳನ್ನಾಗಿ ಆರಿಸಿಕೊಂಡ ಕಾದಂಬರಿ. ಈ ಕಾದಂಬರಿಯಲ್ಲಿ ಇಪ್ಪತ್ತಾರು ಅಧ್ಯಾಯಗಳಿವೆ. ಇವುಗಳ ನಡುವೆ ಇರುವ ಸಂಬಂಧ ಬಹು ಗಾಢವಾದುದು. ಕಥಾನಾಯಕ ಈ ಅಧ್ಯಾಯಗಳಿಗೆಲ್ಲ ಸಾಮಾನ್ಯ ಅಂಶ. ಏಕಾಕಿತನ, ಹಿಂಸೆ, ಅವಮಾನ, ಪ್ರೀತಿ, ಪ್ರೇಮ, ಸ್ನೇಹ, ನಂಬಿಕೆ, ವಿಶ್ವಾಸ, ತುಂಟತನ, ಲೈಂಗಿಕತೆ, ಕಾಯಿಲೆ, ಕುಡಿತ ಮತ್ತು ವೇಶ್ಯಾವಾಟಿಕೆಗಳು ಗಂಭೀರವಾಗಿ ಈ ಕಾದಂಬರಿಯಲ್ಲಿ ಚರ್ಚೆಯಾಗಿವೆ. ಅಪ್ರಬುದ್ಧ ಪ್ರಣಯ, ಕಲ್ಪನೆ, ವಾಸ್ತವ, ಮನುಷ್ಯ ಸಂಬಂಧ, ಕಷ್ಟ, ಸುಖ, ವಿಚಾರಶೀಲ ಸಹವಾಸ, ನೆನಪು, ಯಾತನೆ, ಹಿಂಸೆ, ಕನಸು, ಸಂಗೀತ, ಕ್ರಿಸ್‌ಮಸ್ ಹಬ್ಬ, ಹಣ, ಕ್ರೀಡೆಗಳಿಗೆ ಸಂಬಂಧಿಸಿದಂತೆ ಬಹುಮುಖೀ ಕಥನಗಳನ್ನು ಈ ಕಾದಂಬರಿ ಕಟ್ಟಿಕೊಡುತ್ತದೆ.

ಕಾದಂಬರಿಯ ನಿರೂಪಣಾ ವಿಧಾನದಲ್ಲಿ ಒಂದು ಪ್ರಯೋಗ ಮಾಡಲಾಗಿದೆ. ಹೋಲ್ಡನ್ ಕಾಲ್‌ಫೀಲ್ಡ್‌ನ ಮೂಲಕ ಪ್ರಥಮ ಪುರುಷ ನಿರೂಪಣೆಯನ್ನು ನಿರ್ವಹಿಸಲಾಗಿದೆ. ಈ ಕಾದಂಬರಿ ಒಂದು ರೋಚಕ ಕಥಾನಕವನ್ನು ಹೊಂದಿದೆ. ಲೇಖಕರು ನಾಯಕ ಪ್ರಧಾನವಾದ ಕಥೆಗಳಲ್ಲಿ ಕಾಣುವ ರೋಚಕತೆಯನ್ನು ಎಚ್ಚರಿಕೆಯಿಂದಲೇ ನಿರ್ವಹಿಸಿದ್ದಾರೆ. ವರದಿ ಮತ್ತು ಕಥನದ ತಂತ್ರಗಳನ್ನು ವಿಶಿಷ್ಟ ರೀತಿಯಲ್ಲಿ ಬೆರೆಸಿ ಇಲ್ಲಿ ಒಂದು ನಿರೂಪಣಾ ವಿಧಾನವನ್ನು ರೂಪಿಸಿಕೊಂಡಿದ್ದಾರೆ. ಸಮಕಾಲೀನ ವಸ್ತುವನ್ನು ತೆಗೆದುಕೊಂಡು ಅದನ್ನು ಹೀಗೊಂದು ಕಥಾನಕವನ್ನಾಗಿಸುವುದಕ್ಕೆ ಇದೊಂದು ಹೊಸ ಮಾದರಿಯನ್ನು ಒದಗಿಸುತ್ತದೆ.

'ದಿ ಕ್ಯಾಚರ್ ಇನ್ ದಿ ರೈ' ಕಾದಂಬರಿಯ ನಾಯಕ ಹದಿನೇಳರ ವಯಸ್ಸಿನ ಮಧ್ಯಮ ವರ್ಗದ ಒಬ್ಬ ಅಮೆರಿಕನ್ ಹುಡುಗ. ಅವನ ಎದೆಯಲ್ಲಿ ಹತ್ತು ದಿಕ್ಕಿನ ಗಾಳಿಯ ಮೊರೆತವಿದೆ. ಬಾಲ್ಯದಲ್ಲೇ ಅವನು ವಿಚಿತ್ರ ಶಕ್ತಿಯುಳ್ಳ, ಸ್ವಭಾವದ, ಬಂಡಾಯ ಮನೋಭಾವದ ಹುಡುಗ. ಹೋಲ್ಡನ್ ಥೇಟ್ ನಮ್ಮ ಪಕ್ಕದ ಮನೆಯ ಹುಡುಗನಂತೆ ಕಾಣುತ್ತಾನೆ. ಪ್ರೀತಿಯ ಪಣತಿ ಕಣ್ಣಲ್ಲಿ ಹಚ್ಚಿ ಕತ್ತಲ ಕಂದಕಗಳಲ್ಲಿ ನಡೆಯುತ್ತಾನೆ. ಯಾತ್ರೆಯ ಏಕಾಂತದಲ್ಲಿ ಗಟ್ಟಿಯಾಗುತ್ತಾನೆ. ಈ ಕಾದಂಬರಿಯು ಕಥಾನಾಯಕ ಹೋಲ್ಡನ್‌ನ ಹದಿಹರೆಯದ ಬದುಕಿನ ದ್ವಂದ್ವ ಮನಃಸ್ಥಿತಿಯನ್ನು ಅದ್ಭುತವಾಗಿ ಚಿತ್ರಿಸುತ್ತದೆ. ಬಹುಮಟ್ಟಿಗೆ ಆತ್ಮವೃತ್ತ. ಆದುದರಿಂದ ಹುಡುಗನು ಬೆಳೆದು ತರುಣನಾಗುವ ಪ್ರಕ್ರಿಯೆ ಅದ್ಭುತವಾಗಿ ಮೂಡಿ ಬಂದಿದೆ. ಹರೆಯದ ಜೀವನ ಧಾವಂತದಲ್ಲಿ ವ್ಯಕ್ತಿಯ ಮನೋವೃತ್ತಿಗಳು ಬೀರುವ ಪರಿಣಾಮಗಳ ಕುರಿತು ಕಾಳಜಿ ಈ ಕಾದಂಬರಿಯಲ್ಲಿದೆ. ಅಸಹಜ ವಿಚಾರ-ಯೋಜನೆಗಳ ಮೂಲಕ ಬದುಕನ್ನು ತರ್ಕದ ಅಂಚಿಗೆ ಕರೆದೊಯ್ಯುವ ಹಂಬಲದ ವಿಫಲ ವ್ಯಕ್ತಿಗಳು ಇಲ್ಲಿ ನಮಗೆ ಸಹಜವಾಗಿ ಎದುರಾಗುತ್ತಾರೆ.

ಹೋಲ್ಡನ್ ಕಾಲ್‌ಫೀಲ್ಡ್ ನಿರುತ್ಸಾಹದ ಭಾವನೆಗಳು, ತೀವ್ರ ಖಿನ್ನತೆ ಮತ್ತು ಸಿನಿಕಿಸಂ ಸಾಲಿಂಜರ್‌ನ ಸ್ವಂತ ಏಕಾಂಗಿ ಜೀವನದಿಂದ ಹೊರಹೊಮ್ಮುತ್ತವೆ. ಜೆ.ಡಿ. ಸಾಲಿಂಜರ್ ಮತ್ತು ಕಾದಂಬರಿಯ ಪಾತ್ರಧಾರಿ ಹೋಲ್ಡನ್ ನಡುವೆ ಹಲವಾರು ಸಾಮ್ಯತೆಗಳಿವೆ. ಸ್ವಪ್ರತಿಷ್ಠೆಯ ಸಮಾಜದಲ್ಲಿ ಕಪಟವರಿಯದ, ಆದರೆ ತನ್ನದೇ ರೀತಿಯಲ್ಲಿ ಪ್ರತಿಷ್ಠೆಯನ್ನು ಬೆಳೆಸಿಕೊಂಡ ಹುಡುಗನ ಕಥೆ ಇದು. ಹೋಲ್ಡನ್ ಚೈತನ್ಯಶೀಲವಾದ, ಹೊರ ಆಕರ್ಷಣೆಯ, ಲವಲವಿಕೆಯ ಹುಡುಗ. ಹೋಲ್ಡನ್‌ನ ಕಥೆಯನ್ನು ಸಾಲಿಂಜರ್ ಹೊರಗಿನಿಂದಲೂ ಹೇಳುತ್ತಾನೆ. ಹಾಗೆಯೇ ಪಾತ್ರದ ಮನಸ್ಸಿನೊಳಕ್ಕೂ ಓದುಗರನ್ನು ಕರೆದೊಯ್ಯುತ್ತಾನೆ. ಹೋಲ್ಡನ್‌ನ ಕಹಿ ಅನುಭವಗಳು,

'ಅಥಾರಿಟಿ'ಯ ವಿರುದ್ಧ ಬೆಳೆಯುತ್ತಹೋದ ಬಂಡಾಯ ಮನೋಧರ್ಮ. ಬದುಕಿನಲ್ಲಿ ಅರ್ಥವೇ ಇಲ್ಲ ಎಂದು ಅವನಿಗೆ ಎನ್ನಿಸಿದೆ, ಅತೀವ ಏಕಾಕಿತನ ಕಾಡುತ್ತದೆ.

ಹೋಲ್ಡನ್ ಪೆನ್ಸಿ ಪ್ರೆಪ್ ಶಾಲೆಯಲ್ಲಿ ಪಡೆದ ಶಿಕ್ಷಣ, ಪಟ್ಟ ಪಾಡು ಇಲ್ಲಿ ವರ್ಣಿತವಾಗಿವೆ. ಶಾಲೆ-ಕಾಲೇಜುಗಳ ಉಪನ್ಯಾಸ, ಉಪದೇಶಗಳಿಂದ ನರಕದ ದೃಶ್ಯಗಳು ಅವನ ಮನಸ್ಸಿನಲ್ಲಿ ನೆಲೆಸುತ್ತವೆ. ಒಂದು ಕಡೆ ದುಮುಗುಡುವ ತಾರುಣ್ಯದ ಉತ್ಕಟ ಕಾಮದ ಸೆಳೆತ, ಮತ್ತೊಂದು ಕಡೆ ಪಾಪದ ಭಯ. ಅವನು ಈ ತುಯ್ತದಿಂದ ಕಷ್ಟಪಡುತ್ತಾನೆ. ಧಾರ್ಮಿಕವಲ್ಲದ (ಸೆಕ್ಯುಲರ್) ಸಾಹಿತ್ಯದ ಅಭ್ಯಾಸ, ಹಲವು ನಾಡುಗಳಲ್ಲಿ ಪ್ರವಾಸ-ಇವುಗಳ ಮೂಲಕ ಮನಸ್ಸಿನ ಪಂಜರದಿಂದ ಹೊರಬರಲು ಅವನು ಹೆಣಗುತ್ತಾನೆ. ಅವನು ಯೌವನದ ಬಯಕೆ, ಬೇಡಿಕೆಗಳು ಮೊಳಕೆಯೊಡೆದ ವಯಸ್ಸಿನ ಹುಡುಗ. ಹೋಲ್ಡನ್ ಸ್ಯಾಲ್ಲಿಯನ್ನು ಅಗಾಧವಾಗಿ ಪ್ರೀತಿಸುತ್ತಾನೆ. ಹೋಲ್ಡನ್‌ನೊಂದಿಗೆ ಅನೇಕ ಸ್ನೇಹಿತರಿದ್ದಾರೆ. ಒಬ್ಬೊಬ್ಬರ ಮನೆಯ ಪರಿಸ್ಥಿತಿ ಒಂದೊಂದು ಬಗೆಯದು. ಹೋಲ್ಡನ್ ಮುಕ್ತ ಮನಸ್ಸಿನ ಹುಡುಗ; ಪಲಾಯನವಾದಿ. ಯಾವುದನ್ನೂ ಬಚ್ಚಿಟ್ಟುಕೊಂಡು ಬದುಕುವುದು ಅವನಿಗೆ ಇಷ್ಟವಿಲ್ಲ. ಅವನು ನಿತ್ಯ ತಲೆ ತುಂಬ ನೂರಾರು ಹಸಿಗನಸುಗಳನ್ನು ತುಂಬಿಕೊಂಡು ಅನೇಕ ಕಡೆ ಅಲೆಯುತ್ತಾನೆ. ಒಂದು ಬಗೆಯ ತಹತಹ, ಕಳವಳ, ಅತೃಪ್ತಿಗೆ ಸಿಲುಕುತ್ತಾನೆ. ಸಹಜವಾಗಿ ತಾರುಣ್ಯದ ಗುಣಗಳನ್ನೇ ಈ ಕಾದಂಬರಿ ಓದುಗರ ಮುಂದೆ ತೆರೆದು ತೋರಿಸುತ್ತದೆ.

ಈ ಕಾದಂಬರಿಯ ಘಟನೆಗಳು ಮೂರು ದಿನಗಳಿಗೆ ಮಿತಗೊಂಡಿದ್ದರೂ ಪಾತ್ರಗಳನ್ನು ನಾವು ನಿಕಟವಾಗಿ ತಿಳಿಯುವುದಿಲ್ಲ ಎಂದೇನೂ ಇಲ್ಲ. ಅವರ ಮನಸ್ಸಿನ ವ್ಯಾಪಾರಗಳನ್ನು ಕಾದಂಬರಿ ಎಷ್ಟರಮಟ್ಟಿಗೆ ಬಿಡಿಸುತ್ತದೆ ಎಂದರೆ, ನಮ್ಮ ನಿಜಜೀವನದಲ್ಲಿ ನಮಗೆ ಸಮೀಪವಾದವರನ್ನು ತಿಳಿಯುವುದಕ್ಕಿಂತ ಚೆನ್ನಾಗಿ ಇವರನ್ನು ಅರ್ಥಮಾಡಿಕೊಳ್ಳುತ್ತೇವೆ. ಇದರೊಂದಿಗೆ ಪಾತ್ರಗಳ ನೆನಪುಗಳು, ಸಂಭಾಷಣೆಗಳು, ವ್ಯಕ್ತಿ ಜೀವನವನ್ನು ದಾಟಿ ಮನುಷ್ಯನ ಬದುಕಿನ ವಿನ್ಯಾಸಗಳನ್ನು ತೆರೆದಿಡುತ್ತವೆ. ಒಂದು ನಗರದ ಜೀವನದ ಚಲನವಲನಗಳು, ಸದ್ದುಗದ್ದಲಗಳು ಎಲ್ಲವನ್ನು ಕಾದಂಬರಿ ಓದುಗರಿಗೆ ಮನಗಾಣಿಸುತ್ತದೆ. ಇವೆಲ್ಲವುಗಳ ನಡುವೆ ಅಮೆರಿಕನ್ ನಗರಜೀವನ ವಿಚ್ಛಿದ್ರವಾಗುತ್ತಿರುವುದರ ಅನುಭವವನ್ನು ಈ ಕಾದಂಬರಿ ತಂದುಕೊಡುತ್ತದೆ.

ಕಾದಂಬರಿಯ ತಂತ್ರವೂ ಒಂದು ವಿಶಿಷ್ಟ ಸಾಧನೆಯೇ. ಭೂತಕಾಲ, ವರ್ತಮಾನಗಳು, ಪ್ರಥಮ ಪುರುಷ-ಉತ್ತಮ ಪುರುಷಗಳು, ಅಮೆರಿಕ-ನ್ಯೂಯಾರ್ಕ್‌ನಲ್ಲಿನ ಮ್ಯೂಜಿಯಂಗಳು, ವಾಸ್ತವ ಆಗುಹೋಗುಗಳು-ನೆನಪುಗಳು ಬಿಡಿಸಲಾಗದಂತೆ ಹೆಣೆದುಕೊಂಡಿವೆ. ಬದುಕಿನ ಪ್ರೀತಿ ಉದ್ದಕ್ಕೂ ನಿರೂಪಣೆಯನ್ನು ನಡೆಸಿದೆ. ಪ್ರೇಮದ ಉತ್ಕಟತೆ, ಚೆಲುವು, ಶ್ರೀಮಂತಿಕೆಗಳು ಗಾಢವಾಗಿ

ಅನುಭವವಾಗುತ್ತವೆ. ಮನುಷ್ಯ ಬಾಂಧವ್ಯಗಳು ನಮ್ಮನ್ನು ಬೆಚ್ಚಗಾಗಿಸುತ್ತವೆ. ಸಾಲಿಂಜರ್ 'ಕಾಮ'ಕ್ಕೆ ಬಹಳ ಪ್ರಾಮುಖ್ಯತೆಯನ್ನು ಈ ಕಾದಂಬರಿಯಲ್ಲಿ ನೀಡಿದ್ದಾನೆ. ಇದು ಬದುಕಿನ ಸ್ವರೂಪವನ್ನು ನಿರ್ಧರಿಸುವ ಶಕ್ತಿ, ಇದರ ಬಗ್ಗೆ ಓದುಗರು ಯಾವುದೇ ರೀತಿಯ ಸಂಕೋಚಪಡುವ ಅಗತ್ಯವಿಲ್ಲ. ಆದರೆ ಕಾಮವನ್ನು ಕಾಮವಾಗಿ ಅವನು ವೈಭವೀಕರಿಸಿಲ್ಲ. ಬದುಕನ್ನು ಒಪ್ಪಿಕೊಳ್ಳಬೇಕು, ಸಹಜವಾಗಿ ಅನುಭವಿಸಬೇಕು. ಬದುಕನ್ನು ಸಂಕುಚಿತಗೊಳಿಸಬಾರದು ಮತ್ತು ತಿರಸ್ಕರಿಸಬಾರದು ಎನ್ನುವುದು ಲೇಖಕನ ನಿಲುವು.

'ದಿ ಕ್ಯಾಚರ್ ಇನ್‌ದಿ ರೈ' ಕಾದಂಬರಿಯ ಭಾಷೆಯನ್ನೇ ಪ್ರತ್ಯೇಕವಾಗಿ ಅಧ್ಯಯನ ಮಾಡಬೇಕು, ಅದು ಈ ಕಾದಂಬರಿಯಲ್ಲಿ ಅಷ್ಟು ಮಹತ್ವದ ಅಂಶ. ಪದಗಳ ಜೋಡಣೆಯ ಕ್ರಮ, ವಾಕ್ಯದಲಯ ಇದಕ್ಕಾಗಿ ಲೇಖಕ ಅಧಿಕ ಶ್ರಮಿಸಿದ್ದಾನೆ. ಒಂದೊಂದು ಅಧ್ಯಾಯದಲ್ಲಿ ಒಂದೊಂದು ಪಾತ್ರದ ಯೋಚನೆ, ಮಾತುಗಳಲ್ಲಿ, ಭಾಷೆಯು ಒಂದೊಂದು ರೀತಿಯಲ್ಲಿ ಬಳಕೆಯಾಗಿದೆ. ಒಂದು ವಿಶಿಷ್ಟ ಉದಾಹರಣೆಯಾಗಿ ಸನ್ನಿ ಮತ್ತು ಹೋಲ್ಡನ್ ನಡುವಿನ ಸಂಭಾಷಣೆ ಗಮನಿಸಿ: "ನಾನು ಮತ್ತೆ ಕುಳಿತೆ ಹಾಗೂ ಹಳೆಯ ಸಂಭಾಷಣೆ ಮುಂದುವರಿಯುವಂತೆ ಮಾಡಿದೆ. ಆಕೆ ಕೆಟ್ಟ ಸಂಭಾಷಣಾಕಾರಳಾಗಿದ್ದಳು. 'ನೀನು ಪ್ರತಿ ರಾತ್ರಿ ಕೆಲಸ ಮಾಡುವೆಯಾ?' ನಾನು ಆಕೆಯನ್ನು ಕೇಳಿದೆ–ನಾನು ಇದನ್ನು ಕೇಳಿದನಂತರ ಆಕೆಗೆ ಒಂದಿಷ್ಟು ಭಯವಾಯಿತು. 'ಯಾ?' ಆಕೆ ರೂಮಿನಲ್ಲೆಲ್ಲ ಸುತ್ತಹತ್ತಿದಳು. ಅಲ್ಲಿ ಡೆಸ್ಕ್ ಮೇಲೆ ಇದ್ದಮೆನೂ ತೆಗೆದುಕೊಂಡು ಓದಿದಳು. 'ನೀನು ಹಗಲು ಏನು ಮಾಡುತ್ತೀ?' ಆಕೆ ತನ್ನ ಭುಜಗಳನ್ನು ಹಾರಿಸಿದಳು. ಆಕೆ ಬಹಳಷ್ಟು ಬಡಕಲು ಆಗಿದ್ದಳು. 'ಮಲಗುತ್ತೇನೆ. ಸಿನೆಮಾ ನೋಡುತ್ತೇನೆ'. ಆಕೆ ಆ ಮೆನೂವನ್ನು ಮತ್ತೆ ಡೆಸ್ಕ್‌ಮೇಲೆ ಇಟ್ಟಳು ಹಾಗು ನನ್ನ ಕಡೆ ನೋಡಿದಳು. 'ಹೆ, ಏಳು ಮಾಡೋಣ. ನನ್ನ ಹತ್ತಿರ ಅಷ್ಟು' ......."(ಪುಟ–125). ಸಾಲಿಂಜರ್ ಪ್ರಯೋಗಿಸಿರುವ ಅಮೆರಿಕನ್ ಗ್ರಾಮೀಣ ಭಾಷೆಯಲ್ಲಿ ಅಲ್ಲಿಯ ಜೀವಿಗಳ ಭಾವಸ್ಪಂದನ ನಿಚ್ಚಳವಾಗಿ ಕಂಡುಬರುತ್ತದೆ. ಸಾಮಾನ್ಯ ಜನತೆಯ ಎದೆಯಿಂದ ಹೊರಬರುವ ಇಂಥ ಭಾಷೆ ಅವರ ಬದುಕಿನ ಭಾಷ್ಯವೂ ಆಗುತ್ತದೆ. ಅಮೆರಿಕನ್ ಇಂಗ್ಲಿಷ್ ಭಾಷೆಯ ಬೆಳವಣಿಗೆಯ ಎಲ್ಲ ಹಂತಗಳನ್ನು ಈ ಸಂಭಾಷಣೆಯ ರೂಪ ಮತ್ತು ಬಳಕೆಯಾಗಿರುವ ಶಬ್ದಗಳಲ್ಲಿ ಕಾಣಬಹುದು. ಇಲ್ಲಿನ ಬೇರೆ ಬೇರೆ ಭಾಗಗಳ ಶೈಲಿಗಳ ವೈಶಿಷ್ಟ್ಯದಿಂದಾಗಿ ಈ ಕಾದಂಬರಿಯನ್ನು ಕಥೆಗಾಗಿ ಮಾತ್ರವೇ ಓದುವುದು ಸಾಧ್ಯವೇ ಇಲ್ಲ. ಕಾದಂಬರಿ ವಾಸ್ತವತೆಯನ್ನು ನಿರೂಪಿಸುವುದು ಹೇಗೆ, ವಸ್ತುಗಳಿಗೂ ಅವುಗಳ ಹೆಸರುಗಳಿಗೂ, ಶಬ್ದಗಳಿಗೂ

ಮತ್ತು ಜಗತ್ತಿಗೂ ಇರುವ ಸಂಬಂಧವೇನು ಎನ್ನುವ ಪ್ರಶ್ನೆಗಳನ್ನು ಕೇಳಿಕೊಳ್ಳುವುದು ಅನಿವಾರ್ಯ. ಜೆ.ಡಿ. ಸಾಲಿಂಜರ್‌ನ ಭಾಷೆ ಅಮೆರಿಕನ್ ಜನರ ಆಡುಭಾಷೆಗೆ ಹತ್ತಿರವಾದದ್ದು. ಅವನು ಅಮೆರಿಕದ ಪ್ರಾದೇಶಿಕ ಭಾಷೆಯನ್ನು ಬಳಸಿಕೊಂಡಿದ್ದಾನೆ. ತನ್ನ ಜನತೆಯ ಮಾತಿನಲ್ಲೆ ಕಾವ್ಯಾಂಶ ಉಂಟು ಎಂದು ಅವನ ನಂಬಿಕೆ. ಸಾಹಿತ್ಯ ಕೃತಿಯಾಗಿ 'ದಿ ಕ್ಯಾಚರ್ ಇನ್‌ದಿ ರೈ' 'ಫಾರಂ'ನ ಪರಿಪೂರ್ಣತೆಯನ್ನು ಸಾಧಿಸುತ್ತದೆ. ಈ ಕಾದಂಬರಿ ಓದುವಿಕೆಯೇ ಒಂದು ರೋಮಾಂಚಕ ಅನುಭವ. ಬದುಕಿಗೆ ವಿಶಿಷ್ಟ ಸ್ಪಂದನ, ಪಾತ್ರಗಳು, ಸನ್ನಿವೇಶ, ಕ್ರಿಯೆಗೆ ಜೋಡಿಸಿದ ಸ್ಥಳಗಳು, ವರ್ಣನೆ, ಶೈಲಿಗಳೆಲ್ಲವನ್ನು ಅದ್ಭುತವಾಗಿ ಹೊಂದಿಕೊಂಡ ಕಾದಂಬರಿ 'ದಿ ಕ್ಯಾಚರ್ ಇನ್‌ದಿ ರೈ'. ಸಾಂಕೇತಿಕತೆಯನ್ನು ಸಾಲಿಂಜರ್ ಈ ಕಾದಂಬರಿಯಲ್ಲಿ ಶಕ್ತಯುತವಾಗಿ ಬಳಸಿಕೊಂಡಿದ್ದಾನೆ. ಕಾದಂಬರಿಕಾರ ಪಾತ್ರಗಳ ಸ್ವಭಾವದ ಸತ್ಯವನ್ನು ಅಥವಾ ಸ್ಥಿತಿಯನ್ನು ಸೂಚಿಸಲು ಸಾಂಕೇತಿಕತೆಯನ್ನು ಬಳಸಿದ್ದಾನೆ. ಕಲೆಯ ದೃಷ್ಟಿಯಿಂದ ಇದನ್ನು ಮೀರಿಸುವ ಕಾದಂಬರಿಗಳು ಇಂಗ್ಲಿಷ್–ಕನ್ನಡದಲ್ಲಿ ಸಿಗುವುದು ವಿರಳ.

ಈ ಕಾದಂಬರಿಯಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವೆಂದರೆ ಫೀಬಿಯ ಪಾತ್ರ ನಿರೂಪಣೆ. ಕಾದಂಬರಿ ಪೂರ್ವಾರ್ಧವನ್ನು ಈ ಹುಡುಗಿ ತುಂಬಿಬಿಡುತ್ತಾಳೆ. ಅವಳು ತನ್ನ ಸಹೋದರ ಹೋಲ್ಡನ್‌ನ ಕುರಿತು ಅಧಿಕ ಕಾಳಜಿ ವಹಿಸುತ್ತಾಳೆ. ಸ್ಪೆನ್ಸರ್, ಸ್ಟ್ರಾಡ್ ಲೇಟರ್, ಆಕ್ಲಿ, ಆ್ಯಂಟೋಲಿನಿ, ಜೇನ್ ಗಲಘರ್, ಸ್ಯಾಲ್ಲಿ ಹೇಸ್, ಲಿಲಿಯನ್, ಹ್ಯಾರ್ಝೆಲ್, ಡಿ.ಬಿ., ಆ್ಯಲ್ಲಿ, ಫೀಬಿ, ಸನ್ನಿ, ಟೀನಾ, ಜನೈನೆ, ವೆಲೆನ್ಸಿಯಾ, ಮಾರಿಸ್–ಮೊದಲಾದ ಪಾತ್ರಗಳು ಸಹ ಕಣ್ಣಿಗೆ ಕಟ್ಟುವಂತೆ ಸ್ಫುಟಗೊಳ್ಳುತ್ತ ಹೋಗುತ್ತವೆ. ಘಟನೆಗಳಿಗೆ ಅವರ ಪ್ರತಿಕ್ರಿಯೆಗಳು ಅವರ ಸ್ವಭಾವವನ್ನೂ ಪ್ರಕಟಗೊಳಿಸುತ್ತವೆ, ಕ್ರಿಯೆಯನ್ನೂ ಮುಂದುವರೆಸುತ್ತವೆ.

ಅನುವಾದಕರು ಮುಂಬೈ ಕರ್ನಾಟಕದ ಗ್ರಾಮೀಣ ಪ್ರದೇಶದ ಹಲವಾರು ಪದಗಳನ್ನು ಈ ಕಾದಂಬರಿಯಲ್ಲಿ ಬಳಸಿದ್ದಾರೆ. ಉದಾಹರಣೆಗೆ: ಅಂಜಿಬುಟ್ಟಿ, ಹಡಬೆ, ಹಡದರ್ಲಿ, ತಂಬೂ ಊರುವುದು, ಗಫಾ ಹೊಡೆಯುವುದು, ಮಡಸಲು ವರ್ತನೆ, ಹರಿವಾಣದ ಮುದುಕಿ, ಕುದ್ಲಗೇಡಿ, ಹೆಡ್ಡ, ಹದ್ನೆಂಟಗೆ ಹುಟ್ಟಿದವ, ಮಿಂಡ್ರಿ ಮಕ್ಕಳು, ಸೂಳೆಗೆ ಹುಟ್ಟಿದವ, ಹಡಿಪ್ಯಾಲಿ, ಜಾಬಾದಿ ಆಸಾಮಿ, ಮಂದಬುದ್ಧಿಯ ಮಡ್ಡಿ, ಮುಕಳಿ, ಯಕ್ರ, ಲಪೂಟರು, ಕುಯಿಕ್ ಮಲ್ಲಿ–ಮೊದಲಾದ ನೂರಾರು ಪದಗಳನ್ನು ಅನುವಾದಕರು ಬಳಸಿದ್ದಾರೆ. ಗ್ರಾಂಥಿಕ ಭಾಷೆಯಲ್ಲಿ ಇವುಗಳ ಅರ್ಥ ಹುಡುಕುವುದು ಬಹು ಕಷ್ಟ. ಈ ಬಗೆಯ ವಿಶಿಷ್ಟ ಶಬ್ದಗಳ ಪ್ರಯೋಗ ಕಾದಂಬರಿಯಲ್ಲಿ ಅಲ್ಲಲ್ಲಿ ಕಾಣಸಿಗುತ್ತವೆ. ಪ್ರತ್ಯೇಕವಾಗಿ ಎತ್ತಿ ನೋಡುವಾಗ ಈ ಶಬ್ದಗಳ ಅರ್ಥ

ಕಾಣಲಿಕ್ಕಿಲ್ಲ. ಆದರೆ ಅವು ಪ್ರಯೋಗವಾದ ಸಂದರ್ಭದ ಹಿನ್ನೆಲೆಯಲ್ಲಿ ಪರಿಭಾವಿಸಿದಾಗ ಇಂಥ ಶಬ್ದಗಳಿಗಿರುವ ವಿಶಿಷ್ಟ ಅರ್ಥ ತಕ್ಷಣ ಹೊಳೆಯುತ್ತದೆ. ಈ ಬಗೆಯ ಹಲವಾರು ಶಬ್ದಗಳನ್ನು ಅನುವಾದದಲ್ಲಿ ಬಳಸಿರುವ ಯೋಗಪ್ಪನವರ್ ಅವುಗಳಲ್ಲಿ ಕೆಲವನ್ನು ತಾವೇ ಸೃಷ್ಟಿ ಮಾಡಿದ್ದಾರೆ. ಅಮೆರಿಕದ ನ್ಯಾಯಾರ್ಕ್ ಮತ್ತು ಮ್ಯಾನ್‌ಹ್ಯಾಟನ್ ದೇಶಿ ಭಾಷೆಯ ಕೆಲವು ಪದಗಳನ್ನು ತಾವು ಕನ್ನಡಕ್ಕೆ ಅನುವಾದಿಸುವಾಗ ಎದುರಿಸಿದ ಗೊಂದಲಗಳ ಕುರಿತು ಅವರು ವಿವರಿಸಿದ್ದಾರೆ. ಅನುವಾದಕ್ಕೊಂದು ಮಾದರಿಯಾಗಿರುವ ಈ ಕೃತಿ ಅನುವಾದದ ಸಾಧ್ಯತೆಗಳನ್ನು ಹಿಗ್ಗಿಸಿದೆ. ಒಂದು ಉತ್ತಮ ಅನುವಾದ ಕೃತಿಯನ್ನು ನಾವು ನಮ್ಮದೇ ಭಾಷೆಯ ಕೃತಿ ಎಂಬಂತೆ ಓದಿಕೊಳ್ಳುತ್ತೇವೆ. ಇದು ಉತ್ತಮ ಅನುವಾದದ ಒಂದು ಗುಣಲಕ್ಷಣ.

ಕನ್ನಡಕ್ಕೆ ಇದೊಂದು ಹೊಸ ಮಾದರಿ. ಈ ಕಾದಂಬರಿಯನ್ನು ಕನ್ನಡದ ಓದುಗರಿಗೆ ಒದಗಿಸಿ ಎಸ್. ಎಫ್. ಯೋಗಪ್ಪನವರ್ ಒಳ್ಳೆಯ ಕೆಲಸ ಮಾಡಿದ್ದಾರೆ. ಇದಕ್ಕಾಗಿ ನಾವು ಅವರಿಗೆ ಅಭಿನಂದನೆಗಳನ್ನು ಸಲ್ಲಿಸಬೇಕು. ಮುಂಬೈ ಕರ್ನಾಟಕದ ಎಷ್ಟೋ ಬಳಕೆಯ ಪದಗುಚ್ಛಗಳನ್ನು ಬರವಣಿಗೆಗೆ ತಂದಿದ್ದಾರೆ. ಇದು ಕೂಡ ಗಮನಾರ್ಹವಾದ ಸಂಗತಿಯಾಗಿದೆ. ಮೂಲ ಕೃತಿಯ ಆಶಯವನ್ನು ಕಡೆಗಣಿಸದೆ, ಅದಕ್ಕೆ ಕಿಂಚಿತ್ತೂ ಅಪಚಾರವಾಗದಂತೆ ಕನ್ನಡ ಭಾಷೆಗೆ ಅನುವಾದಿಸುವುದು ಕ್ಲಿಷ್ಟವಾದ ಸವಾಲೇ ಆಗಿದೆ. ಈ ನಿಟ್ಟಿನಲ್ಲಿ ಅಮೆರಿಕನ್ ಲೇಖಕ ಜೆ.ಡಿ. ಸಾಲಿಂಜರ್‌ನ 'ದಿ ಕ್ಯಾಚರ್ ಇನ್‌ದಿ ರೈ' ಕಾದಂಬರಿಯನ್ನು ಯೋಗಪ್ಪನವರ್ ಸಮರ್ಥವಾಗಿ ಕನ್ನಡಕ್ಕೆ ಅನುವಾದಿಸಿದ್ದಾರೆ. ಇಂಗ್ಲಿಷ್ ಭಾಷೆಯಲ್ಲಿರುವ ಮೂಲ ಕೃತಿಯೊಳಗೆ ಕಂಡುಬರುವ ಹೆಪ್ಪುಗಟ್ಟಿರುವ ಮೌನದಲ್ಲಿ ಸಹಜವಾಗಿಯೇ ಅಂತರ್ಗತವಾಗಿರುವ ಅರ್ಥಗಳನ್ನು ಕನ್ನಡದಲ್ಲಿ ಹಿಡಿದಿಡುವ ಪ್ರಕ್ರಿಯೆಯಲ್ಲಿ ಎದುರಾಗುವ ಸಂದಿಗ್ಧಗಳು ಮತ್ತು ಬಿಕ್ಕಟ್ಟುಗಳ ಬಗ್ಗೆ ನಿದರ್ಶನಗಳನ್ನು ನೀಡುತ್ತ ಅವುಗಳನ್ನು ತಮ್ಮ ಪ್ರಾಸ್ತಾವಿಕ ಮಾತುಗಳಲ್ಲಿ ಅನುವಾದಕರು ಚೆನ್ನಾಗಿ ವಿವರಿಸಿದ್ದಾರೆ. ಇದಕ್ಕೆ ಅವರು ಕೆಲವು ಉದಾಹರಣೆಗಳ ಮೂಲಕ ಸ್ಪಷ್ಟೀಕರಣ ನೀಡಿದ್ದಾರೆ.

ನಾನು ಓದಿದ ಮತ್ತು ನನ್ನ ಮನಸ್ಸನ್ನು ತೀವ್ರವಾಗಿ ಘಾಸಿಗೊಳಿಸಬಲ್ಲ ಕೆಲವೇ ಕೆಲವು ಕಾದಂಬರಿಗಳಲ್ಲಿ ಈ ಕಾದಂಬರಿಗೆ ಅಗ್ರಸ್ಥಾನವಿದೆ. ಇದು ಜೀವ ಮಿಡಿಯುವ ಕಾದಂಬರಿ. ಅಮೆರಿಕನ್ ಜನರ ಜೀವನ ಮೌಲ್ಯಗಳಿಗೆ ಕನ್ನಡಿ ಹಿಡಿದಿದೆ. ಒಂದು ದೃಶ್ಯವನ್ನು ವರ್ಣಿಸಲಿ, ಸನ್ನಿವೇಶವನ್ನು ವರ್ಣಿಸಲಿ, ಪ್ರಯಾಣವನ್ನು ವರ್ಣಿಸಲಿ–ವರ್ಣನೆಯೇ ವರ್ಣಿಸುವ ವಸ್ತುವಾಗುತ್ತದೆ. ಬರಹದಲ್ಲಿ ಭಾವ ಮಿಡಿಯುತ್ತದೆ. ವಾಸ್ತವ ಪಾತ್ರಸೃಷ್ಟಿ, ಅದರ ನಿರ್ವಹಣೆ, ಅಂತಹ ಸನ್ನಿವೇಶಗಳ

ನಿರ್ವಹಣೆಗಳಲ್ಲಿ ಸಾಲಿಂಜರ್‌ನ ಸೃಜನಶೀಲ ಪ್ರತಿಭೆ ಅಸಾಧಾರಣ ಶೈಲಿಯಲ್ಲಿ ಮಿಂಚುತ್ತದೆ. ಭಾಷೆ ಸಂಕೇತ– ರೂಪಕ– ಸಾದೃಶ್ಯಗಳಲ್ಲಿ ಧ್ವನಿಪೂರ್ಣವಾಗುತ್ತದೆ. ವಿಚಾರ, ಭಾವನೆ, ದರ್ಶನಗಳನ್ನು ಒಟ್ಟಿಗೆ ಹಿಡಿದುಕೊಡುವ ಮತ್ತು ಹೊಸ ನಿರೂಪಣೆಯ ಈ ಅದ್ಭುತ ಕಾದಂಬರಿ ಓದುಗನನ್ನು ಬಹುಕಾಲ ಕಾಡುವ ಕೃತಿ.



**– ಸಿ.ಎಸ್. ಭೀಮರಾಯ**
ಆಂಗ್ಲ ಉಪನ್ಯಾಸಕರು
**ಅ/ಔ. ಎನ್ .ಎಸ್. ಜಾಗಿರದಾರ್,**
*ಲಕ್ಷ್ಮೀ ನಗರ, ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಹತ್ತಿರ,*
*ಶಹಾಪುರ, ಜಿ॥ ಯಾದಗಿರಿ–585223*
*ಮೊ. ನಂ: 9741523806/9008438993.*
e–mail: csbhimaraya123@gmail.com





2019ರ ಸಾಲಿನ ಗೌರವ ಪ್ರಶಸ್ತಿ ಪ್ರಧಾನ ಸಮಾರಂಭ
ದಿನಾಂಕ: 19-12-2019



2018ರ ಸಾಲಿನ ಪುಸ್ತಕ ಬಹುಮಾನ ಪ್ರಧಾನ ಸಮಾರಂಭ
ದಿನಾಂಕ: 19-12-2019



ಕಮ್ಮಟವನ್ನು ಉದ್ಘಾಟಿಸುತ್ತಿರುವ ತುಮಕೂರು ವಿವಿ ಕುಲಪತಿ ಪ್ರೊ. ಎಸ್. ಸಿದ್ದೇಗೌಡ, ಪ್ರೊ. ಕೆ.ಎನ್. ಗಂಗಾನಾಯಕ್, ಪ್ರೊ. ಜಿ. ಪಿ. ಶಿವರಾಂ, ಶ್ರೀ ಎಂ.ಎಸ್. ಚೈತ್ರ ಉಪಸ್ಥಿತರಿದ್ದರು





ಭಾಷಾಂತರ ಕಮ್ಮಟ: ಕುಕ್ಕೆ ಶ್ರೀ ಸುಬ್ರಹ್ಮಣ್ಯೇಶ್ವರ ಮಹಾವಿದ್ಯಾಲಯ
ಸುಬ್ರಹ್ಮಣ್ಯ, ಕಡಬ ತಾಲ್ಲೂಕು, ದಕ್ಷಿಣ ಕನ್ನಡ - 574 328



ಭಾಷಾಂತರ ಕಮ್ಮಟ: ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜು
ಉಜಿರೆ, ದ.ಕ. ಜಿಲ್ಲೆ




ನುಡಿ ಸಾಮರಸ್ಯ–ಭಾಷಾಂತರ ಕಮ್ಮಟ: 12–02–2020
ಸರಕಾರಿ ಪ್ರಥಮ ದರ್ಜೆ ಕಾಲೇಜು
ಬಾರಕೂರು, ಉಡುಪಿ ಜಿಲ್ಲೆ

**Bhasha Bharathi** - A Peer Reviewed Triannual Journal
**Issue 1, May - August 2020.**

**Chief Editor:** Ajakkala Girisha Bhat
**Editors:** M. S. Chaithra, S. Girijashankar, Ajjampura Manjunatha

**Published, Printed and Owned by:**
Ishwar K. Mirji,
Registrar, Kuvempu Bhasha Bharathi Pradhikara

**Printed at:**
Raja Printers
Pukhraj Layout, Bannergatta Road,
Bengaluru-560030.












ಕುವೆಂಪು ಭಾಷಾ ಭಾರತಿ ಪ್ರಾಧಿಕಾರ
ಕಲಾಗ್ರಾಮ, ಜ್ಞಾನಭಾರತಿ, ಬೆಂಗಳೂರು ವಿಶ್ವವಿದ್ಯಾಲಯ ಆವರಣ ಹಿಂಭಾಗ,
ಮಲ್ಲತ್ತಹಳ್ಳಿ, ಬೆಂಗಳೂರು - 560 056.